# ನರವೀರ ಕಾಸೀಮ.

(ಐತಿಹಾಸಿಕ ಕಾದಂಬರಿ)



ಕ ಹಾಗು ಪ್ರಕಾಶಕ:—

## ಭಿ. ಪ. ಕಾಳೆ



೧೯೩

೧ದದ
ಟಾ. { ಬೆಲೆ }

ದರೂ, ಅವನು ಯಾವನೊಬ್ಬ ಉಚ್ಚಪ್ರತಿಯ ಅಧಿಕಾರಿಯಿರುವ
ನೆಂದು ತಟ್ಟನೆ ಒಡೆದು ಕಾಣುವಷ್ಟು ಅವನ ಮುಖಚರ್ಯೆ-ವೇಷ-
ಭೂಷಣಗಳು ಭವ್ಯವಾಗಿದ್ದವೆಂದು ಹೇಳಿದರೆ ಸಾಕಾಗುವದು.

ಒಟ್ಟನ ಮೇಲೆ ಆ ಕುದುರೆಯ ಸವಾರನು— ಅಬ್ದುಲ್‌ರಹಿ
ಮಾನಖಾನನು—ಆ ಮೈದಾನಿನಲ್ಲಿ ನಡೆದಿರಲಿಕ್ಕೆ ಒಳ್ಳೇ ವಿಲಕ್ಷಣ
ವಾಗಿ ತೋರುತ್ತಿದ್ದನು ಆತನ ಹಿಂದೆ ಬರುತ್ತಿದ್ದ ಜನರ ರಕ್ಷಣೆ
ಮಾಡಲಿಕ್ಕೆ ಆತನೊಬ್ಬನೇ ಸಾಕೆಂದು ನೋಡುವವರಿಗೆ ಅನಿಸದೆ
ಇರುತ್ತಿರಲಿಲ್ಲ; ಆದರೂ ಆ ಜನರಲ್ಲಿ ಅವನೊಬ್ಬನೇ ಶಸ್ತ್ರಾಸ್ತ್ರಗಳನ್ನು
ಧರಿಸಿದವನಿದ್ದಿಲ್ಲ ಅವನಂತೆಯೇ ಕತ್ತಿ-ಕಠಾರಿಗಳನ್ನು ಹಿಡಿದು
ಕೊಂಡು ಸಾಗಿದ್ದ ಮತ್ತೆ ನಾಲ್ಕಾರು ಮಂದಿ ವೀರರು ಆ ಜನರಲ್ಲಿ
ದ್ದರು. ಅವರೆಲ್ಲ ಅಬ್ದುಲ್‌ರಹಿಮಾನನ ಸೇವಕರಾಗಿದ್ದರು ಆದರಿಂದ
ಅವರ ಕುದುರೆಗಳಾಗಲಿ, ಪೋಷಾಕಾಗಲಿ ಖಾನನಂತೆ ಭವ್ಯವಾಗಿ
ರಲಿಲ್ಲ ಆದರೂ ಅವರೆಲ್ಲರೂ ಖಾನನ ಹಾಗೆಯೇ ಶೂರರಿದ್ದರೆಂಬ
ಮಾತು ನಿರ್ವಿವಾದವಾಗಿತ್ತು.

ಆ ಸವಾರರ ಹಿಂದೆ ತುಸ ದೂರದಲ್ಲಿಯೇ ಒಂದು ಬುರುಕೆ
ಹಾಕಿದ ಮೇಣೆಯು ಸಾಗಿತ್ತು. ಆ ಮೇಣೆಯು ಬಹು ಭಾರವಾ
ಗಿರಬಹುದೆಂದು ತೋರುತ್ತಿತ್ತು; ಯಾಕಂದರೆ ಅದನ್ನು ಹೊರಲಿಕ್ಕೆ
ಇಬ್ಬರಲ್ಲ-ನಾಲ್ವರಲ್ಲ; ಹದಿನಾರು ಜನ ಬೋಯಿಗಳು ನಿಯಮಿಸಲ್ಪ
ಟ್ಟಿದ್ದರು. ಅವರು ಆಗಾಗ್ಗೆ ಹೆಗಲು ಬದಲು ಮಾಡಿ ಆ ಮೇಣೆಯನ್ನು
[illegible]ಕೊಂಡು ನಡೆದಿದ್ದರು. ಆ ಹ.ದಲಿನೊಳಗಿಂದ ಕಾಲು
[illegible] ಮೇಣೆಯನ್ನು ಹೊತ್ತೊಯ್ಯುವಾಗ ಅವ
[illegible]ೋಗಿತ್ತು. ಆ ಬೋಯಿಗಳ ಹಿಂದಿಂದೆ ಕೆಲವು
ನರು ನಡೆದಿದ್ದು, ಅವರು ಆ ಬೋಯಿ ಜನಂಗ ಉತ್ತೇಜನ
ಡುವ ದನಿಯಿಂದ ಒದರುತ್ತ ಸಾಗಿದ್ದರು; ಆದರೆ ಅವರ ಆ

ಉತ್ತೇಜನದ ಪ್ರಯತ್ನವು ಇನ್ನು ಎಳ್ಳಷ್ಟೂ ನಾಟುವಂತಿರಲಿಲ್ಲ. ಯಾಕಂದರೆ ಆ ಬೋಯಿಗಳು ಆಗ ತೀರ ದಣಿದಿದ್ದರು; ಆದರೆ ಮಾಡುತ್ತಾರೇನು? ಒಡೆಯನ ಆಜ್ಞೆಯು ಮೇರೆಗೆ ಅವರು ಬೀಳುತ್ತ-ಏಳುತ್ತ ಹೇಗಾದರೂ ನಡೆದಿದ್ದರು.

ಆ ಎಲ್ಲ ಜನರ ಹಿಂದೆ ಐದು ಒಂಟೆಗಳು ಸಾಲಾಗಿ ನಡೆದಿದ್ದವು. ಆ ಒಂಟೆಗಳ ಮೇಲೆ ಭಾರವಾದ ಗೋಣಿಗಳು ಹೇರಲ್ಪಟ್ಟಿದ್ದವು. ಮೊದಲೇ ಒಂಟೆಯು ನಡಿಗೆ! ಅದರಲ್ಲಿ ಈ ಪರಿ ಹುದಲಿನ ಮಾರ್ಗ! ಕೇಳುವದೇನು? ಅವುಗಳನ್ನು ಸಾಗಿಸಿಕೊಂಡು ಹೋಗುವವರ ಗಂಟಲಿಗೆ ಗಾಣವೇ ಬಂದಂತಾಗಿತ್ತು. ಆ ಒಂಟೆಗಳು ಬೇಸತ್ತು ಅರಲಲ್ಲಿ ಸಿಗಿಬಿದ್ದರೆ, ಅವುಗಳ ಭಾರವನ್ನು ಹೊರಲಿಕ್ಕೂ ಅವುಗಳನ್ನು ಎಬ್ಬಿಸಲಿಕ್ಕೂ ಸಹಾಯಕರಾಗಬೇಕೆಂದು ಆ ಒಂಟೆಯು ಸಾಲಿನ ಸಂಗಡ ಕೆಲ ಜನ ತಲೆ ಹೊರೆ ಹೊರುವ ಕೂಲೀ ಆಳುಗಳು ನಡೆದಿದ್ದರು; ಹಾಗು ಆ ಖಾನನ ಕೆಲವು ಜನ ಅಡಿಗೆ-ನೀರಿನಂಥ ಕೀಳುತರದ ಹೋರೆಯು ನೌಕರರು ಸಣ್ಣ ಪುಟ್ಟ ತಟ್ಟುಕುದುರೆ ಮೇಲೆ ಕುಳಿತು ಒಳ್ಳೇ ಜಂಬದಿಂದ ನಡೆದಿದ್ದರು. ಆಗ ಸೂರ್ಯಾಸ್ತವಾಗಿ ಕತ್ತಲು ಬೀಳಹತ್ತಿದ್ದು, ಅದು ಕ್ಷಣಕ್ಷಣಕ್ಕೆ ಭೀಕರವಾಗುತ್ತಲಿತ್ತು. ಆದರೂ ಅವರಲ್ಲಿಯು ಪ್ರತಿಯೊಬ್ಬನು ತನ್ನ ಸಂಗಡಿಗರಿಗೂ, ಕುದುರೆ ಮೊದಲಾದ ವಾಹನಗಳಿಗೂ ಬೇಗಬೇಗನೆ ಕಾಲಿಕ್ಕಲಿಕ್ಕೆ ಶಕ್ಯವಿದ್ದಷ್ಟು ಉತ್ತೇಜನ ಕೊಡುತ್ತಲೇ ಸಾಗಿದ್ದನು.

ಇಲ್ಲಿಯು ವರೆಗೆ ಆ ಜನರ ಬಾಹ್ಯದೃಶ್ಯದ ವರ್ಣನೆಯಾಯಿತು ಆದರೆ ಅವರು ಯಾರು? ಎಲ್ಲಿಯುವರು? ಎಲ್ಲಿಗೆ ಸಾಗಿರುವವರು ಎಂಬದನ್ನು ತಿಳಕೊಳ್ಳಲಿಕ್ಕೆ ಅವರು ತಮ್ಮ ತಮ್ಮೊಳಗೆ ನಡೆಸಿರು ಸಂಭಾಷಣವನ್ನೇ ಕೇಳಿಕೊಳ್ಳಬೇಕಾಗುವದು. ಆ ಸಂಗತಿಯು ತಿಳಕೊಳ್ಳಲಪೇಕ್ಷಿಸುವ ನಮ್ಮ ವಾಚಕರು ಅದೇ ಮಾರ್ಗವ

ಅನುಸರಿಸಬೇಕು. ಅಗೋ, ಅತ್ತ ನೋಡಿರಿ; ಆ ಖಾನನ ಅಡಿಗೆ ಯುವನು ಏನೋ ಮಾತಾಡಹತ್ತಿರುವನು. ಅದನ್ನೇ ನಾವು ಕೇಳಿ ಕೊಳ್ಳೋಣ ನಡೆಯಿರಿ.

ಒಂದು ಟೊಣಪ ತಟ್ಟು ಕುದುರೆಯ ಮೇಲೆ ಕುಳಿತಿದ್ದ ಖಾನನ ಅಡಿಗೆಯವನು:—"ಅಲ್ಲಾ! ಅಲ್ಲಾ!! ಈ ಝುಲಫೀಕರನಿಗೆ ಇಂಥ ಈ ಭಯಂಕರ ಮಳೆಗಾಲದಲ್ಲಿ ಹೈದರಾಬಾದ ಬಿಟ್ಟು ಬರುವ ಬುದ್ಧಿಯನ್ನೇಕೆ ಕೊಟ್ಟೆ? ಛೇ ನಿನ! ಓ ಮೌಲಾಲಿ, ಖುದಾ ವಂದ! ನಮ್ಮನ್ನು ಈ ಹುದಲೊಳಗಿಂದ ಯಾವಾಗ ಪಾರು ಮಾಡು ವಿಯೋ ತಿಳಿಯದು. ಈಗ ಮತ್ತೆ ಮಳೆ ಹತ್ತದಿದ್ದರೆ ಸಾಕು! ಮೊದಲೇ ನಮ್ಮ ಕುದುರೆಗಳು ನಡೆಯಲೊಲ್ಲವು. ಅದರಲ್ಲಿ ದೂರಿನ ದಾರಿಯು. ಮಧ್ಯರಾತ್ರಿಯ ಮುಂಚೆ ನಾವೇನಾದರೂ ನಮ್ಮ ಠಾಣ್ಯಕ್ಕೆ ತಲುಪುವೆವೋ? ಅಥವಾ ಈ ಅರಲಲ್ಲಿಯೇ ನಮ್ಮ ಠಾಣ್ಯವಾಗುವದೋ, ಯಾರು ಬಲ್ಲರು? ಛೇ! ಇಂಥ ಪ್ರವಾಸ ವನ್ನು ಇನ್ನೆರಡು ದಿನ ಮಾಡುವ ಪ್ರಸಂಗ ಬಂದರೆ, ನಾವು ಬದುಕಿ ಉಳಿಯುವ ಆಶೆಯೇ ಬೇಡ. ಇಡಿ ಜಗತ್ತಿನೊಳಗಿನ ಹುದುಲೆಲ್ಲ ಒಟ್ಟುಗೂಡಿ ಬಂದು ಈ ನಮ್ಮ ದಾರಿಯಲ್ಲಿಯೇ ಬಿದ್ದಿರಲಿಕ್ಕಿಲ್ಲವಷ್ಟೇ? ಯಾಕೋ ದಾವಲಸಾ, ಜೀವದಿಂದಿರಲಿಕ್ಕೆ ನಾವು ನಮ್ಮ ಆ ಮುಂದಿನ ಠಾಣ್ಯಕ್ಕೆ ತಲುಪಬಹುದೇನೋ? ಬಾಕಪ್ಪಾ ಸಾಕು; ಈ ನರಕಯಾತನೆಯ ಪ್ರವಾಸವು ಇಂದಿಗೆ [illegible]ವಕ್ಕೇ ಜೀವಂತ ನರಕವಾಸವೆನಬೇಕು. ಯಾಕೋ [illegible]ಾತಾಡಲಿಕ್ಕೆ ಬಾಯಿಯೇ ಇಲ್ಲೇನು? ಹೊರಡುವಾಗ ನೀನಂದಿದ್ದಯಲ್ಲವೇ, ನನಗೆ ಈ ದಾರಿಯು ಚೆನ್ನಾಗಿ ಪರಿಚಯ ವಾಗಿದೆಯೆಂದು. ಯಾಕೆ, ಈಗ ಮಾತೇ ಏಳಲೊಲ್ಲವು?" ಎಂದು ಕೂಗಲು,

"ಎಲೇ, ಹೌದು. ನನಗೆ ಈ ಪ್ರದೇಶದ ಮಾಹಿತಿಯು ಚೆನ್ನಾಗಿಯೇ ಇರುತ್ತದೆ. ಅಂಜುಬರುಕ ಹೆಣ್ಣೇ, ಕೈಯಲ್ಲಿ ಬಳೆಗಳನ್ನಾದರೂ ಇಟ್ಟುಕೊಳ್ಳಬಾರದೇ? ಮಗನೇ, ನನ್ನೆದುರಿಗೆ ಹೀಗೆ ಅತ್ತು ಆಗಬೇಕಾಗಿದೆ? ಖಾನಸಾಹೇಬರ ಮೆಹೆರಬಾನಿಗೆಯಿಂದಗೆ ಇಂಥ ಟೊಣಪ ತಟ್ಟುವಾದರೂ ದೊರೆತಿರುವದು ಮಗನೇ, ನಿನ್ನ ಮೇಲೆ ಪೈಗಂಬರರ ಕೃಪೆಯೇ ಎಂದು ತಿಳಿ. ಝುಲಪ್ಯಾ. ಇನ್ನು ಹೀಗೆ ಆಕ್ರೋಶ ಮಾಡಿ ಫಲವೇನು? ಖಾನ ಸಾಹೇಬರು ಆ ಆದವಾನೀ ಕೋಟೆಯೊಳಗೇ ಇಂದು ಮುಕ್ಕಾಮು ಮಾಡಲಿಕ್ಕೆ ಹೇಳಿದ್ದರೆ, ಈ ಸಂಕಟವು ನಿನಗೆಲ್ಲಿ ಪ್ರಾಪ್ತವಾಗುತ್ತಿತ್ತು? ಆದರೆ ಧಣೀರ ಇಚ್ಛೆಯಂತೆ ನಡೆಯುವದು ನಮ್ಮ-ನಿಮ್ಮ ಕೆಲಸ ವಲ್ಲವೇ? ಮಗನೇ, ಖಾನಸಾಹೇಬರು ತಮ್ಮ ಬೀಬೀಸಾಹೇಬರನ್ನು ಕೂಡ ಇಂಥ ವೇಳೆಯಲ್ಲಿ ಸಾಗಿಸಿರಲು, ನಮ್ಮ-ನಿಮ್ಮ ಪಾಡೇನು? ಹುಚ್ಚ........ಮಗನೇ, ಉಪ್ಪುಂಡವರ ಚಾಕರಿ ಮಾಡುವ ಪ್ರಸಂಗ ಬಿದ್ದಾಗ ಹೀಗೆ ಕಿರಿ-ಕಿರಿ ಮಾಡುವದೇಕೆ? ನೀನು ಮತ್ತೆಗೆ ನುಡಿಯಬೇಕಾದರೆ ಬಹು ಎಚ್ಚರದಿಂದ ನುಡಿ. ನಾವು ನಿನ್ನ ಅಂಜುಬುರುಕ ಮಾತು ಕೇಳಬೇಕೋ, ನಮ್ಮ ದಾರಿಯ ಕಡೆಗೆ ಲಕ್ಷ್ಯಕೊಡಬೇಕೋ?" ಎಂದು ಸಂಗಡಿಗನಾದ ದಾವಲ್‌ಸಾಹೇಬನು ಝುಲಫೀಕರಿನಿಗೆ ಬೆದರಿಕೆ ಹಾಕಲು, ಆತನು ಸುಮ್ಮನೆ ನಡೆದನು.

ಆದರೆ ಆ ವಾಚಾಳಪಂತನಿಂದ ಬಹಳ ಹೊತ್ತು ಸುಮ್ಮನೆ ನಡೆಯುವದು ಹೇಗಾಗಬೇಕು? ಕೆಲ ಹೊತ್ತಿನಲ್ಲಿ ಆ ಝುಲಫೀಕರನು ಮತ್ತೆ:—ದಾವಲ್‌ಸಾಬಾ, ನೀನು ಏನೇ ಹೇಳು. ನಾವು ಸುರಕ್ಷಿತವಾಗಿ ಇಂದು ನಮ್ಮ ಠಾಣ್ಯವನ್ನು ಸೇರಲಾರೆವೆಂದು ನನ್ನ ಮನೋದೇವತೆಯು ನನಗೆ ಸೂಚಿಸುತ್ತದೆ. ಒಂದುವೇಳೆ ಹೋದರ ಒಂದು ಸಣ್ಣ ಹಳ್ಳಿಗೆ ಹೋಗಬಹುದು; ಅಲ್ಲಿ ಮದ್ಯ-ಮಾ

# ನರವೀರ ಕಾಸೀಮ.

## ಸಂಕಟದ ಸಿದ್ಧತೆ.



ದವಾನೀ ಕೋಟೆಯು ದಕ್ಷಿಣ ದಿಕ್ಕಿನಲ್ಲಿರುವ ವಿಸ್ತೃತ ವಾದ ಮರುಭೂಮಿಯಲ್ಲಿ ದಾರಿ ನಡೆ-ನಡೆದು ಬೇಸತ್ತಿದ್ದ ಕೆಲವು ಜನರು ಮಂದಗತಿಯಿಂದ ಸಾಗಿದ್ದರು. ಆಗ ಆ ವಿಶಾಲವಾದ ಮರುಭೂಮಿಯೆಲ್ಲ ಬೆಣ್ಣೆಯಂಥ ಮೆತ್ತನ್ನ ಹುದಲಿನಿಂದ ತುಂಬಿತ್ತೆಂದು ತಿಳಿಸಿ ಬಿಟ್ಟರೆ, ಆ ಜನರು ಅಷ್ಟು ಸಾವಕಾಶವಾಗಿ ಏಕೆ ಸಾಗಿದ್ದರೆಂಬದನ್ನು ಹೇಳುವ ಕಾರಣವುಳಿಯುವದಿಲ್ಲ. ಆ ಜನರಲ್ಲಿ ಎಲ್ಲಕ್ಕೂ ಮುಂದೆ ಒಬ್ಬ ಹುರಿಕಟ್ಟಿನ ಶರೀರದ ಗೃಹಸ್ಥನು ನಡೆದಿದ್ದನು. ಆತನು ಸರಾಸರಿ ಐವತ್ತು ವರ್ಷ ವಯಸ್ಸುಳ್ಳವನಾಗಿರಬಹುದು. ಬಹು ದೊಡ್ಡ ಹಾಗು ತೇಜಸ್ವಿಯಾದ ದಕ್ಷಿಣ ದೇಶದ ಒಂದು ಕುದುರೆಯ ಮೇಲೆ ಕುಳಿತಿದ್ದರೂ, ಆತನೂ ಅವನ ಕುದುರೆಯೂ ಅಂದು ಮಲಿನ ಮುಖರಾಗಿ ತೋರುತ್ತಿದ್ದರು. ಯಾಕಂದರೆ, ಅಂದು ಮಧ್ಯಾಹ್ನ ಆರು ತಾಸಿನ ಮೊದಲು ಅವರು ಆ ಕೆಸರ ದಾರಿಯನ್ನು ತುಳಿಯ ಹತ್ತಿದ್ದರು. ಹುದಲೊಳಗಿಂದ ನಡೆಯುವಾಗ ಎಷ್ಟು ಶ್ರಮವಾಗುವದೆಂಬದು ಪಟ್ಟಣ ನಿವಾಸಿಗಳಿಗೆ ಗೊತ್ತಿರದಿದ್ದರೂ, ಹಳ್ಳಿ-ಪಳ್ಳಿಗಳ ನಿವಾಸಿಗಳಿಗೆ ಬರೆದು ತಿಳಿಸುವ ಕಾರಣವಿಲ್ಲ. ಆ ದಣುವಿನ ಯಥಾರ್ಥ ಜ್ಞಾನದ ವರ್ಣನೆ ಮಾಡಿ, ವಾಚಕರ ಮನಸ್ಸನ್ನು ರಂಜನ ಮಾಡುವದು ಅಸಾಧ್ಯವಾದ ಕೆಲಸವೇ ಸರಿ. ಆ ಸರದಾರನ ಆ ತೇಜಃಪುಂಜ ಕುದುರೆಯು ದಣಿದು ದಣಿದು ಹಣ್ಣಾಗಿ ಹೋಗಿತ್ತು. ಅದರ ಕಾಲುಗಳು ಮೊಳಕಾಲ

ವರೆಗೆ ಕೆಸರೊಳಗೆ ಸಿಗುತ್ತಿದ್ದವು; ಆದರೂ ಆ ಪ್ರಾಣಿಯು ಬಹು ಜಾಣವಿತ್ತಾದ್ದರಿಂದ, ಶಕ್ಯವಿದ್ದಷ್ಟು ಹೆಣಗಿ ತೀರ ಕಡಿಮೆ ಹುದಲಿನೊಳಗಿಂದಲೇ ಮಾರ್ಗ ತೆಗೆಯುತ್ತಿತ್ತು. ಆ ಕುದುರೆಯ ಯಜಮಾನನ ವೈಮೇಲೆ ಎಷ್ಟು ಕಡೆಗೆ ಕೆಸರು ಸಿಡಿದಿತ್ತೆಂಬದರ ಲೆಕ್ಕವೇ [illegible]ರಲಿಲ್ಲ.

ಆ ಐವತ್ತು ವರ್ಷ ವಯಸ್ಸಿನ ಗೃಹಸ್ಥನು ಬಿಸಿಲ ತಾಪವಾಗಬಾರದೆಂದು ತನ್ನ ತಲೆಯನ್ನು ಮುಖಮಲಿನ ವಸ್ತ್ರದಿಂದ ಚನ್ನಾಗಿ ಕಟ್ಟಿಕೊಂಡಿದ್ದನು; ಆ ವಸ್ತ್ರವು ಎಷ್ಟು ನಯನಮನೋಹರವಾಗಿದ್ದಿತೋ, ಆ ಸರದಾರನ ಮುಖಮಂಡಲವು ಅಷ್ಟೊಂದು ಮನೋಹರವಾಗಿರಲಿಲ್ಲ. ಆತನು ಕಪ್ಪು ವರ್ಣದವನಿದ್ದು, ನೊಸಲ ಮೇಲೆ ಆಳವಾಗಿ ನಟ್ಟಿದ್ದ ವೈಲಿಯ ಕಲೆಗಳಿದ್ದವು; ಆದರೆ ಆತನ ದೃಷ್ಟಿಯು ಮಾತ್ರ ಹಳ್ಳೀ ತೀಕ್ಷ್ಣವಾಗಿತ್ತು. ಆತನ ಕಣ್ಣುಗಳು ವಿಶಾಲ [illegible]ದ್ದು, ಹಳ್ಳೀ ಕಪ್ಪಾಗಿದ್ದವು ದಾರಿಯ ದಣುವಿನಿಂದ ತ್ರಸ್ತನಾಗಿದ್ದ ಆತನು, ಕುದುರೆಯು ಎಲ್ಲಿಯಾದರೂ ಹಿಮ್ಮೆ ಮುಕ್ಕರಿಸಿದಾಗ ಕಡಿವಾಣವನ್ನು ಜಗ್ಗಿ-ಜಗ್ಗಿ, ಆ ಕೆಸರ ದಾರಿಯನ್ನುದ್ದೇಶಿಸಿ ಬೆಯ್ಯುವಾಗ ಆತನ ಮುಖಚರ್ಯದ ಕ್ರೂರತೆಯು ಚನ್ನಾಗಿ ವ್ಯಕ್ತವಾಗುತ್ತಿತ್ತು. ಆತನು ಧರಿಸಿದ್ದ ಪೋಷಾಕು ಬಹು ಮೂಲ್ಯವಾಗಿದ್ದರೂ, ಅಂದಿನ ಪ್ರವಾಸದೊಳಗಿನ ಕೆಸರಿನ ಸಿಡಿಕಿನಿಂದ ಅದು ಕೆಲಸಕ್ಕೆ ಬಾರದಾಗಿತ್ತು. ಆದರೂ ಆತನು ಮಾರ್ಗದೊಳಗಿನ ಯಾ[illegible]ದೊಂದು ಹಳ್ಳಿಯಲ್ಲಿ ಪ್ರವೇಶಿಸುವಾಗ ಆತನ ಪೋಷಾಕಿನ ರೀ[illegible]ಯಿಂದಲೇ ಅಲ್ಲಿಯ ಜನರಿಗೆ ಇವನು ಯಾವನೊಬ್ಬ ಸರದಾರನಾಗಿ[illegible] ಬಹುದೆಂದು ಸಹಜವಾಗಿ ತಿಳಿದು ಬರುತ್ತಿತ್ತು. ಮನುಷ್ಯನಲ್ಲಿ ದ್ರವ್ಯದ ನಿಧಿಯು ಎಷ್ಟಿದ್ದರೂ, ಅದಕ್ಕಿಂತ ಅಧಿಕಾರದ ದರ್ಪವು ವಿಶೇಷಪ್ರಕಾರದ್ದಾಗಿರುತ್ತದೆ ಆ ಸರದಾರನನ್ನು ದೂರಿಂದ ನೋ[illegible]

ಗಳಾಗಲಿ, ಕುರಿ-ಕೋಳಿಗಳಾಗಲಿ ಭೋಜನಕ್ಕೆ ಸಿಗಲಾರವು. ಹಿಂಡಿ-
ರೊಟ್ಟಿಯಾಗಲಿ, ಅಕ್ಕಿಯ ಗಂಜಿಯಾಗಲಿ ಸಿಗಲಿಕ್ಕೇ ಸಾಕು-ಸಾಕಾ
ದೀತು. ಇಷ್ಟು ದಣಿದವರಾದ ನಮಗೆ, ಆ ತರದ ರುಕ್ಷಕೂಳಿನಿಂದೇ
ನಾಗಬೇಕು? ಎನ್ನಲು, "ಥೂ ನಿನ್ನ ಮೋರೆಗೆ ಬೆಂಕೀ ಹಚ್ಚಲಿ!
ಝುಲಪ್ಯಾ, ನಿನ್ನಂಥ ಕೂಳಬಕ್ಕನನ್ನು ನಾನೆಲ್ಲಿಯೂ ನೋಡಲಿಲ್ಲ
ನೋಡು; ನೀನು ನಿಜವಾದ ದಂಡಾಳುವಾಗಿದ್ದರೆ ನಿನ್ನ ಬಾಯಿಂದ
ಇಂಥ ಹೇಡಿ ಮಾತುಗಳೇ ಹೊರಡುತ್ತಿರಲಿಲ್ಲ. ಎಲೇ ಮಗನೇ,
ಮೂರು-ಮೂರು ನಾಲ್ಕು-ನಾಲ್ಕು ದಿನಗಳ ಉಪವಾಸದ ನಂತರ
ಒಂದು ಒಣರೊಟ್ಟಿಯ ತುಣುಕಾಗಲಿ, ಹಿಡಿ ಹಳಸಿದ ಅನ್ನವಾಗಲಿ
ಸಿಕ್ಕರೆ, ದಂಡಾಳುಗಳಿಗೆ ಅದೇ ಅಮೃತವಾಗಿ ತೋರುವದು. ಇಂಥ
ಪ್ರಸಂಗಗಳು ಒಂದೆರಡು ಸಾರೆಯಾದರೂ ನಿನಗೆ ಬಂದರೆ, ಕ್ಯಾಂಬೇ-
ಕ್ಯಾಂ; ನಿನ್ನ ಗತಿಯೇನಾದೀತು?" ಎಂದು ನಾಸರಖಾನನೆಂಬ
ಮತ್ತೊಬ್ಬ ಸಿಪಾಯಿಯು ಝುಲಫೀಕರನಿಗೆ ಚೇಷ್ಟೆಯಿಂದ ಅಂದನು.

"ನಾಸರ, ಮಾಫ ಕರೋ-ಮಾಫ ಕರೋ. ಇನ್ನು ಒಂದು
ಶಬ್ದ ಕೂಡ ಆ ಬಗ್ಗೆ ನುಡಿಯಬೇಡ. ಮೊದಲೇ ನನ್ನ ಹಾಹಾಕಾರ
ಹತ್ತಿದೆ. ಅದರಲ್ಲಿ ನಿನ್ನ ಈ ತರದ ಭಾಷಣವನ್ನು ಕೇಳಿ, ನನ್ನ
ಹೊಟ್ಟೆಯೊಳಗೆ ಡೊಂಬರೇ ಆಟಹತ್ತಿರುತ್ತಾರೆ. ಮಧ್ಯಾಹ್ನದಲ್ಲಿಯೇ
ಒಂದಿಷ್ಟು ಗೋದೀ ಹಿಟ್ಟಿನ ಚೊಂಗಗಳನ್ನು ಮಾಡಿ ತರಲಿಕ್ಕೆ ನನ
ಗಿಂದು ಏಕೆ ಮರವಾಯಿತೋ. ಯಾರಿಗೆ ಗೊತ್ತು? ಉಪವಾಸ
ಬೀಳುವದೆಂದರೆ ನನ್ನ ಮೈ ಮೇಲೆ ಮುಳ್ಳು ಏಳುತ್ತವೆ. ರಮಝಾ
ದ ಒಂದೊತ್ತನ್ನು ಕೂಡ ನಾನು ಸ್ವತಃ ಮಾಡದೆ, ಮಂದಿಗಾರಿ
ಾದರೂ ದುಡ್ಡು ಕೊಟ್ಟು ಅವರಿಂದ ಮಾಡಿಸುತ್ತಿರುತ್ತೇನೆ. ಸರ
ರದಿಗಾರ! ನನ್ನನ್ನು ಆ ಬಗ್ಗೆ ಕ್ಷಮಿಸು. ನಾನು ಈಗ ಅಲ್ಲಾ
ನ್ನು ಕುರಿತು ಪ್ರಾರ್ಥಿಸುವದೇನಂದರೆ, ಈಗಲೆ ಎಲ್ಲಿಯಾದರೂ

ಬೀಡು ಬಿಡುವ ಬುದ್ಧಿಯನ್ನು ನಮ್ಮ ಖಾನಸಾಹೇಬರಿಗೆ ದಯಮಾಡಿ ಕೊಡು. ಯಾ ಅಲ್ಲಾ, ಯಾ ಖುದಾ, ಕ್ಯಾ ಏ ಪೇಟಕಾ ಗತ ಹೋಗಯಾ ದೇಖೊ!"

ಈ ಪ್ರಕಾರ ಆ ಸೇವಕರ ಭಾಷಣವು ನಡೆದಿರಲು, ಎಲ್ಲಕ್ಕೂ ಮುಂದೆ ಸಾಗಿದ್ದ ಅಬ್ದುಲ್‌ರಹಿಮಾನಖಾನನು ತನ್ನ ಕುದುರೆಯನ್ನು ಒಮ್ಮೆಲೆ ನಿಲ್ಲಿಸಿದನು. ಆಗ ಕಾರ್ಗತ್ತಲೆಯು ತನ್ನ ಸಾಮ್ರಾಜ್ಯವನ್ನು ಸ್ಥಾಪಿಸುವ ಉದ್ಯೋಗ ನಡಿಸಿತ್ತು. ಈಶಾನ್ಯದಿಕ್ಕಿನ ಕಡೆಗ ಒಂದೆರಡು ಚಿಕ್ಕ ಮೋಡಗಳು ತಲೆದೋರಹತ್ತಿದ್ದವು. ಪರಕ್ಷಣದಲ್ಲಿ ಅವುಗಳೊಳಗಿಂದ ಮಿಂಚು ಪ್ರಕಾಶಮಾನವಾಯಿತು ಕ್ಷಣ-ಕ್ಷಣಕ್ಕೆ ಆ ಮೋಡಗಳ ಆಕಾರವು ಹೆಚ್ಚಾಗುತ್ತ ನಡೆದು, ಗುಡುಗು-ಮಿಂಚುಗಳ ಆರ್ಭಟಕ್ಕೆ ಪ್ರಾರಂಭವಾಯಿತು. ಆಗಿನ ಆ ಸ್ಥಿತಿಯನ್ನು ಕಂಡು ಎಂಥ ಎದೆಗಾರ ಮನುಷ್ಯನಿದ್ದರೂ, ಮುಂದೆ ಹೋಗಬೇಕೋ-ಹೋಗಬಾರದೋ? ಎಂಬ ಬಗ್ಗೆ ಅವನಲ್ಲಿ ಅನುಮಾನವುಂಟಾಗದೆ ಇರುತ್ತಿರಲಿಲ್ಲ. ಒಂದುವೇಳೆ ರಾಜಮಾರ್ಗವಾಗಿದ್ದರೆ, ಅವನ ಆ ಅನುಮಾನಕ್ಕೆ ಸ್ವಲ್ಪಾದರೂ ತಡೆಯುಂಟಾಗುತ್ತಿತ್ತು; ಆದರೆ ಇನ್ನು ಮುಂದಿನ ದಾರಿಯು ಈ ಮೊದಲಿನ ದಾರಿಗಿಂತ ಹೆಚ್ಚು ಕರ್ದಮಮಯವಾಗಿತ್ತು ಮುಂದಿನ ದಾರಿಯು ಹೇಗಿದೆ? ಎತ್ತ ಕಡೆಯಿಂದ ಹೋದರೆ ಪ್ರವಾಸಿಕರಿಗೆ ಅಷ್ಟೊಂದು ತ್ರಾಸವಾಗಲಿಕ್ಕಿಲ್ಲ? ಎಂಬದನ್ನು ತಿಳಿಯುವದಕ್ಕಾಗಿ ನಡೆದಿದ್ದ ಆ ದಂಡಾಳುಗಳ ಮುಂದಾಳುವು, ದಾರಿ ಸಿಗದೆ ಚಡಪಡಿಸುತ್ತಿರುವದು ಆ ಖಾನನಿಗೆ ಕಂಡು ಬರಲು, ತಾವು ಮುಂದೆ ಹೇಗೆ ಹೋಗಬೇಕೆಂ ಆಲೋಚನೆಯು ಆತನಲ್ಲಿ ಉದ್ಭವಿಸಿದುದು ಆಶ್ಚರ್ಯವಲ್ಲ!

ಮೇಲೆ ಹೇಳಿದಂತೆ ಖಾನನು ತನ್ನ ಕುದುರೆಯನ್ನು ಒತ್ತಟ್ಟ ನಿಲ್ಲಿಸಿ, ತನ್ನ ಮನಸ್ಸಿನಲ್ಲಿಯೇ ಹೀಗೆ ವಿಚಾರ ಮಾಡತೊಡಗಿದನು.

"ನನ್ನಂಥ ಮೂರ್ಖನು ಈ ಜಗತ್ತಿನೊಳಗೆ ಮತ್ತಾರೂ ಇರಲಿಕ್ಕಿಲ್ಲ. ನಾನು........ಮಗನು ಅದವಾನಿಯ ಸುರಕ್ಷಿತವಾದ ಕೋಟೆಯನ್ನು ಬಿಟ್ಟು, ಇಂದು ಅಪರಾಹ್ನಕಾಲದಲ್ಲಿ ಹೊರಡಬೇಕೇಕೆ? ಇನ್ನು ಆ ಬಗ್ಗೆ ಹಳಿದುಕೊಂಡು ಪ್ರಯೋಜನವೇನು? ಅಮೀರ, ಇಂದು ನಿನಗೆ ಬಹಳ ತ್ರಾಸವಾಯಿತು. ನೀನು ಬಹಳ ದಣಿದಿರುವಿಯೆಂಬದು ನನಗೆ ಗೊತ್ತಿದೆ; ನೀನು ಮೂಕಪ್ರಾಣಿಯಾಗಿರುವದರಿಂದಲೇ ಈ ವರೆಗೆ ಕೊಂಚವೂ ತಕರಾರು ಮಾಡದೆ ನಡೆದಿರುವೆ, ಎಂದಂದು ಕೊಂಡು, ಖಾನನು ಆ ತನ್ನ ಪ್ರೀತಿಯ ಕುದುರೆಯ ಹೆಗಲ ಮೇಲೆ ಮಮತೆಯಿಂದ ಕೈಯಾಡಿಸಿದನು.

ಆ ಉಚ್ಚಪ್ರತಿಯ ಮೂಕಪ್ರಾಣಿಗೆ- ಕುದುರೆಗೆ- ತನ್ನ ಯಜಮಾನನ ಆ ಅಂತಃಕರಣಪೂರ್ವಕ ಮಾತಿನ ಅರ್ಥವು ತಿಳಿದಂತೆ ಅದು ಖೇಕರಿಸಿ, ಸಮ್ಮತಿಯನ್ನಿತ್ತಿತು. ಆಗ ಖಾನನು ತನ್ನ ಹಿಂದಿಂದೆ ಬರುತ್ತಿರುವ ಇಬ್ರಾಹಿಮನನ್ನು ಕುರಿತು:—ಏನೋ ಇಬ್ರಾಹಿಮಾ, ಸಮೀಪದಲ್ಲೆಲ್ಲಾದರೂ ಯಾವುದೊಂದು ಹಳ್ಳಿಯಿರುವಂತೆ ನಿನಗೆ ತೋರುವದೇನು?

"ಅಲ್ಲಾ ಜಾನೆ! ನಾನಂತೂ ಈ ಮಾರ್ಗದಿಂದ ಹಿಮ್ಮೆಯೇ ಬಂದಿದ್ದೆನು; ಆದರೆ ಆ ಮಾತಿಗೆ ಬಹಳ ವರ್ಷಗಳಾದವು. ಅದರಿಂದ ಖಾನಸಾಹೇಬ, ನನಗೆ ಆಗಿನ ನೆನಪು ಹೇಗೆ ಉಳಿಯಬೇಕು?"

"ನಿನ್ನ ಮಾತೇನೋ ನಿಜವು; ಆದರೆ ಈಗ ಅತ್ತ ನೋಡು. ಮಹಮ್ಮದ ರಸೂಲಿಲ್ಲಾ! ಆಗೋ ಆ ಮೋಡಗಳನ್ನು ನೋಡಿ ನನ್ನ ದೆಜೆಒಡೆದು ನೀರಾಗುವದು. ನಾವು ಬರೇ ಗಂಡಸರಿದ್ದರೆ, ಇಷ್ಟು ಂಜುವ ಕಾರಣವಿರಲಿಲ್ಲ; ಆದರೆ ನಮ್ಮ ಸಂಗಡ ಬೀಬೀಸಾಹೇಬ ರುವರಲ್ಲವೆ? ಆಕೆಗೆ ಈ ಭಯಂಕರ ಪ್ರಸಂಗದ ರೂಢಿಯಿಲ್ಲ; ದರೆ ಈಗ ಅವಳು ದಂಡಿನ ಮುಖ್ಯಸ್ಥನ ಹೆಂಡತಿಯಾಗಿರುವಳಾ

ದ್ದರಿಂದ ಆಕೆಗೆ ಇಂಥ ಪ್ರಸಂಗಗಳ ರೂಢಿಯಾಗಲೇಬೇಕು.''

“ಖಾನಸಾಹೇಬ, ಮೋಣೆಯು ತೀರ ಸಮೀಪಿಸಿತು. ಆ ಬೋಯಿ ಜನರಿಗೆ ಇತ್ತಣ ಮಾರ್ಗವು ಚನ್ನಾಗಿ ಗೊತ್ತಿರಬಹುದಾದ್ದರಿಂದ, ಅವರನ್ನು ಕೇಳಿ ಮುಂದೆ ಸಾಗಬೇಕು'' ಎಂದು ಮತ್ತೊಬ್ಬ ಸವಾರನು ನುಡಿದನು

“ಹೌದಲೇ-ಹೌದು. ಈ ಸಂಗತಿಯು ಈ ವರೆಗೆ ನನ್ನ ಲಕ್ಷ್ಯದಲ್ಲಿ ಕೂಡ ಬಂದಿರಲಿಲ್ಲ ನಮ್ಮಂಥ 'ಹಡೇ-ರಪ್' ಶಿಪಾಯಿಗಳಿಗೆ ಇಂಥ ಹೇತು-ಪೇಚುಗಳ ಧೋರಣವು ಎಲ್ಲಿಂದ ಬರಬೇಕು? ಅದಿರಲಿ ಅವರು ಇಲ್ಲಿಗೆ ಬಂದು ತುಸ ವಿಶ್ರಮಿಸಲಿ ಅವರ ವಿಚಾರದಿಂದ ಮುಂದಿನ ಆಲೋಚನೆಯನ್ನು ನಿರ್ಧರಿಸೋಣ'' ಎಂದಂದು, ಖಾನನು ಕುದುರೆಯಿಂದ ಇಳಿದನು

ಖಾನನು ಹೀಗೆ ಅನ್ನುವಷ್ಟರಲ್ಲಿ ಆ ಮೋಣೆಯು ತೀರ ಹತ್ತಿರಕ್ಕೆ ಬಂತು. ಖಾನನು ಅಧೀರತೆಯಿಂದ ಬೋಯಿಗಳಿಗೆ: “ಮುಂದಿನ ಹಳ್ಳಿಯು ಇಲ್ಲಿಂದ ಇನ್ನೆಷ್ಟು ದೂರವಿದೆ? ಆ ಊರು ಎಷ್ಟು ದೊಡ್ಡದಿದೆ? ಅಲ್ಲಿ ನಮ್ಮೆಲ್ಲರ ಬೀಡಾರಕ್ಕೆ ಅನುಕೂಲವಾಗುವದೋ-ಹೇಗೆ? ದಾರಿಯು ಹೇಗಿದೆ?'' ಇತ್ಯಾದಿ ಎಷ್ಟೋ ಪ್ರಶ್ನೆಗಳನ್ನು ಒಂದೇಸವನೆ ಕೇಳಿದನು

ಖಾನನ ಆ ಪ್ರಶ್ನೆಗಳಿಗೆ ಆ ಬೋಯಿಗಳ ಮುಖ್ಯಸ್ಥನು:— “ಹಜರತ್, ಈ ಮಾರ್ಗವು ಇಷ್ಟು ಕೆಟ್ಟಿರಬಹುದೆಂಬದು ನಮ್ಮ ಕನಸು-ಮನಸುಗಳಲ್ಲಿ ಕೂಡ ಬರಲಿಲ್ಲ. ಈ ದಾರಿಯು ಹೀಗೆ ಕೆಟ್ಟದೆಯೆಂಬದು ನಮಗೆ ಮೊದಲೇ ತಿಳಿದಿದ್ದರೆ, ಅದವಾನಿಯ ಕೂಯನ್ನು ಬಿಟ್ಟು ಹೊರಡಲು ನಾವು ನಿಮಗೆ ನಮ್ಮ ಸಲಹೆಯು ಕೊಡುತ್ತಿರಲಿಲ್ಲ; ಆದರೆ ಆ ಬಗ್ಗೆ ಈಗ ಹಳಹಳಿಸಿ ಪ್ರಯೋಜನವೇನು? ನಾವೆಲ್ಲರೂ ಇನ್ನು ಈ ಸಂಕಟಕ್ಕೆ ಸಿದ್ಧರಾಗಲೇಬೇ

ಇನ್ನು ಹಿಂದಿರುಗಿ ಅದವಾನಿಗೆ ಹೋಗುವ ಆಲೋಚನೆ ಕೂಡ ಮಾಡುವ ಹಾಗಿಲ್ಲ. ಯಾಕಂದರೆ ಅದವಾನಿಯು ಇಲ್ಲಿಂದ ಬಹು ದೂರ ಉಳಿದಿದ್ದು, ಅಲ್ಲಿಂದ ಇಲ್ಲಿಯ ವರೆಗೆ ನಡುವೆ ಒಂದು ಹಳ್ಳಿ ಕೂಡ ಇರುವದಿಲ್ಲೆಂಬದು ತಮಗೆ ಗೊತ್ತೇ ಇದೆ ಇಲ್ಲಿಂದ ಮುಂದೆ ಎರಡು ಹಳ್ಳಿಗಳಿವೆ. ಒಂದಂತೂ ಇಲ್ಲಿಂದ ಬಹು ಸಮೀಪ; ಇಗೋ, ಇತ್ತ ಕಾಣುವಂಥ ಈ ಗಿಡಗಳ ಗುಂಪಿನಲ್ಲಿಯೇ ಇರುತ್ತದೆ ಎರಡನೆಯದು ಇಲ್ಲಿಂದ ಒಂದು ಹರದಾರಿಯ ಮೇಲಿರುತ್ತದೆ ಬೀಬೀ ಸಾಹೇಬರು ಇನ್ನು ಕೆಲ ಹೊತ್ತು ಈ ಪ್ರವಾಸದ ತ್ರಾಸನ್ನು ಸಹಿಸಿದರೆ, ನಾವು ತುಸ ಹೊತ್ತಿನಲ್ಲಿಯೇ ಈ ಸಮೀಪದ ಹಳ್ಳಿಗೆ ತಲುಪುವೆವು. ಆ ಊರು ತಕ್ಕಮಟ್ಟಿಗೆ ದೊಡ್ಡದಿದೆ; ಸಂತೆ-ಪೇಟೆಗಳೂ ಇವೆ; ಆದರೆ ಖಾವಂದರು ಅಲ್ಲಿಗೆ ತಲುಪುತ್ತಲೇ ನಮಗೆ ಬಹು ದೊಡ್ಡ ಇನಾಮು ಕೊಡಲಿಕ್ಕೆ ಮಾತ್ರ ಮರೆಯಲಾಗದು'' ಎಂದು ಹೇಳಿದನು.

---

## ಯಾ ಅಲ್ಲಾ! ಯಾ ಖುದಾ!

ಅಲ್‌ಬತ್-ಅಲ್‌ಬತ್! ನಿಮಗೆ ಒಂದೇ ಏಕೆ, ನಾಲ್ಕು ಕುರಿಗಳನ್ನು ಇನಾಮಾಗಿ ಕೊಡುವೆನು; ಅಲ್ಲದೆ ಪ್ರತಿಯೊಬ್ಬನಿಗೆ ಐದೈದು ಹೊನ್ನುಗಳನ್ನೂ ಕೊಡುವೆನು, ಎಂದು ಖಾನನು ಆ ಬೋಯಿಗಳಿಗೆ ಅಭಯವನ್ನು ಕೊಟ್ಟು, ಆ ಮೇಣೆಯ ಹತ್ತರ ಹೋಗಿ:—''ಮೇರಿ ಜಾನ್! ಇನ್ನು ಸ್ವಲ್ಪ ಮುಂದೆ ಹೋದರೆ, ಅಲ್ಲಿ ನಮ್ಮ ಬೀಡಾರಕ್ಕೆ ಅನುಕೂಲವಾಗುವಂತಿದೆ. ಇಲ್ಲಿಯೇ ಉಳಿದರೆ, ತಿನ್ನಲಿಕ್ಕೆ ಕೂಡ ...ರಿಕ್ಕಿಲ್ಲ. ಇಷ್ಟೇ ಅಲ್ಲ; ಈಗ ಮತ್ತೆ ಬರಬಹುದಾದ ಮಳೆಯಲ್ಲಿ ...ಸ್ಸಿಕೊಳ್ಳಬೇಕಾದೀತು. ನೋಡಿದೆಯಾ, ದಂಡಿನ ಮುಖ್ಯಸ್ಥನ ...ಕ ಲಗ್ನವಾಗುವ ಸುಖದ ಮಾದರಿಯನ್ನು? ಎಂದು ಬೀಬಿಯನ್ನು ...ಕು ನುಡಿದನು.

ಆಗ ಬೀಬಿಯು:— ನನ್ನ ಬಗ್ಗೆ ತಾವು ಯತ್ಕಿಂಚಿತ್ತಾದರೂ ಚಿಂತಿಸಬಾರದು. ತಾವು ಏನು ಮಾಡಬೇಕೆಂದಿರುವಿರೋ, ಅದಕ್ಕೆ ನನ್ನ ಒಪ್ಪಿಗೆಯಿರುತ್ತದೆ.

ಖಾನನು:—ಹಾಗೇ ಆಗಲಿ. ನಾಯಕ, ನಿನ್ನ ಮತವೇನು? ಎಂದು ಬೋಯಿಗಳ ಮುಖ್ಯಸ್ಥನನ್ನು ಕುರಿತು ಪ್ರಶ್ನ ಮಾಡಲು,

"ಹುಜೂರ, ಈಗ ನಮಗೆ ಕ್ಷಣಕಾಲ ವಿಶ್ರಮಿಸಲಿಕ್ಕೆ ಆಜ್ಞೆ ದೊರೆಯಬೇಕು. ನಾವು ಸ್ವಲ್ಪ ತಲಬು ಮಾಡಿ, ಹಾ-ಹಾ ಅನ್ನು ವಷ್ಟರಲ್ಲಿ ಆ ಸಮೀಪದ ಊರಿಗೆ ನಿಮ್ಮನ್ನು ತಲುಪಿಸುತ್ತೇವೆ."

"ಅಚ್ಛಾ-ಅಚ್ಛಾ; ಆದರೆ ಸುಮ್ಮನೆ ತಡಮಾಡಬೇಡಿರಿ."

ಹೀಗೆ ಹುಕುಮು ದೊರೆತೊಡನೆ ಕೇಳುವದೇನು? ಎಲ್ಲರಿಗೂ ಬಹು ಸಂತೋಷವಾಯಿತು. ಅವರು ತಮ್ಮ ತಮ್ಮ ವಾಹನಗಳಿಂದ ಇಳಿದು ಒಟ್ಟುಗೂಡಿ, ಒತ್ತಟ್ಟಿಗೆ ಬೆಂಕೀ ಹೊತ್ತಿಸಿದರು. ಕೆಲವರು ಗುಡುಗುಡಿಯನ್ನೂ, ಕೆಲವರು ಚಿಲಿಮಿಗಳನ್ನೂ, ಬೇರೆ ಕೆಲವರು ಎಕ್ಕೆಯ ಎಲೆಯ ಬತ್ತಿಗಳನ್ನೂ ಸಜ್ಜು ಮಾಡಿ ಸೇದಹತ್ತಿದರು. ದಣಿದ ಜನರ ದಣುವಾರಿ ಅವರಲ್ಲಿ ಹೊಸ ಹುರುಪನ್ನುಂಟುಮಾಡು ವಂಥ, ಅಂಥ ಯಾವ ಸಂಜೀವಿನಿಶಕ್ತಿಯು ಆ ತಮಾಲಪತ್ರದಲ್ಲಿರು ವದೋ, ಅದಾರಿಗೆ ಗೊತ್ತು? ಬಹಳ ದಣಿದಾಗ ಬತ್ತಿಯನ್ನು ಸೇದಿ ದರೆ, ತಂಬಾಕು ಮಿಶ್ರಿತವಾದ ಎಲೆ-ಅಡಿಕೆ ಹಾಕಿದರೆ ಇಲ್ಲವೆ ನಾಶೀ ಪುಡಿಯನ್ನು ಏರಿಸಿದರೆ ಎಲ್ಲ ದಣುವು ಒಮ್ಮೆಲೆ ಕಡಿಮೆಯಾಗುವ ದೆಂದು ತಂಬಾಕದ ಚಟದವರಿಗನಿಸುತ್ತಿದೆ. ತುಸ ಹೊತ್ತಿನಲ್ಲಿಯೇ ಗುಡುಗುಡಿಯುವರ 'ಗುಡು-ಗುಡು' ಶಬ್ದವೂ, ಬತ್ತಿ ಸೇಗೇ 'ಸೊರ್-ಸೊರ್' ಶಬ್ದವೂ ಪ್ರಾರಂಭವಾದವು. ಈ ಪ್ರಕಾರ ಪ್ಪತ್ತು ಮಿನೀಟುಗಳ ವರೆಗೆ ಆ ಜನರೆಲ್ಲ ಸ್ವಾನಂದ ಸಾಮ್ರಾ ದಲ್ಲಿ ಮುಳುಗಿದ್ದರು. ಅಷ್ಟರಲ್ಲಿ ತಡವಾಯಿತೇಳಿರೆಂದು ಖಾ

ಗದ್ದರಿಸಲು, ಆ ಜನರು ತಮ್ಮ ತಮ್ಮ ದೇವರ ಹೆಸರನ್ನುಚ್ಚರಿಸುತ್ತ ಮಾರ್ಗಕ್ರಮಣಕ್ಕೆ ಪ್ರಾರಂಭಿಸಿದರು.

ತಲಬಿನಲ್ಲಿ ಆಸಕ್ತರಾದ ಅವರಾರ ಲಕ್ಷ್ಯವೂ ಆಕಾಶದ ಕಡೆಗೆ ಹೋಗಿರಲಿಲ್ಲ. ಮೊದಲು ಅವರಿಗೆ ಒಂದೆರಡು ಚಿಕ್ಕ ಮೋಡಗಳು ಈಶಾನ್ಯದಿಕ್ಕಿನ ಕಡೆಗೆ ಕಾಣಿಸುತ್ತಿದ್ದವು; ಆದರೆ ಈಗ ಕ್ಷಣಕ್ಷಣಕ್ಕೆ ಹೊಸ ಹೊಸ ಮೋಡಗಳುದ್ಭವಿಸಿ, ಆಕಾಶದ ಬಣ್ಣವು ಬದಲಾಗ ಹತ್ತಿತು ತುಸ ಹೊತ್ತಿನಲ್ಲಿಯೇ ಬಿರುಗಾಳಿಯೂ, ಭಯಂಕರ ಮಳೆಯೂ ಬರುವ ಲಕ್ಷಣಗಳು ತೋರಿದವು. ಕೋಲಮಿಂಚುಗಳು ಒಂದೇಸವನೆ ಮಿಂಚಹತ್ತಿದವು. ಸಿಡಿಲುಗಳಂತೂ "ಖಟ್‌ಖಟ್ ಖಡಲ್ಲೆ"ಂದು ಕರ್ಣಕಠೋರ ಶಬ್ದವೆಸಗಲಾರಂಭಿಸಿದವು. ಆಗಿನ ಆಕಾಶದ ಆ ಸ್ಥಿತಿಯನ್ನು ಪ್ರತಿಯೊಬ್ಬ ಮನುಷ್ಯನು ಕಣ್ಮುಟ್ಟ ನೋಡುತ್ತಿದ್ದರೂ, ಒಬ್ಬನೂ ಆ ಬಗ್ಗೆ ಪಿಟ್ಟೆಂದುಸುರದೆ, ಖಾನನ ಅಪ್ಪಣೆಯ ಮೇರೆಗೆ ಮಾರ್ಗವನ್ನು ಕ್ರಮಿಸುತ್ತಿದ್ದರು.

"ಯಾ ಅಲ್ಲಾ! ಇಂದಿನ ರಾತ್ರಿಯು ಭಯಂಕರವಾಗಿಯೇ ಪರಿಣಮಿಸುವದು" ಎಂದು ಖಾನನು ತನ್ನಷ್ಟಕ್ಕೆ ತಾನೇ ಅಂದು ಕೊಳ್ಳುತ್ತ ಕುದುರೆಯನ್ನು ವೇಗದಿಂದ ಬಿಟ್ಟನು. ಅಷ್ಟರಲ್ಲಿ ದಾವುದ ಸಾಬನು ಮುಂದೆ ಬಂದು ಖಾನನನ್ನು ಕುರಿತು:— "ಖಾನಸಾ ಹೇಬ, ಇಗೋ, ಇತ್ತ ಕಾಣುವ ಈ ಗಿಡಗಳ ಗುಂಪಿನಲ್ಲಿ ಕೆಲವು ಗುಡಿಸಲುಗಳು ಇರುತ್ತವೆ. ಮಿಂಚಿನ ಬೆಳಕು ಬಿದ್ದಾಗ ತಾವು ಅತ್ತ ನೋಡಿ ಖಾತ್ರಿ ಮಾಡಿಕೊಳ್ಳಬಹುದು ಈಗ ನಾವು ಅಲ್ಲಿಗೆ ಇಂದಿನ ರಾತ್ರಿಯನ್ನು ಅಲ್ಲಿಯೇ ಹೇಗಾದರೂ ಕಳೆಯು ಬೆಳಗಾದ ಬಳಿಕ ಮುಂದಿನ ವಿಚಾರ ಮಾಡಬಹುದು" ಅಂದನು.

'ಹಾಗೇ ಆಗಲಿ, ಅದಕ್ಕೆ ನನ್ನದೇನೂ ಅಡ್ಡಿಯಿಲ್ಲ. ದಾವುದ,

ನೀನು ಮುಂದಾಗು"ಎಂದು ಖಾನನು ಸಮ್ಮತಿಸಿದನು. ಅವರೆಲ್ಲರೂ ಆ ಗುಡಿಸಿಲುಗಳ ಕಡೆಗೇ ಸಾಗಿದರು. ಇಷ್ಟೊತ್ತಾದರೂ ಆಕಾಶದಲ್ಲಿ ಬರೇ ಗುಡುಗು-ಮಿಂಚುಗಳೂ, ಕಾರ್ಮೋಡಗಳೂ ತಲೆದೋರುತ್ತಿದ್ದವಲ್ಲದೆ, ಗಾಳಿಯು ಅಂಶವು ಕೂಡ ಸುಳಿಯುತ್ತಿರಲಿಲ್ಲ. ಆ ವಿಶಾಲವಾದ ಬೈಲಲ್ಲಿ ಅವರೆಲ್ಲರೂ ಮಾರ್ಗ ಕ್ರಮಿಸುತ್ತಿದ್ದರೂ, ವಾಯುವು ಆಕರ್ಷಿಸಲ್ಪಟ್ಟಿದ್ದರಿಂದ, ಹಗೆಯಲ್ಲಿಳಿದ ಮನುಷ್ಯನಿಗೆ ಎಷ್ಟು ತ್ರಾಸವುಂಟಾಗುವದೋ, ಅಷ್ಟು ತ್ರಾಸವು ಹವೆಯು ಅಭಾವದ ಮೂಲಕ ಆ ಪ್ರವಾಸಿಕರಿಗೆ ಆಗ ಆಗಹತ್ತಿತ್ತು. ಆ ಡೊಣಗೆನಾದ ಝುಲಫೀಕರನಂತೂ ತನ್ನ ಕರವಸ್ತ್ರದಿಂದ ಗಾಳೀ ಬೀಸಿಕೊಳ್ಳುತ್ತ:—ಅಲ್ಲಾ, ಅಲ್ಲಾ, ಇನ್ನು ತುಸ ಹೊತ್ತಿನಲ್ಲಿ ಸುಳಿಗಾಳಿಯಾದರೂ ಸುಳಿಯದಿದ್ದರೆ, ನನ್ನ ಪ್ರಾಣಗಳೇ ಹಾರಿ ಹೋಗುವವು, ಎಂದು ಅಳುಮೋರೆಯಿಂದ ನುಡಿದನು.

ಇಷ್ಟರಲ್ಲಿ ನೀರಿನ ಬಹು ದೊಡ್ಡ ಪ್ರವಾಹದ ಸಪ್ಪಳವು ಕೇಳಬರುವಂತೆ ಶಬ್ದವಾಗಹತ್ತಿತು. ಆಕಾಶದಲ್ಲಂತೂ ಎತ್ತ ನೋಡಿದರೂ ಕಾರ್ಮೋಡಗಳೇ ತುಂಬಿದ್ದವು! ತುಸ ಹೊತ್ತಿನಲ್ಲಿ ಅವೆಲ್ಲ ಒಟ್ಟುಗೂಡಿ ಕರೇ ಕೊಪ್ಪರಿಗೆಯನ್ನು ಡಬ್ಬ ಹಾಕಿದ ಹಾಗೆ ಅಖಂಡವಾದ ಒಂದೇ ಒಂದು ಕಪ್ಪು ಮೋಡವಾಗಿ ತೋರಿತು. ದಾವೂದ್‌ಖಾನನು ತೋರಿಸಿದ ಗುಡಿಸಿಲುಗಳನ್ನು ತಲುಪುವದಕ್ಕಾಗಿ ಆ ಜನರು ಒಳ್ಳೇ ಒತ್ತರದಿಂದ ನಡೆದರು; ಆದರೆ ಅವು ಇನ್ನು ಕಾಲುಮೈಲು ಅಂತರದ ಮೇಲಿದ್ದವು. ಏನು ತಿಳಿಯಿತೋ, ಯಾರು ಬಲ್ಲರು? ಕುದುರೆಗಳು ತಮ್ಮ ಮೂಗಿನ ಹೊರಳೆಗಳನ್ನು ಉಬ್ಬುಬ್ಬಿಸಿ [illegible]ಗಿ, ರಂಭಿಸಿದವು. ಕೆಲಕೆಲವು ಕುದುರೆಗಳಂತೂ ಭಯಸು[illegible] ದಂತೆ, ಒಂದು ಪ್ರಕಾರದ ಕರ್ಕಶದನಿಯಿಂದ ಖೇಕರಿ[illegible] ಪರಕ್ಷಣದಲ್ಲಿಯೇ ಕೆಂಧೂಳವಡಗಿತು. ಗಿಡಗಳ ಮೇ[illegible]

ಪಕ್ಷಿಗಳು ಕಿಲಿಬಿಲಿ ಶಬ್ದ ಮಾಡಿದವು. ಬಯಲು ಪ್ರದೇಶವಾದ್ದರಿಂ
ದಲೂ, ಮುಂಗಾರಿಯ ಮಳೆಯ ಕಾಲವಾದ್ದರಿಂದಲೂ ವಾಲುಕಾ
ಸ್ತಂಭಗಳು ಆಕಾಶದ ವರೆಗೆ ಹಬ್ಬಿ, ಮಿಂಚಿನ ಪ್ರಕಾಶದಲ್ಲಿ ಭಯಂ
ಕರವಾಗಿ ತೋರಹತ್ತಿದವು. ಆ ಬಿರುಗಾಳಿಯು ಈ ದಂಡಿನವರಿಗೆ
ತೀರ ಸಮೀಪಿಸಿತು. ಅದು ಬರುವಷ್ಟರಲ್ಲಿ ತಾವು ಆ ಗುಡಿಸಲುಗ
ಳನ್ನು ತಲುಪಿದರೆ, ಅಲ್ಲಾನ ಕೃಪೆಯೇ! ಎಂದು ಅವರೆಲ್ಲರೂ ಮನ
ದಲ್ಲಿ ಅಂದರು. ಆಗಿನ ಆ ಕಠಿಣಕಾಲದಲ್ಲಿ ಝುಲಪ್ಯಾನ ಅವಸ್ಥೆ
ಯನ್ನಂತೂ ಹೇಳಲಾಸಲ್ಲ.

ಬಿರುಗಾಳಿಯು ಭಯಂಕರವಾಗಿ ಬೀಸಲಾರಂಭಿಸಿತು. ಬಿರು
ಗಾಳಿ, ಕಾರ್ಮೋಡ ಹಾಗು ಮಿಂಚು ಇವುಗಳಿಂದ ಆ ರಾತ್ರಿಯಲ್ಲಿ
ಹೆಚ್ಚಾದ ಭೀಕರತೆಯು ಉಂಟಾಯಿತು. ಎದೆಗಾರರಾದ ಆ ಶಿಪಾ
ಯಿಗಳೂ ಆಗಿನ ಆ ಭಯಂಕರತೆಯನ್ನು ಕಂಡು ನಡುಗಿದರು.
ಖಾನನ ಬೀಬಿಯಾದ ಖಾನಮುಳಂತೂ ಆ ಭಯಂಕರಾವಸ್ಥೆಯನ್ನು
ಕಂಡು, ಹೌಹಾರಿ ಚಿಟ್ಟನೆ ಚೀರಿದಳು! ಆ ಚೀರುವಿಕೆಯನ್ನು ಕೇಳಿ
ಖಾನನು ಮೇಣೆಯ ಬಳಿಗೆ ಹೋಗಿ:— ಐ ಮೇರಿ ಗುಲಾಬಕಿ ಕಲೀ,
ನೀನು ಹೀಗೆ ಅಂಜಬೇಡ. ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ನಾವು
ನಮ್ಮ ಠಾಣ್ಯಕ್ಕೆ ತಲುಪುತ್ತೇವೆ, ಎಂದು ಹೆಂಡತಿಗೆ ಹೇಳಿ ಬೋಯಿ
ಗಳನ್ನು ಕುರಿತು:-ಎಲೋ, ಬೇಗಬೇಗನೆ ನಡೆಯಿರಿ. ಬಿರುಗಾಳಿಯು
ನಮ್ಮ ಕಡೆಗೆ ಬರುವಷ್ಟರಲ್ಲಿ ನೀವು ಈ ಮೇಣೆಯನ್ನು ಆ ಗುಡಿಸಿಲಿಗೆ
ತಲುಪಿಸಿದರೆ ನಿಮ್ಮಲ್ಲಿಯ ಪ್ರತಿಯೊಬ್ಬರಿಗೆ ಹತ್ತು-ಹತ್ತು ವರಹಗಳ
ಇನಾಮನ್ನು ಕೊಡುತ್ತೇನೆಂದು ಹೇಳಿ ಅವರನ್ನು ಹುರಿದುಂಬಿಸಿದನು.

ಬೋಯಿಗಳು ತಮ್ಮ ಶಕ್ತಿಮೀರಿ ವೇಗದಿಂದ ನಡೆಯಹತ್ತಿ
ದರು. ಆ ಗುಡಿಸಿಲುಗಳು ಇನ್ನು ಹಿಂದೇ ಹಿಂದು ಫರ್ಲಾಂಗಿನ
ಅಂತರದ ಮೇಲಿರಬಹುದು ಇಷ್ಟರಲ್ಲಿ ಬಹು ದೊಡ್ಡ ಬಿರುಗಾಳಿಯು

ಬೀಸಿ, ಧೋ-ಧೋ ಎಂದು ಮುಸಲಧಾರವಾದ ಮಳೆಯು ಸುರಿಯು ಹತ್ತಿತು. ಆದರೂ ಬೋಯಿಗಳು ಮಾರ್ಗವನ್ನು ಕ್ರಮಿಸುತ್ತಲೇ ಇದ್ದರು. ಅಷ್ಟರಲ್ಲಿ ಒಂದು ಸಿಡಿಲು ತೀರ ಸಮೀಪದಲ್ಲಿ ಬಡೆಯಿತು. ಅದರ ಪ್ರಕಾಶದಿಂದ ಎಲ್ಲರ ಕಣ್ಣುಗಳೂ ಕತ್ತಲುಗೂಡಿಸಿದವು. ಕುದುರೆಗಳೂ, ಒಂಟೆಗಳೂ ದಾರಿ ಕ್ರಮಿಸುವದನ್ನು ಬಿಟುಗೊಟ್ಟು, ಗಾಳಿಯ ಕಡೆಗೆ ಬೆನ್ನು ಮಾಡಿ ನಿಂತುಬಿಟ್ಟವು ಹೀಗೆ ಆ ಭಯಂಕರ ಮಳೆಯು ಒಂದೇಸವನೆ ಎರಡು ತಾಸುಗಳ ವರೆಗೆ ಸುರಿಯಿತು ಮಾರ್ಗದಲ್ಲಿ ಕೆಲವರಿಗೆ ಮೊಣಕಾಲಮಟ, ಕೆಲವರಿಗೆ ಟೊಂಕಮಟವಾಗಿ ನೀರು ಹರಿಯಹತ್ತಿತು. ಎತ್ತ ನೋಡಿದರೂ ನೀರೇ-ನೀರಾಗಿ ಕಾಣಹತ್ತಿತು. ಮುಂದೆ ಹೋಗದೆ ಬೋಯಿಗಳು ಸರತಿಯಂತೆ ಹೆಗಲು ಬದಲಿಸುತ್ತ ಮೇಣೆಯನ್ನು ಹೊತ್ತುಕೊಂಡು ನಿಂತಿದ್ದರು. ಮೇಣೆಯ ಕೆಳಭಾಗಕ್ಕೆ ಅಲ್ಪ-ಸ್ವಲ್ಪ ನೀರಿನ ಪ್ರವಾಹವು ಸೋಂಕಲಾರಂಭಿಸಿತು. ಇನ್ನು ತಾವೆಲ್ಲರೂ ಈ ನೀರಲ್ಲಿ ಮುಳುಗಿ ಸತ್ತು ಹೋಗುವೆವೆಂದು ಭಾವಿಸಿ, ಅವರೆಲ್ಲರೂ ದೇವರನ್ನು ಕುರಿತು ಪ್ರಾ-ರ್ಥಿಸತೊಡಗಿದರು.

ಅವರ ಆ ಆರ್ತಧ್ವನಿಯ ಪ್ರಾರ್ಥನೆಯು ದೇವರಿಗೆ ಕೇಳಿಸಿದ್ದರಿಂದಲೋ ಏನೋ-ಎಂಬಂತೆ, ತುಸ ಹೊತ್ತಿನಲ್ಲಿಯೇ ಮಳೆಯು ನಿಂತಿತು. ಆಕಾಶವು ಸ್ವಚ್ಛವಾಯಿತು. ಚಂದ್ರಪ್ರಕಾಶವು ಸುತ್ತುಮುತ್ತು ಬಿದ್ದು, ಹರಿಯುವ ನೀರಲ್ಲಿ ಅದರ ಸಾವಿರಾರು ಪ್ರತಿಬಿಂಬಗಳು ತೋರಹತ್ತಿದವು ಖಾನನು ಗುಡಿಸಿಲುಗಳನ್ನು ತೋರಿಸಲಿಕ್ಕೆ ಮುಂದಾಳುವಾಗಿ ನಡೆದಿದ್ದ ದಾವುದನನ್ನು ಕುರಿತ್ಕ [illegible]ಹತ್ತಿದನು. ದಾವುದನಿಂದ ಪ್ರತಿಶಬ್ದವೇ ಬರಲಿಲ್ಲ. ಕಡೆಗೆ ಮತ್ತೊಬ್ಬ ಸವಾರನನ್ನು ಕಳಿಸಿ, ದಾವುದನು ಎತ್ತ ಹೋದನೆಂಬ ಬಗ್ಗೆ ಶೋಧ ನಡಿಸಿದನು. ಆ ಸವಾರನು ತುಸ ದೂರ ಹೋಗಿ ಅಂಜಿ, ಕೆಟ್ಟ

ದನಿಯಿಂದ ಚೀರಿದನು. ಅದನ್ನು ಕೇಳಿ ಖಾನನೂ ಆತನ ಮತ್ತೆ ಇಬ್ಬರು ಸಂಗಡಿಗರೂ ಅತ್ತ ಭರದಿಂದ ಸಾಗಿದರು. ಅಲ್ಲಿ ಹೋಗಿ ನೋಡುತ್ತಾರೆ, ಈ ವೊದಲು ಸಮೀಪದಲ್ಲಿಯೇ ಬಡಿದಂತೆ ಭಾಸವಾದ ಸಿಡಿಲು ದಾವುದ್‌ಖಾನನಿಗೂ ಆತನ ಕುದುರೆಗೂ ಬಡೆದು, ಸಮೀಪದ ಮರದಲ್ಲಿ ಸೇರಿತ್ತು. ಅದರಿಂದ ಆ ಮರವು ಧಗಧಗನೆ ಉರಿಯಲಾರಂಭಿಸಿತ್ತು. ದಾವುದನ ಪ್ರೇತವನ್ನು ಕಂಡು, ಖಾನನು ಬಹು ದುಃಖಿಸಿದನು:—ದಾವುದ್, ನಿನ್ನಂಥ ಪ್ರಾಮಾಣಿಕ ಸೇವಕನು ನನಗೆ ಇನ್ನು ಹೇಗೆ ದೊರೆತಾನು! ನಿನ್ನ ಸಹಾಯದಿಂದಲೇ ನಾನು ಎಷ್ಟೋ ಯುದ್ಧಗಳಲ್ಲಿ ವಿಜಯವನ್ನು ಹೊಂದಿದೆನು. ಪರವರದಿಗಾರ! ನಿನ್ನ ಲೀಲೆಯು ಮುಂದೆ ಯಾರ ಆಟವು ಸಾಗುವಂತಿದೆ?

ಬಳಿಕ ಅವರೆಲ್ಲರೂ ಮತ್ತೆ ತಮ್ಮ ಮಾರ್ಗವನ್ನು ಹಿಡಿದರು. ಎತ್ತ ನೋಡಿದತ್ತ ನೀರೇ-ನೀರಾದ್ದರಿಂದ, ಅವರಿಗೆ ಮಾರ್ಗವೇ ಸಿಗದಂತಾಯಿತು. ಆದರೂ ಅವರು ಆ ಕೆಸರು ಮಿಶ್ರಿತ ನೀರಿನ ಪ್ರವಾಹವನ್ನು ದಾಟುತ್ತ ಆ ಗುಡಿಸಲುಗಳಿಗೆ ತಲುಪಿದರು. ಅಲ್ಲಿ ಚಿಕ್ಕ-ದೊಡ್ಡ ನಾಲ್ಕಾರೇ ಗುಡಿಸಲುಗಳಿದ್ದು, ಅವೆಲ್ಲ ತೊಯ್ದು ಹೋದದ್ದರಿಂದ, ಅಲ್ಲಿ ಖಾನನ ಇಷ್ಟು ಜನರಿಗೆ ವಾಸ ಮಾಡಲಿಕ್ಕೆ ಸ್ಥಳವು ಎಲ್ಲಿಂದ ದೊರೆಯಬೇಕು? ಖಾನನು ಆ ಹಳ್ಳಿಯ ಪಟೇಲನನ್ನು ಕರೆಯಿಸಿ:—"ಮುಂದಿನ ಹಳ್ಳಿಯು ಇನ್ನೆಷ್ಟು ದೂರದಲ್ಲಿದೆ? ಮಾ-ರ್ಗವು ಹೇಗಿದೆ? ಇತ್ಯಾದಿ ಪ್ರಶ್ನೆ ಮಾಡಿದನು. ಅವನು:—ಮುಂದಿನ ಹಳ್ಳಿಯು ಇಲ್ಲಿಂದ ಒಂದೇ ಹರದಾರಿಯ ಮೇಲಿರುವದೆಂದೂ, ದಾರಿಯು ತಕ್ಕಮಟ್ಟಿಗೆ ಚೆನ್ನಾಗಿದೆಯೆಂದೂ ಹೇಳಿ, ತಮ್ಮಲ್ಲಿಯ ಒಬ್ಬನನ್ನು ದಾರಿ ತೋರಿಸುವದಕ್ಕಾಗಿ ಖಾನನ ನೆರವಿಗೆ ಕಳಿಸಿಕೊಟ್ಟನು. ಅವನು ಒಂದು ಮುಂಡಾಸು ಹಿಲಾಲನ್ನು ಹಚ್ಚಿಕೊಂಡು ಖಾನನ ಸಂಗಡ ಬಂದನು. ಖಾನನ ಜನರು ಮತ್ತೆ ದಾರಿ ತುಳಿಯು

ಹತ್ತಿದರು. ಆ ಹಳ್ಳಿಯ ಗೌಡನು ಹೇಳಿದಂತೆ ಆ ಮಾರ್ಗವು ಚೆನ್ನಾಗಿತ್ತು. ದಾರಿ ತೋರಿಸುವವನ ಸಹಾಯದಿಂದ ಆ ಜನರು ತಾಸೆರಡು ತಾಸಿನಲ್ಲಿ ಆ ಮುಂದಿನ ಊರ ಹತ್ತರಕ್ಕೆ ಬಂದರು. ಆ ಊರೊಳಗಿನ ದೀಪಗಳೂ ಮಂದಮಂದವಾಗಿ ಕಾಣಹತ್ತಿದವು. ಇಷ್ಟರಲ್ಲಿ ಭೋರೆಂದು ಹರಿಯುವ ನೀರಿನ ಪ್ರವಾಹದ ಸಪ್ಪಳವು ಅವರಿಗೆ ಕೇಳಬರಹತ್ತಿತು. ಆ ಶಬ್ದವನ್ನು ಕೇಳಿ, ಖಾನನೂ ಅತನ ಜನರೂ ಬೆಚ್ಚಿ ಬಿದ್ದರು. ಮೂರೂಸಂಜೆಯಂತೆ ಮತ್ತೆ ಮಳೆ ಬರುವದೇನೋ ಎಂದು ಅವರು ಶಂಕಿಸಿದರು. ಆಗ ಖಾನನು ಆ ದಾರಿ ತೋರಿಸುವವನನ್ನು ಕುರಿತು:— ಕ್ಯಾಂ ಬೇ ಮಶಾಲಿ, ಏ ಕ್ಯಾ ಸೈತಾನ ಅರಡತಾ ಹ್ಯೆ ಕಿ ಕ್ಯಾ? ನಮ್ಮನ್ನು ಯಾವದೊಂದು ಸೈತಾನನ ಬಿಡಾರಕ್ಕೆ ಕರೆದೊಯ್ಯುತ್ತಿರುವಿಯೋ ಏನು? ಎಂದು ಗದ್ದರಿಸಿ ಕೇಳಲು,

ಆ ಮನುಷ್ಯನು:-ಖಾವಿಂದ, ಸೈತಾನ-ಗಿಯ್ತಾನಗಳು ನಮ್ಮ ನಾಡಿನಲ್ಲಿಲ್ಲ. ಎದುರಿಗೆ ದೀಪ ಕಾಣುವದೇ ಆ ಊರು. ನಡುವೆ ಇರುವ ಈ ಹೊಳೆಯನ್ನಷ್ಟು ದಾಟಿದರೆ ತೀರಿತು, ಎಂದು ಸರಳತನದಿಂದ ನುಡಿದನು.

ಖಾನ:—"ಕ್ಯಾ! ನದ್ದೀ! ಯಾ ಅಲ್ಲಾ! ಕಂಹಾಕೀ ನದ್ದೀ?"

ದಾರಿ ತೋರಿಸುವವ:—ಖಾನಸಾಹೇಬ, ಇದೇನು ಹಿರೇಹೊಳೆ(ಕೃಷ್ಣಾನದಿ)ಯಲ್ಲ ಈ ಚಿಕ್ಕ ಹೊಳೆಗೆ ತುಂಗಭದ್ರಾ, ಎಂದು ಈ ನಾಡಿನಲ್ಲಿ ಅನ್ನುತ್ತಾರೆ. ಹಿರೇಹೊಳೆಯಷ್ಟು ಇದರಲ್ಲಿ ಆಳವಾದ ನೀರಿರುವದಿಲ್ಲ. ಈಗಂತೂ ಇನ್ನೂ ಮಳೆಗಾಲದ ಪ್ರಾರಂಭ, ಸೊಂಟಮಟ ಇಲ್ಲವೆ ಎದೆಮಟ ನೀರಿದ್ದರೆ ಹೆಚ್ಚಾಯಿತು.

ಹೊಳೆಯು ಸಮಿ-ಸಮಿೂಪಿಸಿದ ಹಾಗೆ ಪ್ರವಾಹದ ಸಪ್ಪಳವು ಕರ್ಣ-ಕಠೋರವಾಗಿ ಕೇಳಹತ್ತಿತು. ಅದನ್ನು ಕೇಳಿ ಆ ದಂಡಿನವರ

ಹೌಹಾರಿ ಹೋಯಿತು. ದಾರಿ ತೋರಿಸ ಬಂದ ಈ ಸೈತಾನನು ಇದೆಲ್ಲಿಯ ಹಾಳು ಮಾರ್ಗವನ್ನು ತೆಗೆದನೋ, ಎಂದು ಪ್ರತಿಯೊಬ್ಬರೂ ಆತನಿಗೆ ಬಯ್ಯಲಾರಂಭಿಸಿದರು

ಆಗ ದಾರಿ ತೋರಿಸುವವನು:—ಖಾನಸಾಹೇಬ, ಸ್ವಲ್ಪವೂ ಅಂಜುವ ಕಾರಣವಿಲ್ಲ. ಈ ಹೊಳೆಯಲ್ಲಿ ಚೆನ್ನಾದ ಕಾಲುದಾರಿಯಿದೆ.

ಅದನ್ನು ಕೇಳಿ ಸಂತಾಪದಿಂದ ಖಾನನು:— ಏ ಕಾಫೀರಕೆ ಕುತ್ತೇ, ನೀನು ನಮ್ಮನ್ನು ಮೋಸಗೊಳಿಸಿದೆ. ನಿಮ್ಮ ಊರ್‍ಲ್ಲಿ ನಾವು ತಳವೂರಬಾರದೆಂದು ನಿಮ್ಮ ಪಟೇಲನೂ ನೀವೂ ನಮ್ಮನ್ನು ಈ ನದಿಯಲ್ಲಿ ಮುಳುಗಿಸಲಿಕ್ಕೆ ಪ್ರಯತ್ನಿಸಿರುವಿರಾ? ನೀನು ಸುಳ್ಳು ಹೇಳಿದೆಯೆಂದರೆ ನಿನಗೆ ಅಲ್ಲಾನ ಆಣೆಯಿರುತ್ತದೆ. ನಿನ್ನ ಈ ಕಪಟಾಚರಣೆಯ ಬಗ್ಗೆ ಈಗಲೆ ನಿನ್ನ ರುಂಡವನ್ನು ಕತ್ತರಿಸುವೆನು........

ಆ ದಾರಿ ತೋರಿಸುವವನು ಸಿಟ್ಟಿಗೇಳದೆ:—ಖಾನಸಾಹೇಬ, ನನ್ನ ಜೀವವಂತೂ ತಮ್ಮ ಕೈಯಲ್ಲಿಯೇ ಇರುತ್ತದೆ. ಬೇಕಾದಾಗ ನನ್ನನ್ನು ಕೊಲ್ಲಬಹುದು; ಆದರೆ ನಾನಂದದ್ದು ನಿಜವೋ-ಸುಳ್ಳೋ ಎಂಬದನ್ನು ತೋರಿಸುವದಕ್ಕಾಗಿ ನಾನೀಗ ಈ ಹೊಳೆಯಲ್ಲಿಳಿಯುವೆನು, ನೋಡಿರಿ. ನಿಮ್ಮ ಜನರಲ್ಲಿಯ ಯಾವನೊಬ್ಬನನ್ನು ನನ್ನ ಸಂಗಡ ಕಳಿಸಿರೆಂದರಾಯಿತು. ಯಾಕೆ, ಯಾರೂ ಬರುವದಿಲ್ಲವೆ? ನಿಮ್ಮಂಥ ಶೂರ ದಂಡಾಳುಗಳು ಪ್ರಸಂಗದಲ್ಲಿ ಹೀಗೆ ಹಿಂದೆಗೆಯುವದುಂಟೆ? ಎಂದು ಆತನು ಖಾನನ ಜನರನ್ನುದ್ದೇಶಿಸಿ ನುಡಿಯುತ್ತ, ಹೊಳೆಯಲ್ಲಿಳಿದನು.

ಅಪರಿಚಿತ ಸ್ಥಳ, ಅರಿಯದ ದಾರಿ, ರಾತ್ರಿಯ ಹೊತ್ತು; ತುಸ ಹೊತ್ತಿನ ಮುಂಚೆ ಭಯಂಕರವಾದ ಮಳೆಯಾದ್ದರಿಂದ, ಹೊಳೆಗೆ ಹೊಸ ನೀರು ಬಂದು ಭೋರ್ಗಟ್ಟು ಹರಿಯುತ್ತಿತ್ತು. ಆದ್ದರಿಂದ ಆ ಹೊಳೆಯಲ್ಲಿ ಆ ದಾರಿ ತೋರಿಸುವವನ ಸಂಗಡ ಹೋಗಲಿಕ್ಕೆ

ಖಾನನ ದಂಡಾಳುಗಳಲ್ಲಿ ಒಬ್ಬನೂ ಮುಂದಾಗಲಿಲ್ಲ. ಆಗ ಖಾನನು ಸಿಟ್ಟಿಗೆದ್ದು ತನ್ನ ಜನರನ್ನು ಕುರಿತು:—"ಎಲೈ ಹೇಡಿಗಳೇ, ಉಪ್ಪುಂಡವರ ಉಪಯೋಗಕ್ಕೆ ಬೀಳುವ ಸಮಯವೊದಗಿರಲು, ಹಿಂದೆಗೆಯುವಿರಾ? ಆ ದಾರಿತೋರಿಸುವವನಿಗೆ ನಾನು ಬರೀ ಸಿಟ್ಟಿನ ಮಾತಾಡಿದರೆ, ಆತನು ಹೊಳೆಯೊಳಗೆ ಹೊಕ್ಕು ನಡೆದನು ಸಹ. ಆದರೆ ಹರಾಮಖೋರರಾ, ಹೆಂಗಸರಂತೆ ಹಿಂದೆ ಉಳಿಯಲಿಕ್ಕೆ ನಿಮಗೆ ನಾಚಿಕೆ ಬರುವದಿಲ್ಲವೆ?"

ಎಂದ ಕೂಡಲೆ ಒಬ್ಬ ಸವಾರನು ಆ ದಾರಿ ತೋರಿಸುವವನ ಕೈ ಹಿಡಿದು ಆ ಹೊಳೆಯಲ್ಲಿ ಪ್ರವೇಶಿಸಿದನು. ಅವರೀರ್ವರೂ ಬಹು ಸಾವಕಾಶವಾಗಿ ನಡೆದು ಆ ನದಿಯ ಆಚೆಯ ಧಡವನ್ನು ತಲುಪಿದರು. ಆ ಕೂಡಲೆ ಅವರು ಖಾನನಿಗೆ ಆ ಸಂಗತಿಯನ್ನು ಕೂಗಿ ಹೇಳಿದರು.

ಖಾನನು ತನ್ನ ಬೀಬಿಯನ್ನು ತನ್ನ ಕುದುರೆಯ ಮೇಲೆ ಕುಳ್ಳಿರಿಸಿಕೊಂಡು ಆಚೆಯ ಧಡಕ್ಕೆ ಹೋಗಬೇಕೆಂದನು; ಆದರೆ ಬೀಬಿಯು ಅದಕ್ಕೆ ಒಪ್ಪಲಿಲ್ಲ. ಬೋಯಿಗಳು ತಾವು ಬೀಬೀಸಾಹೇಬರನ್ನು ನೀರಿನ ಹನಿ ಕೂಡ ಹತ್ತದ ಹಾಗೆ ಆಚೆಯ ದಂಡೆಗೆ ತಲುಪಿಸುವೆವೆಂದು ಎದೆ ತಟ್ಟಿ ಹೇಳಲು, ಖಾನನು ಆ ಬೋಯಿಗಳಲ್ಲಿಯ ಒಳ್ಳೇ ಟೊಣಪರಾದವರನ್ನು ಮೇಣೆ ಹೊರಲಿಕ್ಕೆ ಹಚ್ಚಿ, ಉಳಿದ ಬೋಯಿಗಳು, ಕುದುರೆಯ ಸವಾರರು ಹಾಗು ಸ್ವತಃ ತಾನು ಕೂಡಿ ಆ ಮೇಣೆಯು ಅತ್ತಿತ್ತ ಒಲಿಯದ ಹಾಗೆ ಅದನ್ನು ಹಿಡಕೊಂಡು ಆ ಹೊಳೆಯಲ್ಲಿ ಸಾವಕಾಶವಾಗಿ ನಡೆದರು. ಪರತೀರವು ಸಮೀಪಿಸಿತು; ಇನ್ನು ಒಂದೆರಡು ಮಾರು ಪ್ರವಾಹವನ್ನು ದಾಟಿದ್ದರೆ, ಆ ಮೇಣೆಯು ದಂಡೆಗೆ ತಲುಪುತ್ತಿತ್ತು; ಅಷ್ಟರಲ್ಲಿ ಖಾನನ ಕುದುರೆಯು ಒಂದು ಗುಂಡಿಯಲ್ಲಿ ಸಿಗಿಬೀಳಲು, ಖಾನನು ನೀರಲ್ಲಿ ಮುಳು

ಗಿದನು. ಖಾನನು ಮುಳುಗಿದನೆಂಬ ಸುದ್ದಿಯನ್ನು ಕೇಳಿ, ಖಾನನ ಬೀಬಿಯು ಬುರುಕ ತೆಗೆದು ಖಾನನ ಕಡೆಗೆ ತಿರುಗಿದಳು. ಮೇಣೆಯು ಈ ಬದಿಯಿಂದ ಆ ಬದಿಗೆ ಒಮ್ಮೆಲೆ ಭಾರವಾಗಲು, ಬೋಯಿಗಳ ಹೆಗಲು ತಪ್ಪಿ ಅದು ನೀರಲ್ಲಿ ಡಬ್ಬು ಬಿದ್ದಿತು. ಕೂಡಲೆ ಖಾನ ಮಸಾಹೇಬಳೂ ನೀರಲ್ಲಿ ಮುಳುಗಿದಳು! ಅದನ್ನು ನೋಡಿ, ಖಾನನ ದಂಡಾಳುಗಳೆಲ್ಲರೂ ಯಾ ಅಲ್ಲಾ! ಯಾ ಖುದಾ!! ಏ ಕ್ಯಾ ಕರೇ, ಏ ಕ್ಯಾ ಕರೇ? ಎಂದು ಆಕ್ರೋಶ ಮಾಡಹತ್ತಿದರು.

—O—

## ಬೇಟಾ, ತುಮ ತೊ ಬಡಾ ಉಮದಾ ಆದಮಿ ಹೋ!

ಅಬ್ದುಲ್‌ರಹಿಮಾನಖಾನನ ಕುದುರೆಯು ಮಡುವಿಗೆ ಬೀಳಲು, ಅವನು ನೀರಲ್ಲಿ ಮುಳುಗಿದ್ದೇನೋ ನಿಜ; ಆದರೆ ಕೆಲ ನಿಮಿಷಗಳಲ್ಲಿಯೇ ಆತನು ಮೇಲಕ್ಕೆ ಬಂದನು. ಕುದುರೆಯೂ ಈಸಿ ಪರತೀರವನ್ನು ಸೇರಿತು. ಆಗ ತನ್ನ ಹೆಂಡತಿಯು ಮೇಣೆ ಸಹಿತ ನೀರಲ್ಲಿ ಮುಳುಗಿದ್ದನ್ನು ಕೇಳಿ, ಖಾನನು ಬಹು ದುಃಖಿಸಲಾರಂಭಿಸಿದನು. ಶೋಕಾತಿರೇಕದಿಂದ ಆತನ ಹೌಹಾರಿ, ಅವನು ಪುನಃ ನೀರಲ್ಲಿ ದುಮುಕಿ ಪ್ರಾಣ ಕಳಕೊಳ್ಳಲು ಯತ್ನಿಸಲು, ಆತನ ದಂಡಾಳುಗಳಲ್ಲಿಯ ಕೆಲವರು ನೀರ ಮೇಲೆ ತೇಲ ಹತ್ತಿದ್ದ ಮೇಣೆಯನ್ನು ತೆಗೆದು, ಅದರಲ್ಲಿ ಖಾನನನ್ನು ಹಾಕಿಕೊಂಡು ಆ ಹೊಳೆಯಾಚೆಯ ಹಳ್ಳಿಗೆ ನಡೆದರು.

ಖಾನನನ್ನು ಕರಕೊಂಡು ಹೋದ ಮೇಲೆ ಆ ಹೊಳೆಯ ಧಡದಲ್ಲಿ ಉಂಟಾದ ಗೊಂದಲಕ್ಕೆ ಸೀಮೆಯೇ ಉಳಿಯಲಿಲ್ಲ. ಮುಂದೇನು ಮಾಡಬೇಕೆಂಬದು ಒಬ್ಬರಿಗೂ ತಿಳಿಯದ್ದರಿಂದ, ಎಲ್ಲರೂ ಸ್ತಬ್ಧರಾಗಿ ನಿಂತು ಬಿಟ್ಟರು. ಇಷ್ಟರಲ್ಲಿ ಅಲ್ಲಿ ಕಲೆತಿದ್ದ ಜನರಲ್ಲಿಯ ಒಬ್ಬ

ತರುಣ ಸಾಹಸಿಯು ತನ್ನ ಮೈಮೇಲಿನ ಬಟ್ಟೆಗಳನ್ನೆಳುಹಿ, ಕಾಶಿ ಯನ್ನು ಕಟ್ಟಿಕೊಂಡು, ಖಾನನ ಹೆಂಡತಿಯಾದ ಖಾನಮುಸಾಹೇ ಬಳು ಮುಳುಗಿದ್ದ ಸ್ಥಳದಲ್ಲಿ ಹಾರಿಕೊಂಡನು.

ಆ ಯುವಕನು ಆ ಪ್ರಚಂಡ ಪ್ರವಾಹದಲ್ಲಿ ಹಿಂದುಮುಂದಿನ ವಿಚಾರವಿಲ್ಲದೆ ಹಾರಿದ್ದನ್ನು ನೋಡಿ, ಧಡದಲ್ಲಿದ್ದ ಜನರು ಆತನನ್ನು ಕುರಿತು:—ಸಾಯುವನು, ಈ ತರುಣನು ನಿಶ್ಚಯವಾಗಿ ಸಾಯು ತ್ತಾನೆ; ಈತನು ಬದುಕಿ ಬರಲಾರನು! ಎಂದು ಹಿದರಲಾರಂಭಿಸಿ ದರು. ಕೆಲವು ತರುಣರಂತೂ ತಮ್ಮ ಮಿತ್ರನು ಆ ಸಂಕಟದೊಳ ಗಿಂದ ಪಾರಾಗಿ ಬರಬೇಕೆಂದು, ತಮ್ಮೆಲ್ಲರ ಮುಂಡಾಸಗಳ ತುದಿ ಗಳನ್ನು ಹಿಂದಕ್ಕೊಂದು ಕೂಡಿಸಿ, ಉಂಡೆ ಮಾಡಿ ಆತನು ಮುಳು ಗಿದ್ದ ಸ್ಥಳದಲ್ಲಿ ಬೀಸಿದರು ಸಹ. ಕೆಲ ನಿಮಿಷಗಳ ಹಿಂದೆ ಮುಳು ಗಿದ್ದ ಖಾನಮುಸಾಹೇಬಳು ಪ್ರಚಂಡ ಪ್ರವಾಹದ ಸೆಳವಿಗೆ ಸಿಕ್ಕು, ಎತ್ತೋ ಹಿಯ್ಯಲ್ಪಟ್ಟಿರಬಹುದೆಂದು ದಂಡೆಯ ಮೇಲೆ ನಿಂತಿದ್ದವರು ತರ್ಕಿಸುತ್ತಿದ್ದರು. ಇಷ್ಟರಲ್ಲಿ ಆ ಕಡುಗಲಿಯು ಖಾನಮುಸಾಹೇ ಬಳ ಮೃತವತ್ ಶರೀರವನ್ನು ತನ್ನ ಹೆಗಲ ಮೇಲೆ ಇಟ್ಟುಕೊಂಡು, ನೀರಿನೊಳಗಿಂದ ಮೇಲಕ್ಕೆ ಬಂದನು. ಅವನ ಕೈಗೆ ಮುಂಡಾಸದ ಸೆರಗು ಸಿಕ್ಕಿತು ಕೂಡಲೆ ಅವನು ಅದನ್ನು ಗಟ್ಟಿಯಾಗಿ ಹಿಡಿದು ಕೊಂಡು ಈಸುತ್ತ ದಂಡೆಯ ಕಡೆಗೆ ಬರತೊಡಗಿದನು. ಮುಂಡಾ ಸದವರೂ ಅವನನ್ನು ಭರದಿಂದ ಜಗ್ಗುತ್ತಿದ್ದರು ತುಸ ಹೊತ್ತಿನ ಲ್ಲಿಯೇ ಆ ನಮ್ಮ ಸಾಹಸಿಯಾದ ತರುಣನು ಖಾನಮುಸಾಹೇಬಳನ್ನು ಮೇಲಕ್ಕೆ ತಂದನು.

ಅವನು ಮೇಲಕ್ಕೆ ಬಂದೊಡನೆ ದಂಡೆಯ ಮೇಲಿದ್ದವರೆಲ್ಲ ಅವನನ್ನು ಹೊಗಳುತ್ತ ಆತನಿಗೆ ಬಗೆಬಗೆಯ ಪ್ರಶ್ನೆಗಳನ್ನು ಮಾಡ ಹತ್ತಿದರು; ಆದರೆ ಆಗ ಆತನು ಯಾವ ಪ್ರಶ್ನೆಗಳಿಗೂ ಏನೊಂದೂ

ಉತ್ತರವನ್ನು ಕೊಡದೆ, ಎಲ್ಲರಿಗೂ ತಡೆಯಿರೆಂದು ಸೈಸನ್ನೆಯಿಂದ ಸೂಚಿಸುತ್ತ, ಖಾನನು ಆ ಮೃತವತ್ ಶರೀರವನ್ನು ತನ್ನ ಮನೆಗೆ ಹೊತ್ತುಕೊಂಡು ಹೋದನು.

ಈ ಮೊದಲು ಖಾನನನ್ನು ಕರಕೊಂಡು ನಡೆದಿದ್ದ ಜನರು ಆ ಮೇಣೆಯನ್ನು ಆ ಊರ ಚಾವಡಿಗೆ ಒಯ್ದು, ಅಲ್ಲಿ ಸಿಕ್ಕಷ್ಟು ಒಣಬಟ್ಟೆಗಳನ್ನು ಹಾಸಿ-ಹೊಚ್ಚಿ, ಖಾನನನ್ನು ಮಲಗಿಸಿ, ಆತನನ್ನು ಎಚ್ಚರಗೊಳಿಸಲು ಪ್ರಯತ್ನಿಸುತ್ತಿದ್ದರು. ಕೆಲವರು ಆತನ ಕತ್ತಿ-ಢಾಲುಗಳನ್ನು ಬಿಚ್ಚಿದರು; ಕೆಲವರು ಆತನ ಜೋಡುಗಳನ್ನು ತೆಗೆದರು; ಹಾಗು ಬೇರೆ ಕೆಲವರು ಅಗ್ಗಿಷ್ಟಿಗೆ ಹೊತ್ತಿಸಿ, ಆತನಿಗೆ ಕಾವು ಕೊಡಲಾರಂಭಿಸಿದರು. ಖಾನನು ನಡುನಡುವೆ ಬಡಬಡಿಸುತ್ತಿದ್ದನು ಬಡಬಡಿಸಿದಾಗ ಆತನು ತನ್ನ ಬೀಬಿಯು ನೀರಲ್ಲಿ ಮುಳುಗಿ ಹೋದ ಸಂಗತಿಯನ್ನೇ ಉಚ್ಚರಿಸುತ್ತಿದ್ದನು. ಕೆಲ ಹೊತ್ತಿನಲ್ಲಿ ಆ ಎಲ್ಲ ಜನರ ಪ್ರಯತ್ನಕ್ಕೆ ಯಶಬರತೊಡಗಿತು. ಖಾನನು ತನ್ನ ಕಣ್ಣುಗಳನ್ನು ತೆರೆದು, ಅತ್ತಿತ್ತ ಆಶ್ಚರ್ಯಚಕಿತ ನೇತ್ರಗಳಿಂದ ನೋಡುತ್ತ:—"ನಾನೀಗ ಇರುವದೆಲ್ಲಿ?" ಎಂದು ಪ್ರಶ್ನೆ ಮಾಡಿದನು.

ಇಷ್ಟರಲ್ಲಿ ಈ ವರೆಗೆ ಜರುಗಿದ ಸಂಗತಿಯ ಸ್ಮರಣವು ತನಗೇ ಆಗಲು, ಆತನು ತನ್ನ ಪ್ರಿಯತಮೆಯ ಗತಿಯೇನಾಯಿತೆಂದು ಪುನಃ ಪ್ರಶ್ನೆ ಮಾಡಿದನು. ಚಾವಡಿಯೊಳಗಿದ್ದವರಿಗೆ ಆ ತರುಣನು ಖಾನಮಳನ್ನು ಪ್ರವಾಹದಿಂದ ತೆಗೆದುಕೊಂಡು ಬಂದ ಸುದ್ದಿಯು ಇನ್ನೂ ತಿಳಿದಿದ್ದಿಲ್ಲ. ಆದರಿಂದ ಅವರು ಖಾನನಿಗೆ ಆಗ ಏನೆಂದು ಹೇಳುವ ಹಾಗಿತ್ತು? "ಸರಕಾರ, ತಮ್ಮ ಈ ಸೇವಕರಿಗೆ ಆ ಬಗ್ಗೆ ಏನೂ ಗೊತ್ತಿಲ್ಲ. ತಾವು ಗಾಬರಿ ಮಾಡಿದಾಗಿನಿಂದ ನಾವೆಲ್ಲರು ತಮ್ಮ ಶುಶ್ರೂಷೆಯಲ್ಲಿಯೇ ತೊಡಗಿರುವೆವು...." ಎಂದು ಒಬ್ಬ ಸೇವಕನು ಹೇಳುತ್ತಿರಲು, ಖಾನನು ನಡುವೇ ಬಾಯಿ ಹಾಕಿ:—"ಏನಂದಿ?

ಅವಳನ್ನು ಈ ವರೆಗೆ ಯಾರೂ ತೆಗೆಯಲಿಲ್ಲವೆ? ಎಲೈ ಹೇಡಿಗಳೇ, ನಿಮ್ಮೆಲ್ಲರ ಎದುರಿಗೆ ಒಬ್ಬ ಅಬಲೆಯು ಪ್ರವಾಹದಲ್ಲಿ ಮುಳುಗಿರಲು, ನೀವು ಆಗ ಮಾಡುತ್ತಿದ್ದಿರೇನು? ಯಾ ಅಲ್ಲಾ! ನನ್ನ ಪ್ರಿಯತಮೆಯು ನನಗೆ ಲಭಿಸದಿದ್ದರೆ, ನಾನು ಖಂಡಿತವಾಗಿ ಹುಚ್ಚನಾಗುವೆನು!'' ಎಂದೆಂದು, ಖಾನನು ನಿಜವಾಗಿ ಹುಚ್ಚು ಹಿಡಿದವರ ಹಾಗೆ ಓಡಾಡ ಹತ್ತಿದನು. ಆತನ ಆಳು-ಹೋಳುಗಳು ಆತನನ್ನು ಹಿಡಿದು ಕೂಡ್ರಿ ಸುವ ಯತ್ನ ನಡಿಸಿದರು. ಖಾನನು ಅವರಿಗೆ ಅಸುಗೊಳ್ಳದೆ ಓಡ ಲಾರಂಭಿಸಿ ಹೊಳೆಗೆ ಬಂದನು ಅಲ್ಲಿ ಹೆಂಡತಿಯು ಹೆಣವಾದರೂ ಕಣ್ಣಿಗೆ ಬೀಳಬಹುದೆಂದು ಶೋಧ ನಡಿಸಿದನು. ತನ್ನ ಹೆಂಡತಿಯನ್ನು ಹೆಸರುಗೊಂಡು ಕರೆಯುತ್ತ ಅತ್ತಿತ್ತ ತಿರುಗಾಡಹತ್ತಿದನು. "ಇನ್ನು ಖಾನಮಳ ಪತ್ತೆಯಾಗಲಾರದು. ಸುಮ್ಮನೆ ತ್ರಾಸ ಮಾಡಿಕೊಳ್ಳು ವದರಿಂದ ತಮ್ಮ ಪ್ರಕೃತಿ ಮಾತ್ರ ತಾಳದಪ್ಪಬಹುದಾಗಿದೆಯಾದ್ದ ರಿಂದ, ತಾವು ಆ ಗೋಜಿಗೆ ಹೋಗದೆ, ಕೆಲ ಹೊತ್ತಿನ ವರೆಗೆ ಚಾವ ಡಿಯಲ್ಲೇ ಸ್ವಸ್ಥಚಿತ್ತದಿಂದ ಬಿದ್ದುಕೊಳ್ಳಬೇಕು'' ಎಂದು ಖಾನನ ಒಬ್ಬ ಸೇವಕನು ವಿನಂತಿ ಮಾಡಿಕೊಳ್ಳಲು, ಅತಿ ದುಃಖದಿಂದಲೂ ಅತಿ ಶ್ರಮದಿಂದಲೂ ವಿಹ್ವಲನಾಗಿದ್ದ ಖಾನನು ಬಾಯಿಂದ ಒಲ್ಲೆ-ಒಲ್ಲೆನೆನ್ನುತ್ತ, ಮಂದಗತಿಯಿಂದ ಚಾವಡಿಯ ಕಡೆಗೆ ಸಾಗಿದನು.

ಮೇಲೆ ಹೇಳಿದಂತೆ ಆ ತರುಣನು ಖಾನಮಳ ದೇಹವನ್ನು ಹೊತ್ತುಕೊಂಡು ಓಡುತ್ತೋಡುತ್ತ ತನ್ನ ಮನೆಗೆ ಹೋಗಿ, ಹಿಂದೆ-ಮುಂದೆ ನೋಡದೆ ಒಮ್ಮೆಲೆ ಝನಾನಖಾನೆಯನ್ನು ಸೇರಿದನು. ಪೂರ್ಣವಾಗಿ ತೊಯ್ದಿದ್ದ ಹಾಗು ಹೆಗಲ ಮೇಲೆ ತೂಯ್ದು ನಿಶ್ಚೇತನ ಹೊಂದಿದ್ದ ಸ್ತ್ರೀಯ ಪ್ರೇತ ಸಹಿತವಾಗಿ ಒಮ್ಮೆಲೆ ಬಂದ ಆ ತರುಣ ನನ್ನು ಕಂಡು, ಆ ಅಂತಃಪುರವಾಸಿನಿಯರೆಲ್ಲರಿಗೂ-ಅದರಲ್ಲಿಯೂ ಆ ತರುಣನ ತಾಯಿಗೆ-ಬಹಳ ಆಶ್ಚರ್ಯವೆನಿಸಿತು ಆ ಝನಾನಖಾನೆ

ಯುವರಿಗೆ ಹೊಳೆಯ ತೀರದಲ್ಲಿ ನಡೆದ ಸಂಗತಿಯು ಯಥಾರ್ಥಜ್ಞಾನ ವಿಸ್ತೂ ಆಗಿರಲಿಲ್ಲ. ಹೊಳೆಯ ಕಡೆಯಿಂದ ಬಂದ ಜನರು ತಮ್ಮತಮ್ಮೊಳಗೆ ನುಡಿಯುತ್ತಿದ್ದ ಅಸಂಬದ್ಧ ಮಾತುಗಳನ್ನಷ್ಟೇ ಅವರು ಈ ವರೆಗೆ ಕೇಳಿಕೊಂಡಿದ್ದರು.

“ಅರೇ ಅಲ್ಲಾ! ಎಲಾ ಕಾಸೀಮ, ಇದೇನು? ನೀನು ಹೊತ್ತುಕೊಂಡು ಬಂದಿರುವ ಈ ಹೆಣ್ಣುಮಗಳು ಯಾರು? ಈಕೆಯೆಲ್ಲಿಯವಳು? ಎಲ್ಲಿಂದ ಕರೆತಂದೆ? ನೀವಿಬ್ಬರೂ ಇಷ್ಟು ನೆನೆದಿರುವದೇಕೆ?” ಎಂದು ಆ ತರುಣನ ತಾಯಿಯು ತನ್ನ ಮಗನನ್ನು ಕುರಿತು ಒಂದೇ ಸವನೆ ಪ್ರಶ್ನೆ ಮಾಡಲಾರಂಭಿಸಿದಳು.

“ಇವಳು ಆ ಖಾನನ ಹೆಂಡತಿಯು; ಈಕೆಯು ಜೀವಂತಳಿಲ್ಲ” ಎಂದು ಆ ಝುನಾನಖಾನೆಯು ಹೊರಗೆ ನೆರೆದಿದ್ದವರಲ್ಲಿ ಒಬ್ಬನು ಗಟ್ಟಿಯಾಗಿ ಹೇಳಿದನು. “ಈಕೆಯು ಜೀವಂತಳಿಲ್ಲ!”ಎಂಬ ಶಬ್ದವು ಕಿವಿಗೆ ಬಿದ್ದ ಕೂಡಲೆ ಕಾಸೀಮ-ನಮ್ಮ ಆ ಸಾಹಸಿಗ ತರುಣ-ನು: ಈಕೆಯು ಜೀವಂತಳಿರಲಿ-ಇಲ್ಲದಿರಲಿ, ಅಲ್ಲಾನ ದಯದಿಂದ ಇವಳು ನನ್ನ ದೃಷ್ಟಿಗೆ ಬಿದ್ದ ಕೂಡಲೆ ನಾನು ಇವಳನ್ನು ನದಿಯೊಳಗಿಂದ ತೆಗೆದು ತಂದಿರುವೆನು; ಆದರೆ ಈಕೆಯ ಮೈಯು ಬೆಚ್ಚಗೆ ಹತ್ತುತ್ತಿರುವದರಿಂದ, ಇವಳಿನ್ನೂ ಸತ್ತಿರಲಾರಳೆಂದು ನನಗನಿಸುತ್ತದೆ. ಯಾವ ಯಾವ ಉಪಾಯ ಮಾಡಿದರೆ ಇವಳು ಜೀವದಿಂದುಳಿಯುವಳೆಂದು ನಿಮಗೆ ಅನಿಸುವದೋ, ಆ ಎಲ್ಲ ಉಪಾಯಗಳನ್ನು ತ್ವರೆಯಿಂದ ಮಾಡಿರಿ. ತಾಯಿ, ನಾನಿಲ್ಲಿದ್ದರೆ ನಿಮಗೆ ಆ ಉಪಾಯ ಕೈಕೊಳ್ಳಲಿಕ್ಕೆ ಸಂಕೋಚವಾದೀತು. ಆದ್ದರಿಂದ ನಾನಿಲ್ಲಿಂದ ಹೊರಡುವೆನು, ಎಂದಂದು, ಅವನು ಆ ಝುನಾನಖಾನೆಯಿಂದ ಹೊರಬಿದ್ದು, ಚಾವಡಿಯ ಕಡೆಗೆ ನಡೆದನು ಬಳಿಕ ಆ ಅಂತಃಪುರನಿವಾಸಿನಿಯರು ಆ ಸ್ತ್ರೀಯಳಿಗೆ ಎಚ್ಚರವುಂಟಾಗಲಿಕ್ಕೆ ತಕ್ಕವಾದ ಅನೇಕ

ಉಪಾಯುಗಳನ್ನು ಮಾಡಿದರು. ಆಕೆಯು ಮೈಮೇಲಿನ ಹಸೀಬಟ್ಟೆಗಳನ್ನು ತೆಗೆದು, ಇಟ್ಟಂಗಿಗಳನ್ನು ಕಾಸಿ, ಆಕೆಯು ಅಂಗ ಪ್ರತ್ಯಂಗಗಳಿಗೆ ಚನ್ನಾಗಿ ಕಾವು ಕೊಟ್ಟರು. ಕೆಲವರು ಆಕೆಯು ನಿಡಿದಾದ ಕೂದಲುಗಳನ್ನು ಹಿಂಡಿ, ಕಾಸಿ, ಒಣಗಿಸಿದರು. ಬೆಚ್ಚನ್ನಬಟ್ಟೆಯಿಂದ ಆಕೆಯ ಶರೀರವನ್ನು ಹೊಚ್ಚಿದರು. ಏನು ಮಾಡಿದರೂ ಎಷ್ಟೋ ಹೊತ್ತಿನವರೆಗೆ ಆಕೆಯು ಶ್ವಾಸ ಕೂಡ ಆಡಲಿಲ್ಲ ಮತ್ತೆ ಕೆಲವರು ಆಕೆಯನ್ನು ಡಬ್ಬುಮಲಗಿಸಿ, ಬೆನ್ನ ಮೇಲೆ ತಳಿದರು. ಅದರಿಂದ ಮಾತ್ರ ತುಸ ಗುಣವೆನಿಸಿತು. ಯಾಕಂದರೆ ಆಕೆಯು ಹೊಟ್ಟೆಯೊಳಗಿನ ನೀರು ಹೊರಟು ಹೋಗಲು, ಶ್ವಾಸೋಚ್ಛ್ವಾಸವು ಮಂದಮಂದವಾಗಿ ಪ್ರಾರಂಭವಾಯಿತು ತುಸ ಹೊತ್ತಿನಲ್ಲಿ ಸ್ವಲ್ಪ ಗುಣವೆನಿಸಲು, ಆಕೆಯು ಒಮ್ಮೆ ಕಣ್ಣು ತೆರೆದು ನೋಡಿದಳು ಅದರಿಂದ ಆಕೆಯು ಶುಶ್ರೂಷೆಯಲ್ಲಿ ಮಗ್ನರಾದ ಆ ಝನಾನಖಾನೆಯು ಹೆಂಗಳೆಯರಿಗೆ ತಮ್ಮ ಪ್ರಯತ್ನಕ್ಕೆ ಸಾರ್ಥಕತೆಯುಂಟಾಯಿತೆಂದು ಸಮಾಧಾನವೆನಿಸಿತು. ಅಷ್ಟರಲ್ಲಿ ಆವಳಿಗೆ ಅಲ್ಲಿಯು ಆ ದೀಪದ ಪ್ರಕಾಶವು ಸಹನವಾಗದೆ, ಅವಳು ಪುನಃ ಕಣ್ಣು ಮುಚ್ಚಿ ಎಚ್ಚರದಪ್ಪಿದಳು!

ಈಗ ಅವಳು ಮೊದಲಿನಂತೆ ಎಚ್ಚರದಪ್ಪಿ ಬಿದ್ದಿದ್ದರೂ, ಶ್ವಾಸೋಚ್ಛ್ವಾಸವು ನಿರಾತಂಕವಾಗಿ ನಡೆದಿತ್ತು. ಅದರಿಂದ ಅವಳ ಜೀವಿತದ ವಿಷಯುವಾಗಿ ಈ ಮೊದಲು ಉಂಟಾಗಿದ್ದ ಶಂಕೆಯು ಈಗ ನಿರಸನವಾಗಿ ಹೋಗಿತ್ತು. ಈ ಅಸಾವಧಸ್ಥಿತಿಯು ಬಹಳ ಹೊತ್ತು ಉಳಿಯಲಿಕ್ಕಿಲ್ಲವೆಂದೂ, ತುಸ ಹೊತ್ತಿನಲ್ಲಿಯೇ ಈ ಹೆಣ್ಣುಮಗಳು ಚೆನ್ನಾಗಿ ಎಚ್ಚತ್ತು ಎದ್ದು ಕೂಡ್ರಬಹುದೆಂದೂ ಅಲ್ಲಿ ನೆರೆದಿದ್ದ ಹೆಂಗಸರಿಗೆ ಅನಿಸಹತ್ತಿತು ಅವರ ತರ್ಕದಂತೆ ಆಕೆಯು ನಿಜವಾಗಿಯೂ ಎಚ್ಚರ ಹೊಂದಿದಳು. ಒಂದೆರಡು ಗಳಿಗೆಗಳಲ್ಲಿಯೇ ಆಕೆಯು ಹುಷಾರಾಗಿ ಎದ್ದು ಕುಳಿತು, ಅತ್ತಿತ್ತ ನೋಡಿ, ಮತ್ತೆ ಗ್ಲಾನಿ ಬರಲು

ಮಲಗಿಕೊಂಡಳು ಈಗ ಮಾತ್ರ ಆಕೆಗೆ ಸ್ವಾಭಾವಿಕವಾದ ಗಾಢ ನಿದ್ರೆಯು ಹತ್ತಿತು. ಇಡಿ ರಾತ್ರಿಯಲ್ಲಿಯ ದಾರಿಯ ಶ್ರಮ; ನೀರಿನ ಶೀತ; ಇವುಗಳಿಂದ ಆಕೆಗೆ ಅಂಥ ಆ ಕಠಿಣ ಸಮಯದಲ್ಲೂ ಗಾಢ ನಿದ್ರೆ ಹತ್ತಿದ್ದು ಸಹಜವೇ ಆಗಿತ್ತು.

ತಮ್ಮ ಯಜಮಾನತಿಯು ಇನ್ನು ಖಂಡಿತವಾಗಿಯೂ ದೊರೆಯಲಾರಳೆಂದು ಖಾನನ ಸೇವಕರು ಚಾವಡಿಯ ಹತ್ತರ ಗೋಣುಗುಟ್ಟುತ್ತ ಕುಳಿತಿರಲು, "ಖಾನಮಸಾಹೇಬಳು ದೊರೆತಳು, ಖಾನಮಳ ನಿಶ್ಚೇಷ್ಟಿತ ಶರೀರವನ್ನು ಈ ನಮ್ಮ ತರುಣ ಕಾಸೀಮನು ನದಿಯಿಂದ ಹೊರದೆಗೆದನು!" ಎಂದು ಕೂಗುತ್ತ, ಎಷ್ಟೋ ಜನರ ಒಂದು ಟೋಳಿಯು ಆ ಚಾವಡಿಯ ಕಡೆಗೆ ಬಂದಿತು ಅದನ್ನು ಕೇಳಿ ಖಾನನ ಸೇವಕನೊಬ್ಬನು:—"ನಮ್ಮ ಖಾನಮಸಾಹೇಬರು ಇನ್ನೆಲ್ಲಿ ಬದುಕುವರು? ಈಗಾಗಲೆ ಅವರ ಶರೀರವು ದೊಡ್ಡ ಹೊಳೆಯನ್ನು ಕೂಡ ತಲುಪಿರಬಹುದು" ಎಂದನು.

"ಛೀ! ನಾವು ಸುಳ್ಳು ನುಡಿಯುವದಿಲ್ಲ. ಖಾನಮಸಾಹೇಬರು ಖಂಡಿತವಾಗಿಯೂ ದೊರೆತಿರುವರು"ಎಂದೆನ್ನುತ್ತ, ಆ ಜನರ ಗುಂಪು ಅಬ್ದುಲ್‌ರಹಿಮಾನಖಾನನ ಸಮೀಪಕ್ಕೆ ಹೋಯಿತು ಖಾನನು ಪ್ರಿಯಪತ್ನಿಯ ವಿರಹದುಃಖದಲ್ಲಿ ನಿಮಗ್ನವಾಗಿ ಬಿಟ್ಟಿದ್ದನು; ಅಷ್ಟರಲ್ಲಿ ಆ ಜನರ ಸದ್ದು ಅವನ ಕಿವಿಗೆ ಬೀಳಲು, ಅದೇನೆಂದು ತಿಳಿಯುವ ಸಲುವಾಗಿ ಆತನು ತನ್ನ ಮುಖವನ್ನು ಅವರ ಕಡೆಗೆ ಹೊರಳಿಸಿದನು. "ಅಲ್ ಅಹಮ್ಮದಲ್ಲಿಲ್ಲಾ!" ಎಂದು ಖಾನನ ಸೇವಕರೂ ಆ ನೆರೆದವರಲ್ಲಿಯ ಕಾಸೀಮಖಾನನೂ ಖಾನನ ಮೋರೆಯನ್ನು ನೋಡಿ, ಆನಂದಸೂಚಕವಾಗಿ ನುಡಿದರು. ಅದನ್ನು ಕೇಳಿ ನಿರಾಶಾದರ್ಶಕ ದನಿಯಿಂದ ಖಾನನು:—"ಎಲೈ ಸೇವಕರೇ, ಸುಮ್ಮನೆ ನನ್ನನ್ನು ಚೇಷ್ಟೆ ಮಾಡಿ ಈ ಕಾಲಕ್ಕೆ ರೇಗಿಗೆಬ್ಬಿಸಬೇಡಿರಿ. ನನ್ನ ದುಃಖವೇ

ನನಗೆ ಸಾಕು-ಸಾಕಾಗಿದೆ. ನಾನು ಎಂಥ ಎದೆಗಾರನು; ಆದರೆ ಇಂದು ನನ್ನ ಕಣ್ಣೊಳಗಿಂದ ಅಶ್ರುಗಳು ಕೂಡ ಉದುರಿದವು ಎಲಾ ನಿಮು; ಈಗ ನೀವೆಷ್ಟೋ ಆನಂದದಲ್ಲಿದ್ದಂತೆ ನನಗೆ ಕಂಡು ಬರುತ್ತದೆ. ಕಾರಣವೇನು? ಖಾನಮುಳು ದೊರೆತಳೊ? ಛೀ ನಿಮು; ಆ ಮಾತು ನನಗೆ ಹೇಗೆ ಸತ್ಯವಾಗಿ ತೋರೀತು? ಎಂದು ನುಡಿದನು.

ಆಗ ಕಾಸೀಮನು ಹುರುಪಿನಿಂದ:— "ಖಾನಸಾಹೇಬರೇ, ನೀವಿನ್ನು ಕೊಂಚವೂ ಶೋಕ ಮಾಡಬೇಡಿರಿ. ಅಲ್ಲಾನ ದಯದಿಂದ ನಿಮ್ಮ ಹೆಂಡತಿಯು ನಿರ್ಧಾಸ್ತಳಾಗಿರುತ್ತಾಳೆ. ಆವಳು ನಮ್ಮ ತಾಯಿಯ ಝನಾನಖಾನೆಯಲ್ಲಿ ಸುಖರೂಪವಾಗಿ ಇವಳು ಅವಳ ಸುಖಕ್ಕಾಗಿ ಬಡವರಾದ ನಮ್ಮಲ್ಲಿ ಎಷ್ಟು ಸಾಧನಗಳಿರುವವೋ, ಅವೆಲ್ಲವನ್ನೂ ನಾವು ಅವಳಿಗೆ ಒದಗಿಸುತ್ತೇವೆ.

ಈ ನುಡಿಯನ್ನು ಕೇಳಿ, ಖಾನನು ಒಮ್ಮೆಲೆ ಎದ್ದು ನಿಂತನು; ಹಾಗು ತನ್ನ ಖಡ್ಗಕ್ಕೆ ಕೈ ನೀಡಿ:—"ಎಲೈ ಪೋರಾ, ನೀನು ನನ್ನ ಚೇಷ್ಟೆ ಮಾಡುವದಿಲ್ಲಷ್ಟೇ? ಇಲ್ಲದಿದ್ದರೆ ನೋಡು, ಈ ಕತ್ತಿಗೆ ಆಹುತಿಯಾದೀ! ನೀನಂದದ್ದೇ ನಿಜವಿದ್ದರೆ, ಯಾ ಅಲ್ಲಾ! ನಾನು ಇಂಥ ಸುದೈವಿಯೆಂಬದು ನನಗೆ ತಿಳಿದಿದ್ದಿಲ್ಲ. ಖಾನಮುಳನ್ನು ಪ್ರವಾಹದಿಂದ ಯಾರು ತೆಗೆದರು? ಪೈಗಂಬರನ ಆಣೆ ಮಾಡಿ ಆತನಿಗೆ ಹೇಳುವೆನು; ಈ ಅಬ್ದುಲ್‌ರಹಿಮಾನಖಾನನ ಕೈಯಲ್ಲಿ ಆತನನ್ನು ಎಷ್ಟು ಉಚ್ಚ ದರ್ಜೆಗೆ ಏರಿಸಲಿಕ್ಕೆ ಶಕ್ಯವಿದೆಯೋ, ಅಷ್ಟಕ್ಕೆ ಏರಿಸುತ್ತೇನೆ ನನ್ನ ಖಾನಮುಳನ್ನು ಜೀವದಿಂದ ತಂದು ಕೊಟ್ಟ ಆ ಮಹನೀಯನಿಗೆ, ನಾನು ನನ್ನ ಅರ್ಧ ಸಂಪತ್ತಿಯನ್ನು ಬೇಕಾದರೂ ಕೊಡುತ್ತೇನೆ. ನನ್ನ ಪ್ರಿಯತಮೆಯ ಜೀವಕ್ಕಿಂತ ಮತ್ತಾವುದರ ಬೆಲೆಯೂ ನನಗೆ ಹೆಚ್ಚಾಗಿ ತೋರುವದಿಲ್ಲ"

ಖಾನನ ಮುಖ್ಯ ಸೇವಕನಾದ ದೌಲತನು:—ಖಾನಸಾಹೇಬ,

ತಮ್ಮೆದುರಿಗೆ ನಿಂತಿರುವ ಈ ತರುಣನೇ ಆ ಬಗೆಯ ಸಾಹಸ ಮಾಡಿದವನು. ಇವನೇ ಆ ಪ್ರಚಂಡವಾದ ಪ್ರವಾಹದಲ್ಲಿ ಹಾರಿ, ಖಾನಮ ಸಾಹೇಬರ ಶರೀರವನ್ನು ಹೊರಗೆ ತಂದವನು.

ಆಗ ಖಾನನು ತನ್ನ ಉಚ್ಚದರ್ಜೆ, ಮಾನ-ಮರ್ಯಾದೆ ಇವುಗಳನ್ನೆಲ್ಲ ಮರೆತು, ಸದ್ಗದಿತ ಅಂತಃಕರಣದಿಂದ ಒಮ್ಮೆಲೆ ಕಾಸೀಮನನ್ನು ಬಿಗಿದಪ್ಪಿಕೊಂಡನು. ಹಿಂದಕ್ಕೆ ಸರಿದು ಖಾನನ ಬಾಹುಪಾಶವನ್ನು ತಪ್ಪಿಸಿಕೊಳ್ಳಲಿಕ್ಕೆ ಕಾಸೀಮನಿಗೆ ಸ್ವಲ್ಪ ಕೂಡ ಅವಕಾಶವು ದೊರೆಯಲಿಲ್ಲ. ಖಾನನು ಕಾಸೀಮನನ್ನು ಪ್ರೇಮಪುರಸ್ಸರವಾಗಿ ಅಪ್ಪಿಕೊಂಡು, ಇನ್ನು ಆತನು ಕಾಸೀಮನ ಕಾಲಿಗೆ ಕೂಡ ಎರಗತಕ್ಕವನು; ಅಷ್ಟರಲ್ಲಿ ಅವನು ಹಿಂದೆ ಸರಿದು ಖಾನನನ್ನು ಎಬ್ಬಿಸಿ: “ಖಾವಿಂದ, ತಾವು ಒಡೆಯರ ಅಧಿಕಾರಿಗಳು. ತಮ್ಮ ಈ ಬಂದಾಗುಲಾಮನು ಇಂದು ತಮ್ಮ ವಿಶೇಷ ಸೇವೆಯನ್ನೇನೂ ಮಾಡಿರುವದಿಲ್ಲ. ಇಂಥ ಸ್ಥಿತಿಯಲ್ಲಿ ಯಾವನೊಬ್ಬ ಪ್ರೇಕ್ಷಕನು ಏನು ಮಾಡಬಹುದಾಗಿತ್ತೋ, ಅದನ್ನೇ ನಾನು ಮಾಡಿರುವೆನು. ಪ್ರಸಂಗದಲ್ಲಿ ಹೆರವರಿಗೆ ಸಹಾಯ ಮಾಡದಿದ್ದರೆ, ಈ ಕಾಸೀಮಗೌಡನು ಜೀವದಿಂದಿದ್ದು ಪ್ರಯೋಜನವೇನು?

ಈ ಕಟ್ಟಕಡೆಯ ನುಡಿಯನ್ನು ನುಡಿಯುವಾಗ ಕಾಸೀಮನಿಗೆ ಒಳ್ಳೇ ಸ್ಫುರಣವುಂಟಾದಂತಾಗಿತ್ತು. ಅದನ್ನು ನೋಡಿ ಹಾಗು ಆತನ ಆವೇಶಯುಕ್ತ ನುಡಿ ಕೇಳಿ, ಖಾನನ ಮನಸ್ಸಿನಲ್ಲಿ ಆತನ ವಿಷಯಕವಾಗಿ ಉಂಟಾದ ಭಕ್ತಿಯು ಅನನ್ವಿತವಾದದ್ದೇ ಸರಿ. ಕಾಸೀಮನ ಗಂಭೀರವಾದ ಮುಖಚರ್ಯೆ, ಧೀರೋದಾತ್ತವಾದ ಮಾತಿನ ಪದ್ಧತಿ ಇವುಗಳಿಂದ ಖಾನನ ಮನಸ್ಸು ಆತನಲ್ಲಿ ಮೋಹಗೊಂಡಿತು.

ಕಾಸೀಮನು ಖಾನಮಳನ್ನು ತನ್ನ ಮನೆಗೆ ಕಳಿಸಿ ಬಂದಿದ್ದರೂ, ಅವನು ತನ್ನ ಮೈಮೇಲಿನ ಒದ್ದೆಬಟ್ಟೆಗಳನ್ನಿನ್ನೂ ತೆಗೆ

ದಿರಲಿಲ್ಲ. ಆ ಹಿದ್ದೆ ಅರಿವೆಗಳ ಮೇಲೆಯೇ ಅವನು ಒಂದು ಗೊಂಗಡಿ ಯನ್ನು ಹೊತ್ತುಕೊಂಡು ಬಂದಿದ್ದನು. ಆತನು ಕೇವಲ ಪ್ರಾಯ ದವನಿದ್ದು, ಆತನ ಎತ್ತರವಾದ ಶರೀರವು ಒಳ್ಳೇ ಹುರಿಕಟ್ಟಾಗಿ ತೋರುತ್ತಿತ್ತು. ಆತನ ಆ ವಿಶಾಲವಾದ ಎದೆ, ಪುಷ್ಟವಾದ ತೋಳು ಹಾಗು ಬಡಕಾದ ನಡು ಇವು ಕಣ್ಣಿಗೆ ಬಿದ್ದೊಡನೆ ಆತನ ಚಾಪ ಲ್ಯವೂ ಕಸುವೂ ಚೆನ್ನಾಗಿ ವ್ಯಕ್ತವಾಗುತ್ತಿದ್ದವು. ಆತನ ಮುಖ ಚರ್ಯೆಯ ಮೇಲಿಂದ ಪ್ರಸಂಗದಲ್ಲಿ ಈತನು ತನ್ನ ಜೀವಕ್ಕೆ ಕೂಡ ಅಂಜದೆ, ಮಂದಿಗೆ ಸಹಾಯ ಮಾಡಬಹುದೆಂದು ಸ್ಪಷ್ಟವಾಗಿ ವ್ಯಕ್ತವಾಗುತ್ತಿತ್ತು. ಆತನಿನ್ನೂ ಯಾವುದೊಂದು ಕೂಸಿನ ತಂದೆಯು ಪಟ್ಟಗಟ್ಟಿರದಿದ್ದರೂ, ಆತನ ಮೋರೆಯ ಮೇಲಿನ ಎಳೆ ಚಿಗುರಿನಂ ತಹ ಮೀಸೆಗಳಿಂದ ಆತನಿಗೆ ಇಪ್ಪತ್ತು ವರ್ಷಗಳಾಗಿರಬಹುದೆಂದು ತೋರುತ್ತಿತ್ತು. ಅಚ್ಚ ಕಪ್ಪುವರ್ಣದ ತೇಜಃಪುಂಜ ನೇತ್ರಗಳು, ಸರಲ ಹಾಗು ಗರುಡಪಕ್ಷಿಯಂತಹ ಚೊಂಚು ಮೂಗು, ದೊಡ್ಡ ಹಾಗು ಅಗಲಾದ ಮೂಗಿನ ಹೊರಳೆ ಮತ್ತು ಗೌರವರ್ಣದ ಮೈ ಬಣ್ಣ ಇವುಗಳ ಮೇಲಿಂದ ಆತನು ಉಚ್ಚಕುಲದೊಳಗೆ ಜನಿಸಿರುವ ನೆಂದು ಚೆನ್ನಾಗಿ ವ್ಯಕ್ತವಾಗುತಲಿತ್ತು. ಆತನ ಗಂಭೀರವರ್ತನೆ, ನಡೆ-ನುಡಿ ಇವುಗಳಿಂದಲೂ ಆತನು ಸಾಮಾನ್ಯ ಕುಲದೊಳಗೆ ಜನ್ಮಿಸಿದವನಲ್ಲೆಂದು ಒಡೆದು ಕಾಣಿಸುತ್ತಿತ್ತು.

"ವಾಹವ್ವಾ! ತುಮ ತೊ ಬಡಾ ಉಮದಾ ಆದಮಿ ಹೋ!" ಎಂದು ಖಾನನು ಕಾಶೀಮನಿಗೆ ಪ್ರೇಮಪುರಸ್ಸರವಾಗಿ ಅನ್ನುತ್ತ:—ತಮ್ಮಾ, ನಿನ್ನನ್ನು ಪುನಃ ಪುನಃ ಅಪ್ಪಿಕೊಳ್ಳಬೇಕೆಂದು ನನಗನಿಸುತ್ತದೆ. ನೀನು ನನ್ನ ಚಿಕ್ಕ ತಮ್ಮನಂತೆ ನನಗನಿಸುತ್ತದೆ. ಅಲ್ಲಾನ ಆಣೆ ಮಾಡಿ ಹೇಳುತ್ತೇನೆ, ನಿನ್ನನ್ನು ನಾನು ಇಂದಿನಿಂದ ನನ್ನ ತಮ್ಮನೆಂದೇ ತಿಳಿಯುತ್ತೇನೆ. ತಮ್ಮಾ, ನೀನು ನನಗೆ ಇನ್ನೊಮ್ಮೆ

ಅಪ್ಪಿಕೊಂಡು, ಖಾನಮುಳನ್ನು ಹೇಗೆ ಬದುಕಿಸಿದೆಯೆಂಬ ಸಂಗತಿ ಯನ್ನು ನನಗೆ ತಿಳಿಸು ತಮ್ಮಾ, ಬಾ; ನೀನು ಅಷ್ಟು ದೂರ ನಿಲ್ಲ ಬೇಡ. ಇಗೋ, ಇತ್ತ, ತೀರ ಸಮೀಪಕ್ಕೆ ಬಂದು ಕೂಡ್ರು. ಬೇಟಾ, ತುಮ ತೋ ಬಡಾ ಉಮದಾ ಆದಮೀ ಹೋ! ಎಂದು ಅಂದನು.

—o—

## ಕಾಸೀಮನ ಪೂರ್ವವೃತ್ತ.

ಕಾಸೀಮನು ಖಾನಮುಳನ್ನು ತೆಗೆದ ಸಂಗತಿಯನ್ನು ಖಾನನಿಗೆ ಸಂಕ್ಷಿಪ್ತವಾಗಿ ತಿಳಿಸುವಾಗ ಆಕೆಯು ತನಗೆ ಕಂಡದ್ದೆಲ್ಲಿ? ತಾನು ಎಲ್ಲಿ ಹಾರಿ ಅವಳನ್ನು ಹೇಗೆ ತೆಗೆದದ್ದು ಮುಂತಾದ ಸಂಗತಿಗಳನ್ನು ಹೇಳಿದನು ಖಾನಮುಳು ಬಿದ್ದ ಸ್ಥಳವು ಇಕ್ಕಟ್ಟನದಿದ್ದ ಮೂಲಕ ಆಕೆಯ ಶರೀರವು ನದಿಯ ಪ್ರವಾಹದ ಕೂಡ ಹರಿದು ಹೋಗುವ ಹಾಗಿದ್ದಿಲ್ಲ ಅದರಿಂದಲೇ ಅವನು ಅದೇ ಸ್ಥಳಕ್ಕೆ ಸರಿಯಾಗಿ ಹಾರಿ ಆಕೆಯನ್ನು ಮೇಲಕ್ಕೆ ತೆಗೆದನು.

ಆ ಸಂಗತಿಯನ್ನು ಕೇಳಿ ಖಾನನಿಗೆ ಕಾಸೀಮನ ಧೈರ್ಯ-ಸಾಹಸಗಳು ಚೆನ್ನಾಗಿ ವ್ಯಕ್ತವಾದವು; ಹಾಗು ಪ್ರತಿಕ್ಷಣಕ್ಕೂ ಕಾಸೀಮನ ಉಪಕಾರದ ಬಗ್ಗೆ ಅವನಲ್ಲಿ ಕೃತಜ್ಞತೆಯು ಹೆಚ್ಚುತ್ತ ಹೋಯಿತು ಆತನು ಆ ಕೂಡಲೆ ಕಾಸೀಮಗೌಡನ ಮನೆಗೆ ಹೋಗಿ, ತನ್ನ ಪ್ರಿಯಪತ್ನಿಯನ್ನು ಕಾಣಬೇಕೆಂದು ಹೊರಟನು; ಆದರೆ ದೌಲತ ಮೊದಲಾದವರು ಖಾನನನ್ನು ತಡೆದು:— "ನೀವು ಈಗ ಅಲ್ಲಿಗೆ ಹೋದರೆ, ಖಾನಮುಸಾಹೇಬರಿಗೆ ಹೆಚ್ಚು ಆರಾಮವೆನಿ ಸುವದರ ಬದಲು ಅವರ ಜೀವಕ್ಕೇ ಅಪಾಯವಾದೀತು. ಆದ್ದರಿಂದ ತುಸ ತಡೆದು ಹೋಗಬಹುದು" ಎಂದಂದರು. ಆ ಮಾತು ಸರಿದೋ ರಿದ್ದರಿಂದ ಖಾನನು ಪುನಃ ಕುಳಿತನು

ಬಳಿಕ ಕಾಸೀಮನು ಖಾನನಿಗೆ:—ಖಾವಿಂದ, ಸದ್ಯಕ್ಕೆ ಖಾನ ಮಸಾಹೇಬರನ್ನು ಕಾಣದಿದ್ದರೂ ತಾವು ನನ್ನ ಮನೆಗೆ ಬರಲಿಕ್ಕೆ ಅಡ್ಡಿಯೇನು? ಅಲ್ಲಿ ಬೇರೆ ಕಡೆಗೆ ವಿಶ್ರಮಿಸಿ, ಬಡವನ ಆತಿಥ್ಯ ವನ್ನು ಸ್ವೀಕರಿಸಬೇಕು, ಎಂದು ಆದರದಿಂದ ವಿನಂತಿ ಮಾಡಿ, ಅವ ನನ್ನು ಮನೆಗೆ ಕರಕೊಂಡು ನಡೆದನು.

ಕಾಸೀಮಗೌಡನ ಮನೆಯು ಆ ಊರಲ್ಲಿಯ ಇತರರ ಮನೆ ಗಿಂತ ಹೆಚ್ಚು ವಿಸ್ತೀರ್ಣವಾದದ್ದಿತ್ತು. ಅದರಿಂದ ಖಾನನ ಜನರೆ ಲ್ಲರೂ ಅಲ್ಲಿಗೆ ಹೋಗಿ ಇಳಿಕೊಂಡರು. ಇವರು ಬರುವ ಮೊದಲು ಅಲ್ಲಿ ಇವರ ಆಗಮನದ ಸಿದ್ಧತೆಯು ನಡೆದಿತ್ತು. ಒಂದು ಸ್ವಚ್ಛ ವಾದ ಜಮಖಾನೆಯು ಪಡಸಾಲೆಯ ಮೇಲೆ ಹಾಸಲ್ಪಟ್ಟದ್ದು, ಅದರ ಮಧ್ಯದಲ್ಲಿ ಒಂದು ಚಿಕ್ಕ ರತ್ನಗಂಬಳಿಯನ್ನು ಹಾಕಿ, ಅದರ ಮೇಲೆ ಗೋಡೆಗೆ ಹೊಂದಿ ಲೋಡು-ತಕ್ಕೆಗಳು ಇರಿಸಲ್ಪಟ್ಟದ್ದವು. ಒತ್ತಟ್ಟಿಗೆ ಒಂದು ಗಾದಿಯು ಹಾಸಲ್ಪಟ್ಟದ್ದು, ಅದರ ಮೇಲೆ ಗಂಜಿ ಮಾಡಿದ ಚಾದರವು ಹಾಸಿತ್ತು ಗಿರ್ದಿ-ತಲೆಗಿಂಬುಗಳು ಕಿನಕಾಫಿನ ಅರಿವೆಯ ಗವಸಣಿಗೆಗಳಿಂದ ಶೋಭಾಯಮಾನವಾಗಿ ಕಾಣುತ್ತಿದ್ದವು ಕಾಲ್ದೆಸೆಗೆ ಉಣ್ಣೆಯ ಚಿತ್ರ-ವಿಚಿತ್ರ ಬಣ್ಣದ ಒಂದು ದಪ್ಪನ್ನ ಪ್ರಾವರಣವು ಮಡಿಕೆ ಮಾಡಿ ಇಡಲ್ಪಟ್ಟಿತ್ತು. ಮೊದಲೇ ದಣಿದು ಬಂದಿದ್ದ ಖಾನನಿಗೆ ಆ ಪಡಸಾಲೆಯೊಳಗಿನ ಆ ಸುವ್ಯವಸ್ಥಿತ ಹಾಸಿಗೆಯನ್ನು ಕಂಡು, ತಾನು ಅದರ ಮೇಲೆ ಅಡ್ಡಾ ಗಬೇಕೆಂಬ ಇಚ್ಛೆಯುಂಟಾಯಿತು ಅಷ್ಟರಲ್ಲಿ ಕಾಸೀಮನ ವೃದ್ಧ ಮಾತೆಯು ಆ ಪಡಸಾಲೆಯ ಹತ್ತರದ ಹಜಾರದಲ್ಲಿ ಮರೆಗೆ ನಿಂತು, ಖಾನಮಸಾಹೇಬಳು ಹುಷಾರಾಗಿರುವಳೆಂದೂ ಆಕೆಗೆ ಈಗ ಗಾಢ ನಿದ್ರೆಯು ಹತ್ತಿದೆಯೆಂದೂ ಹೇಳಿದಳು ಇತ್ತ ಕಾಸೀಮನು ಖಾನ ಸಾಹೇಬರ ಉಪಾಹಾರದ ಸಿದ್ಧತೆ ನಡೆಸಿದ್ದನು. ಕೂಡಲೆ ಅವನು

ತುಸ ಉಪಹಾರ ಮಾಡಿ, ಆತನ ಆಗ್ರಹದ ಮೇರೆಗೆ ಆ ಹಾಸಿಗೆಯ ಮೇಲೆ ಅಡ್ಡಾದನು ಮಾತ್ರ. ಕ್ಷಣದಲ್ಲಿಯೇ ಆತನಿಗೆ ನಿದ್ದೆ ಹತ್ತಿತು.

ಖಾನನಿಗೆ ನಿದ್ರೆಹತ್ತಿದ ಕೆಲ ಹೊತ್ತಿನ ಮೇಲೆ ಕಾಸೀಮನು ಖಾನನ ಸೇವಕರ ನ್ಯಾರಿಯ ವ್ಯವಸ್ಥೆ ಮಾಡಿ, ತನ್ನ ತಾಯಿಯ ಬಳಿಗೆ ಹೋದನು. ತಾಯಿಗೆ ಭೇಟಿಯಾಗಿ, ಖಾನಮಳಿನ್ನೂ ಎಚ್ಚತ್ತಿಲ್ಲೆಂಬವನ್ನು ತಿಳಿದು, ತನ್ನ ಕೋಣೆಗೆ ಹೋಗಿ ಅಡ್ಡಾದನು. ಅಷ್ಟರಲ್ಲಿ ಆತನ ತಾಯಿಯು ಅಲ್ಲಿಗೆ ಬಂದು ಆತನ ತಲೆಯ ಹತ್ತರ ಕುಳಿತು:—"ತಮ್ಮಾ, ನೀನು ಇಂದು ಮಾಡಿದ ಪರೋಪಕಾರದ ಪ್ರತಿಫಲವನ್ನು ನಿನಗೆ ಅಲ್ಲಾನು ನಿಶ್ಚಯವಾಗಿಯೂ ಕೊಡುವನು" ಎಂದು ಗದ್ಗದಿತ ದನಿಯಿಂದ ನುಡಿದಳು. ಹೀಗೆ ನುಡಿಯುವಾಗ ಆ ಮುದುಕೆಗೆ ತನ್ನ ಮಗನ ಧೈರ್ಯ-ಸಾಹಸಗಳ ಬಗ್ಗೆ ಒಂದು ಬಗೆಯ ನಿರತಿಶಯ ಅಭಿಮಾನವೂ, ಈ ಪ್ರಸಂಗದಲ್ಲಿ ತನ್ನ ಮಗನೆಲ್ಲಿಯಾದರೂ ಪ್ರಾಣಾಂತ ಸಂಕಟಕ್ಕೊಳಗಾಗಿದ್ದರೆ, ತನಗಾಗಬಹುದಾಗಿದ್ದ ಕಡು ದುಃಖದ ಕಲ್ಪನೆಯೂ ಹುಟ್ಟುಗೊಡಲು ಆಕೆಯ ಕಣ್ಣೊಳಗಿಂದ ಅಶ್ರುಗಳುದುರಹತ್ತಿದವು. ಆಗ ಆಕೆಗೆ ತನ್ನ ಪತಿಯ ಧೈರ್ಯ-ಸಾಹಸಗಳ ನೆನಪಾಗಲು ಆಕೆಯ ದುಃಖವು ಹೆಚ್ಚರಿಸಿತು.

ತಾಯಿಯು ಕಂಬನಿಗಳನ್ನುದುರಿಸುವದನ್ನು ನೋಡಿ ಕಾಸೀಮನಿಗೂ ವಿಷಾದವೆನಿಸಿತು. ಅವನು ಆಕೆಯನ್ನು ಸಮಾಧಾನಗೊಳಿಸುವದಕ್ಕಾಗಿ:—"ಮಾ, ನೀನು ಹೀಗೆ ಕಣ್ಣೀರು ಹಾಕಬೇಡ. ಅಲ್ಲಾನ ದಯೆಯಿರುವ ವರೆಗೆ ನಾನು ಎಂಥ ಎಡರುಗಳಿಗೂ ಗುರಿಯಾಗಲಾರೆನು. ಅದಿರಲಿ. ತಾಯಿ, ದೇವಕನ್ಯೆಯಂತಹ ರೂಪವತಿಯಾದ ಈ ತರುಣಿಯು ಆ ವೃದ್ಧ ಖಾನನ ಲಗ್ನದ ಹೆಂಡತಿಯೇನು?" ಎಂದು ಪ್ರಶ್ನೆ ಮಾಡಿದನು.

ಕಾಸೀಮನ ತಾಯಿಗೆ ಮಗನ ಆ ವಿಚಿತ್ರ ಪ್ರಶ್ನವನ್ನು ಕೇಳಿ,

ಮಗನ ಮನಸ್ಸಿನೊಳಗಿನ ಗೂಢ ವಿಚಾರವು ಹೊಳೆಯಿತು. ಕಾಶೀಮನು ತನ್ನ ತಾಯಿಯೊಡನೆ ಪ್ರತಿಯೊಂದು ವಿಷಯದಲ್ಲೂ ಸರಳತನದಿಂದ ನಡಕೊಳ್ಳುತ್ತಿದ್ದನು; ಆದರೆ ಈಗ ಅವನ ಮನಸ್ಸಿನಲ್ಲಿ ಉಂಟಾದ ವಿಚಾರವು ವಿಶೇಷ ಪ್ರಕಾರದ್ದಾದ್ದರಿಂದ, ಅವನು ತನ್ನ ತಾಯಿಗೆ ಅದನ್ನು ತಿಳಿಸುವ ಬಗೆ ಹೇಗೆ?

ಆಗ ಕಾಶೀಮನ ತಾಯಿಯು:—"ಬೇಟಾ, ನಿನ್ನ ಮಾತಿನ ಹೊಲವು ನನಗೆ ಗೊತ್ತಾಯಿತು; ಆದರೆ ನೀನು ಆ ವಿಚಾರವನ್ನು ಕೂಡ ಮನಸ್ಸಿನಲ್ಲಿ ತರಬೇಡ. ಹೇಗಯೇ ಇರಲಿ, ಅವರು ದೊಡ್ಡವರು. ಅವರ ಉಸಾಬರಿಯು ಬಡವರಾದ ನಮಗೇಕೆ?" ಎನ್ನಲು,

ಕಾಶೀಮನು ಆ ಬಗ್ಗೆ ಮುಂದೇನೂ ಮಾತಾಡಲಿಲ್ಲ ಆದರೂ ಆತನ ಮನಸ್ಸಿನೊಳಗೆ ಬಹು ದೂರದ ವರೆಗೆ ಮನೆಮಾಡಿಕೊಂಡಿದ್ದ ಆ ವಿಚಾರವು ಮತ್ತೆ ಚೇತನಗೊಂಡಿತು. ಕೆಲ ಹೊತ್ತಿನಲ್ಲಿ ಆತನ ತಾಯಿಯು ಅಲ್ಲಿಂದ ಹೊರಟು ಹೋದಳು. ಅವಳು ತನ್ನ ಕೋಣೆಗೆ ಹೋಗಿ ತಲುಪುವಷ್ಟರಲ್ಲಿ ಖಾನಮುಳು ಎಚ್ಚತ್ತು ಎದ್ದು ಕುಳಿತಳು. ಕಾಶೀಮನ ತಾಯಿಯು ಆಕೆಗೆ ಮೋರೆ ತೊಳೆಯಲಿಕ್ಕೆ ನೀರು ಕೊಟ್ಟು ಉಪಾಹಾರವನ್ನು ಮಾಡಿಸಿದಳು. ಬಳಿಕ ಆ ಮುದುಕಿಯ ವಿನಂತಿಯ ಮೇರೆಗೆ ಖಾನಮುಳು ತನ್ನ ವೃತ್ತಾಂತವನ್ನು ಹೇಳಲಾರಂಭಿಸಿದಳು. ಖಾನಮುಳ ವಿಚಾರದಿಂದ ಮಗ್ನವಾಗಿದ್ದ ಕಾಶೀಮನ ಮನಸ್ಸು, ತನ್ನ ತಾಯಿಯ ಕೋಣೆಯಲ್ಲಿ ಯಾರೋ ಅಪರಿಚಿತ ಹೆಂಗಸಿನ ಮಾತಾಡುವ ದನಿಯನ್ನು ಕೇಳಿ ಅತ್ತ ಎಳೆಯಿತು. ಕೂಡಲೆ ಕಾಶೀಮನು ಮೆಲ್ಲನೆ ಎದ್ದು, ಕಾಲು ಸಪ್ಪಳವಾಗದ ಹಾಗೆ ಹೋಗಿ, ತಾಯಿಯ ಕೋಣೆಯ ಹೊರಮಗ್ಗಲಿನ ಬಾಗಿಲದ ಹಿಂದು ಮೂಲೆಯಲ್ಲಿ ಮರೆಗೆ ನಿಂತು, ಅವರಾಡುವ ಮಾತುಗಳನ್ನು ಕೇಳಹತ್ತಿದನು.

ಖಾನಮುಳು ಆ ಮುದುಕೆಗೆ ತನ್ನ ಎಲ್ಲ ವೃತ್ತಾಂತವನ್ನು

ಸಂಕ್ಷಿಪ್ತವಾಗಿ ಹೀಗೆಂದು ತಿಳಿಸಿದಳು:—"ನಾನು ಹೈದರಾಬಾದದ ವಳು. ನನ್ನ ತಂದೆಯು ಬಹು ಧನಲೋಭಿಯು. ನನ್ನನ್ನು ಎಷ್ಟೋ ತರುಣಜನರು ವರಿಸ ಬಂದರೂ ಆತನು ಈ ವರೆಗೂ ನನ್ನ ವಿವಾಹ ಮಾಡಲಿಲ್ಲ. ಕಡೆಗೆ ನಮ್ಮೂರ ಈ ಅಬ್ದುಲ್‌ರಹಿಮಾನಖಾನನು ಮೈಸೂರದೇಶದ ಕಡೆಗೆ ಹೋಗಿ ಅಪಾರ ಸಂಪತ್ತಿಯನ್ನೂ, ಬಹು ದೊಡ್ಡ ಮಾನ-ಮರ್ಯಾದೆಗಳನ್ನೂ ಸಂಪಾದಿಸಿಕೊಂಡು ಬಂದು ನನ್ನನ್ನು ವರಿಸಲಿಚ್ಛಿಸಲು, ನನ್ನ ತಂದೆಯು ಈತನಿಂದ ಎಷ್ಟೋ ಹಣ ವನ್ನು ಪಡಕೊಂಡು, ನನ್ನನ್ನು ಇವನ ಕೊರಳಿಗೆ ಕಟ್ಟಿರುತ್ತಾನೆ! ಹೈದರಾಬಾದದಲ್ಲಿ ನನ್ನ ವಿವಾಹ ಮಹೋತ್ಸವವು ಬಹು ವಿಜೃಂಭ ಣೆಯಿಂದ ಜರುಗಿತು. ನಾನೀಗ ನನ್ನ ಗಂಡನೊಡನೆ ಆತನ ಚಾಕ ರಿಯ ಸ್ಥಳಕ್ಕೆ, ಅಂದರೆ ಮೈಸೂರ ಪ್ರಾಂತಕ್ಕೆ ನಡೆದಿರುತ್ತೇನೆ. ಪರಿಚಯದವರಾಗಲಿ, ಪ್ರಿಯ ಜನರಾಗಲಿ ಅಲ್ಲಿ ಯಾರೂ ಇರದ್ದ ರಿಂದ, ನನಗೆ ಹೇಗೆ ಹೇಗೋ ಅನಿಸುತ್ತದೆ" ಎಂದೆಂದು, ಅವಳು ಒಂದು ದೀರ್ಘ ನಿಶ್ವಾಸವನ್ನು ಬಿಟ್ಟಳು.

"ತಂಗೀ, ನಿನಗಿಷ್ಟು ಧನ-ದೌಲತ್ತುಗಳೂ, ತಕ್ಕ ತರುಣ ಹಾಗು ಅಧಿಕಾರಸ್ಥ ಪತಿಯೂ ಲಭಿಸಿದ್ದು, ನೀನು ಹೀಗೆ ನಿಟ್ಟುಸಿರು ಗರೆದು ದುಃಖಿಸುವದೇಕೆ"ಂದು ಆ ಮುದುಕಿಯು ಪ್ರಶ್ನೆ ಮಾಡಲು,

"ಮಾಸಾಹೇಬ, ನೀವನ್ನುವಂತೆ ನನಗೆ ಸಂಪತ್ತು, ಮಾನ- ಮರ್ಯಾದೆಗಳಿಗೇನೂ ಕೊರತೆಯಿಲ್ಲ; ಆದರೆ........ಆದರೆ........" ಎಂದು ಸುಮ್ಮನಾಗಲು,

ಆ ಮುದುಕಿಯು:—"ತಂಗೀ, ತಿಳಿಯಿತು-ತಿಳಿಯಿತು ನಿನ್ನ ಮಾತಿನ ಗೂಢವು ನೀನು ನಿನ್ನ ಮಾತಾ-ಪಿತೃಗಳನ್ನು ಬಿಟ್ಟು ಬಹು ದೂರ ಹೋಗಬೇಕಾಗಿರುವದರಿಂದ, ನಿನಗಿಷ್ಟು ದುಃಖವಾಗುವದ ಲ್ಲವೆ? ಆದರೆ ತಂಗೀ, ಹೆಣ್ಣು ಹುಡುಗೆಯರಿಗೆ ತಂದೆ-ತಾಯಿಗಳೆಷ್ಟು

ದಿನದವರು? ತರುಣ ಸತಿಯರಿಗೆ ಅವರ ಮನಸ್ಸಿನ ತಕ್ಕಂಥ ತರುಣ ಪತಿಯು ದೊರೆತ ಬಳಿಕ, ಅವರ ಸುಖಕ್ಕೆ ಎಣೆಯುಂಟೆ?........"

ಖಾನಮಳು ಆ ಮುದುಕಿಯನ್ನು ಮುಂದೆ ಮಾತಾಡಗೊಡದೆ: "ನೀವಂದಂತೆ ನನ್ನ ದೈವದಲ್ಲಿಲ್ಲಿ ಬರೆದಿದೆ? ನನಗೆ ಹಾಗೆ ನನ್ನ ಮನಸ್ಸಿನ ತಕ್ಕ ತರುಣ ಪತಿಯು ಲಭಿಸಿದ್ದರೆ, ನಾನು ಆತನೊಡನೆ ಆ ಮೈಸೂರ ಪ್ರಾಂತಕ್ಕೇ ಏಕೆ, ಅದಕ್ಕೂ ದೂರವಾದ ದೇಶಕ್ಕೆ ಹೋಗುವ ಪ್ರಸಂಗ ಬಂದಿದ್ದರೂ, ಸ್ವಲ್ಪವೂ ದುಃಖಿಸುತ್ತಿರಲಿಲ್ಲ; ಆದರೆ ಮಾಸಾಹೇಬ, ನನ್ನ ತಂದೆಯು ದುಡ್ಡಿನ ಆಶೆಗಾಗಿ ನನ್ನನ್ನು ಒಬ್ಬ ವೃದ್ಧನಿಗೆ ಮಾರಿರುವನು. ಸಮಾಜದಲ್ಲಿ ನನ್ನ ತಂದೆಯಂಥ ಧನಪಿಶಾಚಿಗಳು ನೆಲೆಸಿರುವದರಿಂದಲೇ, ನಮ್ಮಂಥ ತರುಣಿಯರಿಗೆ ಈ ತರದ ದುಃಖವನ್ನು ಆಜನ್ಮ ಅನುಭವಿಸುವ ಪ್ರಸಂಗ ಬರುತ್ತದೆ, ಎಂದಂದು, ಖಾನಮಳು ಮತ್ತೆ ದುಃಖಿಸಲಾರಂಭಿಸಿದಳು.

ಮುದುಕಿಯು ಆಕೆಗೆಷ್ಟೋ ಸಮಾಧಾನದ ಉಕ್ತಿಗಳನ್ನು ಹೇಳತೊಡಗಿದಳು; ಆದರೆ ಮರೆಯಲ್ಲಿ ನಿಂತು ಅವರ ಸಂಭಾಷಣವನ್ನು ಕೇಳುತ್ತಿದ್ದ ಕಾಸೀಮನಿಗೆ ಆ ತರುಣಿಯ ನುಡಿ ಕೇಳಿ ಬಹು ದುಃಖವೆನಿಸಿತು. ಅಲ್ಲಿಂದ ಅವನ ಕಾಲುಗಳೇ ಏಳದಾದವು ಅದರಿಂದ ಅವನು ಮತ್ತೆ ಕೆಲನಿಮಿಷಗಳ ವರೆಗ ಅಲ್ಲಿಯೇ ನಿಂತುಕೊಂಡಿದ್ದನು; ಆದರೆ ಆ ತರುಣಿಯು ಮತ್ತೇನೂ ಮಾತನಾಡಲಿಲ್ಲ ಇನ್ನು ಇಲ್ಲಿ ಹೀಗೆ ನಿಂತುಕೊಳ್ಳುವದು ಸರಿಯಲ್ಲೆಂದು ತಿಳಿದು, ಕಾಸೀಮನು ತನ್ನ ಕೋಣೆಗೆ ಬಂದನು. ಅಷ್ಟರಲ್ಲಿ ಕೋಳಿಗಳು ಕೂಗಲು ಅವನು ಹಾಸಿಗೆಯಿಂದ ಎದ್ದು, ಹೊರಗಿನ ಪಡಸಾಲೆಗೆ ಬಂದನು ಅಲ್ಲಿ ಅಬ್ದುಲ್‌ರಹಿಮಾನಖಾನನೂ, ಆತನ ಸೇವಕರೂ ಗೊರಕೆ ಹೊಡೆಯುತ್ತ ಇನ್ನೂ ಮಲಗಿದ್ದರು. ಅವನು ಆ ಪ್ರಶಾಂತ ಸಮಯದಲ್ಲಿ ಅತ್ತಿತ್ತ ಅಡ್ಡಾಡಿ, ತನ್ನ ಮನಸ್ಸಿನ ಅಸಮಾಧಾನತೆಯನ್ನು ಕಡಿಮೆ

ಮಾಡಿಕೊಳ್ಳಲು ಪ್ರಯತ್ನಿಸಿದನು; ಆದರೆ ಅದು ಸಾಧ್ಯವಾಗದೆ, ಮತ್ತಿಷ್ಟು ಹೆಚ್ಚಿತು ಮಾತ್ರ.

ಕಾಸೀಮ ಅಲ್ಲಿಯು — ಆ ಊರ ಜನರೆಲ್ಲ ಆತನಿಗೆ ಮೀರ ಕಾಸೀಮನೆಂದು ಕರೆಯುತ್ತಿದ್ದರು; ಯಾಕಂದರೆ ಆತನು ಸಯ್ಯದ ಜನಾಂಗಕ್ಕೆ ಸೇರಿದವನಾಗಿದ್ದನು— ಆ ಊರ ಗೌಡನ ಒಬ್ಬನೇ ಒಬ್ಬ ಮಗನಾಗಿದ್ದನು. ಆತನ ತಂದೆಯು ಆ ಪ್ರಾಂತದ ಒಂದು ನಾಮಾಂಕಿತ ಮನೆತನದವನು. ವಿಜಾಪುರ ಬಾದಶಹರ ಕಾಲದಲ್ಲಿ, ಆತನ ವಂಶಜರು ಕರ್ಣಾಟಕದಲ್ಲಿ ಮುಲುಖಗಿರಿಯನ್ನು ಮಾಡಿ ಪ್ರಸಿದ್ಧಿ ಪಡೆದಿದ್ದರು. ಆದರಿಂದಲೇ ಅವರಿಗೆ ಆ ಊರ ಗೌಡಕಿಯು ದೊರೆತಿತ್ತು. ಕಾಸೀಮನ ಪೂರ್ವಜರು ಬಹಳ ಶ್ರೀಮಂತರಿದ್ದರು; ಆದರೆ ಈಚೆಗೆ ಆ ಮನೆತನವು ಅಷ್ಟೊಂದು ಸಂಪತ್ತಿಯುದಾಗಿರಲಿಲ್ಲ. ವಿಜಾಪುರ ಬಾದಶಹರ ಅಳಿಗಾಲವಾಗಿ, ಮರಾಟರು, ನಿಜಾಮನು ಹಾಗು ಹೈದರಲ್ಲಿ ಇವರ ಕಾದಾಟದಲ್ಲಿ ಕಾಸೀಮನ ಮನೆತನವು ಬಹು ಜೀರ್ಣ ಸ್ಥಿತಿಗೆ ಇಳಿದಿತ್ತು. ಅವರ ಇನಾಮುಗ್ರಾಮುಗಳೆಲ್ಲ ಕೈ ಬಿಟ್ಟಿದ್ದವು ಮನೆಯೊಳಗಿನ ಸಂಪತ್ತಿಯೆಲ್ಲ ದಾಳಿಗಾರರ ಪಾಲಾಗಿತ್ತು. ಹೀಗೆ ಕಾಸೀಮನ ಮನೆತನವು ಕಂಗಾಲಗೆಟ್ಟಿದ್ದರೂ ಆ ಮನೆತನದ ಪ್ರಖ್ಯಾತಿಗೂ, ಮಾನ-ಮರ್ಯಾದೆಗಳಿಗೂ ಕುಂದು ಉಂಟಾಗಿರಲಿಲ್ಲ. ಆ ಊರಲ್ಲಿಯೂ ಸಮೀಪದ ಹಳ್ಳಿಗಳಲ್ಲಿಯೂ ಕಾಸೀಮನನ್ನು ಗೌರವಿಸದವರು ಇರಲೇ ಇಲ್ಲೆಂದರೂ ಸಲ್ಲಬಹುದು! ಕಾಸೀಮನ ತಂದೆಯು ನಿಜಾಮನ ಪಕ್ಷ ಕಟ್ಟಿ, ಮರಾಟರ ಕೂಡ ಎದೆಗೊಟ್ಟು ಕಾದಿದ್ದನು; ಆದರೆ ನಮ್ಮ ಕಥಾನಕವು ನಡೆದ ಕಾಲಕ್ಕೆ ಅಂದರೆ ಕ್ರಿಸ್ತಶಕದ ಸರಾಸರಿ ೧೭೬೦ನೇ ಇಸವಿಯ ಸಮಯಕ್ಕೆ ಕಾಸೀಮಗೌಡನ ತಂದೆಯು ತೀರಿ, ಬಹಳ ವರ್ಷಗಳಾಗಿದ್ದವು. ಬಾಲಕನಾದ ಕಾಸೀಮನನ್ನು ಆತನ ತಾಯಿಯೇ ಸಾಕಿ,

ಪ್ರೇಮದಿಂದ ಸಲಹಿ, ದೊಡ್ಡವನನ್ನಾಗ ಮಾಡಿದ್ದಳು.

ಕಾಶೀಮನಾದರೂ ತಂದೆಯಂತೆಯೇ ಧೈರ್ಯ-ಸಾಹಸಗಳಲ್ಲಿ ಮುಂದುವರೆದಿದ್ದನು. ಆದರಿಂದ ಇವನಾದರೂ ಇವರ ಮನೆತನದ ಗೌರವವನ್ನು ಕಾಯ್ದುಕೊಳ್ಳುವನೆಂದು ತಿಳಿದು, ಜನರು ಇವನನ್ನು ಮನ್ನಿಸುತ್ತಿದ್ದರು ಈಗ ಕಾಶೀಮನು ಒಳ್ಳೇ ಬುದ್ಧಿಶಾಲಿಯೂ, ಚಪಲನೂ, ತೇಜಸ್ವಿಯೂ, ಸುರೂಪಿಯೂ ಆಗಿದ್ದನು. ಇಂಥ ಚತುರ ಮನುಷ್ಯನು ಉಚ್ಚದರ್ಜೆಗೆ ಏರಲು ಅದೊಳ್ಳೇ ಸಮಯವಾಗಿತ್ತು. ಯಾಕಂದರೆ, ದೇಶ-ದೇಶಗಳನ್ನು ಗೆದ್ದು ಸ್ವವಶ ಮಾಡಿಕೊಳ್ಳಲಿಕ್ಕೆ ಮರಾಟರು ಒಂದು ನಿಟ್ಟಿನಿಂದ ಹಾತೊರೆಯುತ್ತಿದ್ದರೆ, ಮತ್ತೊಂದು ಕಡೆಯಿಂದ 'ಬೀಳಲಿ-ಏಳಲಿ ತನ್ನ ಮೂಗೇ ಮೇಲು' ಎಂಬ ಸ್ಥಿತಿಯಲ್ಲಿ ಮೆರೆಯುತ್ತಿದ್ದ ನಿಜಾಮನು ಅದೇ ಪದ್ಧತಿಯಿಂದ ತನ್ನ ರಾಜ್ಯವನ್ನು ಬೆಳೆಸುವ ಕ್ರಮ ನಡಿಸಿದ್ದನು. ನಿಜಾಮನ ಪಕ್ಷಕಟ್ಟಿ ಕಾದುವವರಿಗೆ ಆ ಕಾಲಕ್ಕೆ ದೊಡ್ಡ ದೊಡ್ಡ ಪದವಿಗಳೂ, ಪ್ರಸಂಗದಲ್ಲಿ ಸಣ್ಣ ಪುಟ್ಟ ಜಹಗೀರುಗಳೂ ಸಹಜವಾಗಿ ದೊರಕುತ್ತಿದ್ದವು. ಇತ್ತ ದಕ್ಷಿಣ ದೇಶದಲ್ಲಿ ತಮ್ಮ ಸ್ವಪರಾಕ್ರಮದಿಂದ ಊರ್ಜಿತ ದೆಶೆಯನ್ನು ಹೊಂದಿದ್ದ ಹೈದರಅಲ್ಲಿ-ಟೀಪೂಸುಲ್ತಾನರು ಬೇಗನೆ ದೊಡ್ಡ ಪ್ರಾಂತವನ್ನು ಗೆದ್ದುಕೊಳ್ಳುವರೆಂಬ ಸುಚಿಹ್ನಗಳು ತೋರುತ್ತಿದ್ದವು. ಆದರಿಂದ ಸ್ವಪರಾಕ್ರಮದಿಂದ ಮುಂದೆ ಬರಬೇಕೆನ್ನುವ ಸಾಹಸಿಗಳಿಗೆ ಆ ಕಾಲವು ಅನುಕೂಲವಾಗಿತ್ತು.

ಕಾಶೀಮನು ದೊಡ್ಡವನಾಗ ಹತ್ತಿದಂತೆ ಅವನ ಲೋಕಪ್ರಿಯತೆಯೂ ಹೆಚ್ಚಿತು. ಅವನು ದಾಂಡಪಟ್ಟೆ, ಗೋಳೀ ಬಾರ ಮುಂತಾದ ಯುದ್ಧಕ್ಕೆ ಬೇಕಾಗುವ ಶಿಕ್ಷಣವನ್ನು ಸಂಪಾದಿಸಿದನು. ಒಂದೆರಡು ಸಾರೆ ಆ ಊರ ಮೇಲೆ ಏರಿ ಬಂದಿದ್ದ ಪೆಂಡಾರಿಗಳನ್ನು ಹೊಡೆದೋಡಿಸುವಾಗಿನ ಆತನ ಶೌರ್ಯವನ್ನು ಕಂಡು, ಊರ ಜನರು

ಜೊಟ್ಟು ಕಚ್ಚಿದರು ಆಗಿನಿಂದ ಆ ಕಾಸೀಮನು ಪ್ರಸ್ತುತದ ಪರಿಸ್ಥಿತಿಯು ಲಾಭ ಪಡೆದು, ಮರಾಟರು, ನಿಜಾಮು ಇಲ್ಲವೆ ಟೀಪು ಇವರಲ್ಲಿ ಯಾರೊಬ್ಬರ ಸೇವೆ ಮಾಡಿ ತಮ್ಮ ಪೂರ್ವಜರಂತೆ ಬೇಗನೆ ಪ್ರಸಿದ್ಧಿಗೆ ಬರಬೇಕೆಂದು ಆ ಊರ ಜನರು ಹವಣಿಸುತ್ತಿದರು.

ಕಾಸೀಮನಿಗೆ ತನ್ನ ಊರು ಬಿಟ್ಟು ಹೋಗಬೇಕೆಂದು ಅನಿಸುತ್ತಿದ್ದಿಲ್ಲ. ಯಾಕಂದರೆ ಆತನ ಆ ವೃದ್ಧಮಾತೆಗೆ ಆತನ ಹೊರತು ಬೇರೆ ಯಾರೂ ಇರಲಿಲ್ಲ. ಆ ಊರ ಜನರು ಅವನಲ್ಲಿ ಬಹು ಮಮತೆಯಿಂದ ನಡೆದುಕೊಳ್ಳುತ್ತಿದ್ದದರಿಂದ, ಆತನು ಅವರನ್ನು ಬಿಟ್ಟು ಅಗಲದಾಗಿದ್ದನು; ಆದರೆ ಯಾವನೊಬ್ಬ ಸರದಾರನ ದಂಡು ತನ್ನ ಊರ ಸಮೀಪದಿಂದ ಹಾಯ್ದು ಹೋಗುವಾಗ ಇಲ್ಲವೆ ಸಮೀಪದಲ್ಲಿ ನಡೆದ ಯಾವುದೊಂದು ಯುದ್ಧದ ವಾರ್ತೆಯು ಕಿವಿಗೆ ಬಿದ್ದಾಗ, ತಾನು ಯಾವನೊಬ್ಬ ರಾಜನ ದಂಡಿನಲ್ಲಿ ಸೇರಿ, ಪ್ರಸಿದ್ಧನಾಗಬೇಕೆಂದು ಅವನಿಗೆ ಅನಿಸದಿರುತ್ತಿದ್ದಿಲ್ಲ.

ಇಂಥ ಸ್ಥಿತಿಯಲ್ಲಿ ಅಬ್ದುಲ್‌ರಹಿಮಾನಖಾನನ ದಂಡು ಕಾಸೀಮನ ಊರಿಗೆ ಬಂದಿರಲು, ಅವನ ಮನಸ್ಸು ಮತ್ತೆ ಚಂಚಲವಾದದ್ದರಲ್ಲಿ ಆಶ್ಚರ್ಯವೇನು? ಹೇಗಾದರೂ ಮಾಡಿ ತಾನು ಈ ಖಾನನ ಆಶ್ರಯವನ್ನು ಹೊಂದಿ, ತನ್ನ ರಣರಂಗದ ಪ್ರಬಲೇಚ್ಛೆಯನ್ನು ಪೂರ್ಣಗೊಳಿಸಬೇಕೆಂದು ಕಾಸೀಮನು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡನು; ಹಾಗು ಅಲ್ಲಾನನ್ನು ಕುರಿತು:—ದೇವರೇ, ನಾನು ಎಲ್ಲ ಬಗೆಯಿಂದಲೂ ನಿನ್ನ ಆಧೀನನಾಗಿರುತ್ತೇನೆ. ನಿನ್ನ ಇಚ್ಛೆಯಂತೆ ನೀನು ಮಾಡಿಯೇ ಮಾಡುತ್ತೀ; ಆದರೆ ನಾನು ನನ್ನ ಮಾನವೀ ವಾಸನೆಯ ಮೇರೆಗೆ ನಿನ್ನೆಡೆಯಲ್ಲಿ ಪ್ರಾರ್ಥಿಸುವದೇನಂದರೆ, ನನ್ನ ಎಲ್ಲ ಪ್ರಬಲೇಚ್ಛೆಗಳನ್ನೂ ನೀನು ತೀವ್ರವಾಗಿ ಈಡೇರಿಸು!

———

## ಖಾನಮುಳೂ ಕಾಸೀಮನೂ.

ಖಾನನು ಏಳಲಿಕ್ಕೆ ಬಹಳ ತಡವಾಯಿತು. ಆವನು ಎದ್ದ ಕೂಡಲೆ ಅಲ್ಲಿದ್ದವರಿಗೆ ತನ್ನ ಹೆಂಡತಿಯ ಯೋಗಕ್ಷೇಮದ ಬಗ್ಗೆ ಪ್ರಶ್ನೆ ಮಾಡಿದನು. ಆಕೆಯು ಕ್ಷೇಮದಿಂದಿದ್ದು, ಝನಾನಖಾನೆಯಲ್ಲಿ ನಗೆಯುತ್ತ-ಕೆಲೆಯುತ್ತ ಕುಳಿತಿರುವಳೆಂಬದನ್ನು ಕೇಳಿ, ಖಾನನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಆಕೆಯನ್ನು ಆತನು ಅಂತಃಕರಣಪೂರ್ವಕವಾಗಿ ಪ್ರೀತಿಸುತ್ತಿದ್ದನು. ಆದ್ದರಿಂದ ಆವಳನ್ನು ಯಾವಾಗ ನೋಡೇನೆಂದು, ಎಂದು ಅವನ ಕಣ್ಣುಗಳು ಹಾತೊರೆಯುತ್ತಿದ್ದವು. ಅಷ್ಟರಲ್ಲಿ ಕಾಸೀಮನ ತಾಯಿಯು ಖಾನನನ್ನು ಅಂತಃಪುರಕ್ಕೆ ಕರೆತಂದು, ಖಾನಮುಳ ಭೆಟ್ಟಿ ಮಾಡಿಸುವ ವ್ಯವಸ್ಥೆ ನಡೆಸಿದ್ದಳು. ಅಂತಃಪುರದೊಳಗಿನ ಹೆಂಗಳೆಯರೆಲ್ಲ ಬೇರೆ ಕಡೆಗೆ ಹೋದರು. ಬುರುಕೆ ಮೊದಲಾದವುಗಳ ವ್ಯವಸ್ಥೆಯಾದ ಬಳಿಕ, ಖಾನನಿಗೆ ಒಳಗೆ ಬರಲಿಕ್ಕೆ ಹೇಳಿಕಳಿಸಿದಳು. ತೀರ ಉತ್ಸುಕನಾಗಿದ್ದ ಖಾನನು, ಲಗುಬಗೆಯಿಂದ ಅತ್ತ ನಡೆದನು. ಅಲ್ಲಿ ಖಾನಮುಳೊಬ್ಬಳೇ ಇದ್ದು, ಆಕೆಯು ಒಂದು ಸ್ವಚ್ಛವಾದ ಆಸನದ ಮೇಲೆ ಕುಳಿತು ಖಾನನ ಮಾರ್ಗನಿರೀಕ್ಷಿಸುತ್ತಿದ್ದಳು.

ಖಾನನು ಅವಳ ಬಳಿಗೆ ಹೋಗಿ ಮುಗುಳುನಗೆಯಿಂದ ಕುಶಲವನ್ನು ಕೇಳಿದನು. ತಾನು ಇಲ್ಲಿ ಸುಖಿಯಾಗಿದ್ದು, ಪ್ರವಾಹದಲ್ಲಿ ತನಗೆ ಪೆಟ್ಟು ಮುಂತಾದ ಯಾವ ಬಗೆಯ ತ್ರಾಸವೂ ಆಗಲಿಲ್ಲೆಂದು ಅವಳು ಹೇಳಿದಳು. ಬಳಿಕ ಖಾನನು:— ನೀನು ಮುಳುಗಿದಾಗಿನಿಂದ ಈ ಮನೆಯ ಯಜಮಾನನಾದ ಕಾಸೀಮಗೌಡನೆಂಬ ತರುಣನು ನಿನ್ನನ್ನು ತೆಗೆಯುವ ಬಗ್ಗೆಯೂ, ನಮ್ಮೆಲ್ಲರ ಯೋಗಕ್ಷೇಮದ ಬಗ್ಗೆಯೂ ಬಹಳ ಕಷ್ಟಪಟ್ಟಿರುತ್ತಾನಾದ್ದರಿಂದ, ನಾನು ಆತನಿಗೆ ಬಹು ದೊಡ್ಡ ಕಾಣಿಕೆ ಕೊಡಬೇಕೆಂದು ಯೋಚಿಸಿರುತ್ತೇನೆ;

ಆದರೆ ಆತನು ಮರ್ಯಾದಿಸ್ತರ ಮನೆತನದವನಾಗಿರುವದರಿಂದ, ನಾನು ಕೊಡುವ ಇನಾಮನ್ನು ಸ್ವೀಕರಿಸುವನೋ-ಇಲ್ಲವೋ? ಎಂಬ ಬಗ್ಗೆ ನನಗೇ ಶಂಕೆಯುತ್ಪನ್ನವಾಗಿದೆ. ಪ್ರಿಯೇ, ಆತನ ಈ ಉಪ ಕಾರವನ್ನು ಕುಸ ಮಟ್ಟಿಗಾದರೂ ತೀರಿಸಲಿಕ್ಕೆ ನಾವು ಯಾವ ಮಾರ್ಗವನ್ನು ಸ್ವೀಕರಿಸಬೇಕೆಂಬದನ್ನು ತಿಳಿಸು ನೋಡೋಣ, ಎಂದು ಪ್ರಶ್ನೆ ಮಾಡಲು,

ಏನೆಂದಿರಿ? ಕಾಣಿಕೆಯೆಂದು ಕೊಡುವ ಧನವನ್ನು ಅವನು ಸ್ವೀಕರಿಸಲಾರನೇ? ನಾವು ಆತನ ತಾಯಿಗೆ ಅಥವಾ ಆತನ ಹೆಂಡ ತಿಗೆ ಕೆಲವು ವಸ್ತ್ರ-ಒಡವೆಗಳನ್ನು ಕೊಡಬಹುದಲ್ಲವೆ? ನನ್ನ ಪ್ರಾಣ ವುಳಿಸಿದ್ದಕ್ಕಾಗಿ ನಾನು ನನ್ನ ಎಲ್ಲ ಮುತ್ತು-ರತ್ನಗಳ ಒಡವೆಗಳನ್ನೂ ಅವರಿಗೆ ಕೊಟ್ಟು ಬಿಡುತ್ತೇನೆ.

ಛೇ! ಅವನಾಗಲಿ, ಆತನ ತಾಯಿಯಾಗಲಿ ಆ ದಾಗೀನು ಗಳನ್ನು ಮುಟ್ಟಲಿಕ್ಕಿಲ್ಲ ಸಖಿ! ಯಾಕಂದರೆ, ಆ ತರುಣ ವೀರನ ವಿವಾಹವಿನ್ನೂ ಆಗಿರುವದಿಲ್ಲ!

"ಆತನು ಒಳ್ಳೇ ರೂಪವಂತನೂ, ಸೌಜನ್ಯಯುತನೂ, ಕಡು ಗಲಿಯೂ ಆಗಿರುವನೆಂದು ನೀವು ಆಗಲೆ ಹೇಳಲಿಲ್ಲವೆ? ಅಂದ ಮೇಲೆ ಆತನ ವಿವಾಹವಿನ್ನೂ ಏಕೆ ಆಗಿರಲಿಕ್ಕಿಲ್ಲ!............"ಎಂದು ಖಾನ ಮಳು ಮನಸ್ಸಿನಲ್ಲಿ ತನ್ನಷ್ಟಕ್ಕೆ ತಾನೇ ಅಂದುಕೊಂಡಳು.

ಖಾನನು ಮತ್ತೆ ಏನೇನೋ ಅನ್ನುತ್ತಿದ್ದನು; ಆದರೆ ಖಾನ ಮಳ ಚಿತ್ತವು ಸ್ಥಿರವಾಗಿದ್ದರೆ ತಾನೇ ಆಕೆಗೆ ಆ ಮಾತುಗಳು ಕೇಳಿಸ ಬೇಕು? ಅವಳು ತನ್ನನ್ನು ಪ್ರವಾಹದಿಂದ ತೆಗೆದ ಆ ನರವೀರ ತರುಣನ ಸಾಹಸದ ಬಗ್ಗೆ ತನ್ನಲ್ಲಿಯೇ ಆಲೋಚಿಸುತ್ತಿದ್ದಳು. ಎಷ್ಟೋ ಹೊತ್ತು ಚಿಂತಿಸಿದ ನಂತರ ಅವಳು ಒಂದು ನಿಟ್ಟುಸಿರನ್ನು ಬಿಟ್ಟು, ಖಾನನಿಗೆ:—"ಅವನು ಧನವನ್ನಾಗಲಿ, ವಸ್ತ್ರ-ಒಡವೆಗಳ

ನ್ನಾಗಲಿ ತೆಗೆದುಕೊಳ್ಳುವಂತಿರದಿದ್ದರೆ, ಒಳ್ಳೇ ಕುದುರೆಯನ್ನೂ ಶಸ್ತ್ರಾಸ್ತ್ರಗಳನ್ನೂ ಕೊಟ್ಟು, ಆವನನ್ನು ಗೌರವಿಸಬಹುದಲ್ಲವೆ?''

ಪ್ರಿಯೇ, ನಿನ್ನ ಈ ಸೂಚನೆಯು ಮಾತ್ರ ಬಹು ಯೋಗ್ಯವಾದುದು ನೋಡು. ಯಾಕಂದರೆ, ಆತನು ವೀರನಿರುತ್ತಾನೆ; ಸಾಹಸಿಯುರುತ್ತಾನೆ; ಆದರೆ ನಾವು ಕೊಡುವ ಕುದುರೆ-ಕತ್ತಿ-ಢಾಲುಗಳನ್ನು ಉಪಯೋಗಿಸಿ, ತನ್ನ ಖಂಬೀರತನವನ್ನು ವ್ಯಕ್ತಪಡಿಸಲಿಕ್ಕೆ ಆತನಿಗೆ ದಂಡಿನೊಳಗಿನ ಯಾವುದೊಂದು ನೌಕರಿಯಿದ್ದರೆ ತಾನೆ ಅನುಕೂಲವು; ಇಲ್ಲದಿದ್ದರೆ ಅವುಗಳಿಂದ ಅವನಿಗೇನು ಪ್ರಯೋಜನ? ಆವನು ತನ್ನ ಮನೆಯೊಳಗೇ ಇದ್ದರೆ ಅವನಿಗೆ ನಮ್ಮ ಕುದುರೆ-ಶಸ್ತ್ರಾಸ್ತ್ರಗಳಿಂದ ಏನೂ ಪ್ರಯೋಜನವಾಗಲಾರದು ಯಾಕಂದರೆ, ಇಲ್ಲಿ ಯುದ್ಧ ಮಾಡುವ ಪ್ರಸಂಗಗಳುಂಟಾಗುವದು ವಿರಳವೆಂದೇ ಹೇಳಬಹುದು ಯಾವಾಗಾದರೊಮ್ಮೆ ಬರಬಹುದಾಗಿದ್ದ ಪೆಂಡಾರಗಳ ಇಲ್ಲವೆ ಸುಲಿಗೆಗಾರರಾದ ಮರಾಟರ ಕಾಟವನ್ನು ನೀಗಲಾಡಲಿಕ್ಕೆ ಯಾವ ಕೊಂಚ ಸಾಹಸಪಡಬೇಕಾಗುವದೋ ಅದಿಷ್ಟೇ ಸರಿ. ಹಾ! ಈಗ ನನಗೊಂದು ಹೊಸ ಯುಕ್ತಿಯು ಹೊಳೆಯಿತು. ಇದರಿಂದ ನಮಗೂ ಆತನಿಗೂ ಕೂಡಿಯೇ ಸಮಾಧಾನವಾಗುವದೆಂದು ನನ್ನ ಮನೋದೇವತೆಯು ನನಗೆ ಸೂಚಿಸುತ್ತದೆ. ಆತನಿಗೆ ಟೀಪು ಸುಲ್ತಾನನ ದಂಡಿನಲ್ಲಿ ಚಾಕರಿ ಹಚ್ಚಿ ಕೊಡಬೇಕು ಅವನಂಥ ತರುಣ ವೀರನಿಗೆ ಇದಕ್ಕಿಂತ ಅತ್ಯುತ್ತಮವಾದ ಪಾರಿತೋಷಕವು ಬೇರೊಂದಿಲ್ಲವೆಂದು ನನ್ನ ನಿಶ್ಚಿತವಾದ ಮತವಾಗಿರುತ್ತದೆ ನಾನೆಂಥ ಮೂರ್ಖನು! ನನಗೆ ಈ ಹಂಚಿಕೆಯು ಈ ವರೆಗೂ ಏಕೆ ತೋಚಬಾರದು? ಇನ್ನು ಕೆಲ ದಿವಸಗಳಲ್ಲಿಯೇ ನಮ್ಮ ಸುಲ್ತಾನ ಸಾಹೇಬರು ಆ ಫಿರಂಗಿಗಳ ಮೇಲೆ ದಂಡೆತ್ತಿ ಹೋಗಿಯೇ ಹೋಗುವರು. ಆಗ ಬಹು ದೊಡ್ಡ ರಣಸಂಗ್ರಾಮವಾಗುವದು. ಆ ಕಾಲಕ್ಕೆ ಕಾಸೀಮ

ನಂಥ ಕಡುಗಲಿಯು ಟೀಪುವಿನ ಸಹಾಯಕ್ಕೆ ಇದ್ದರೆ ಹಿಳ್ಳೀ ಆನು ಕೂಲವಾದೀತು. ಈ ಕಾಸೀಮನು ಕುಸ ದಿನಗಳಲ್ಲಿಯೇ ತನ್ನ ಧೈರ್ಯ-ಸಾಹಸಗಳಿಂದ ಆ ಟೀಪುವಿನ ದಂಡಿನಲ್ಲಿ ನನ್ನಂತೆ ಹಿಬ್ಬ ಮುಖ್ಯಸ್ಥನಾಗಬಹುದು. ಪ್ರಿಯೇ, ಆತನನ್ನು ನೋಡಿದಾಗಿನಿಂದ ಆತನು ಸದಾ ನನ್ನ ಹತ್ತಿರವೇ ಇರಬೇಕೆಂದು ನನಗನಿಸುತ್ತದೆ. ನನ್ನ ಈ ಹೊಸ ಯುಕ್ತಿಯಿಂದ ಆತನಿಗೆ ಟೀಪುವಿನ ದಂಡಿನಲ್ಲಿ ದೊಡ್ಡ ಚಾಕರಿ ಸಿಗಬಹುದಲ್ಲದೆ, ಆತನು ಸದಾ ನನ್ನ ಹತ್ತರವೂ ಇರಬಹುದಾಗಿದೆ; ಇದೊಂದೇ ಬಾಣದಿಂದ ಎರಡೂ ಬೇಟೆಗಳು ಬಿದ್ದಂತಾಗಬಹುದು ಯಾ ಅಲ್ಲಾ! ಪರವರದಿಗಾರ! ಇಂದು ನನಗೀ ಯುಕ್ತಿಯನ್ನು ಸೂಚಿಸಿದ್ದಕ್ಕಾಗಿ ನಾನು ನಿನ್ನ ದೊಡ್ಡಸ್ತಿಕೆ ಯನ್ನು ಎಷ್ಟು ಹೊಗಳಿದರೂ ಸ್ವಲ್ಪವೇ ಇರುತ್ತದೆ.

ಪ್ರಿಯ ಖಾನಸಾಹೇಬರೇ, ನಿಮ್ಮ ಸೂಚನೆಯು ಬಹು ಯೋಗ್ಯವಾದದ್ದು. ಅವನಿಗೆ ಚಾಕರಿಯನ್ನು ಹಚ್ಚಿಕೊಟ್ಟು, ಸದಾ ಆತನನ್ನು ನಿಮ್ಮ ಬಳಿಯಲ್ಲಿ ಇಟ್ಟುಕೊಂಡರೆ, ನಿಮ್ಮ ಉಭಯತರ ಯೋಗ್ಯತೆಗೂ ತಕ್ಕಂತಾಗುವದು, ಎಂದು ಹೇಳಿ, ಅವಳು ತನ್ನ ಮನಸ್ಸಿನಲ್ಲಿ:—ಪರವರದಿಗಾರ! ನನ್ನನ್ನು ಈ ಶ್ರೀಮಂತ ಮುದಿ ರಣಹದ್ದಿನ ಕೊರಳಲ್ಲಿ ಕಟ್ಟುವದಕ್ಕಿಂತ, ಆ ಬಡ ತರುಣನ ಚರಣ ದಾಸಿಯನ್ನಾಗ ಮಾಡಿದ್ದರೆ ಎಷ್ಟು ಅನುರೂಪವಾಗುತ್ತಿತ್ತು? ತರು ಣಿಯರ ಮನದಳವನ್ನು ಈ ವೃದ್ಧ ಕಪಿಯೇನು ಬಲ್ಲದು? ಖುದಾ! ಮಾನುಷ ಪ್ರಯತ್ನವು ಇಂಥ ಕೆಲಸಗಳಲ್ಲಿ ಕೆಲಸಕ್ಕೆ ಬಾರದೆಂಬದು ಪ್ರತಿಯೊಬ್ಬರ ಮನವರಿಕೆಯಾಗಿದ್ದರೂ, ತನ್ನ ಹಿತ ಸಂಬಂಧದ ಈ ತರದ ಕಡು ಇಕ್ಕಟ್ಟಿನ ಪ್ರಸಂಗಗಳಲ್ಲಿ ಪ್ರತಿಯೊಬ್ಬನೂ ತನ್ನ ಇಚ್ಛೆ ಯಂತೆ ಪ್ರಯತ್ನಿಸಿಯೇ ಪ್ರಯತ್ನಿಸುವನಲ್ಲ........ಎಂದಂದುಕೊಂಡು ಹಿಂದು ಉಷ್ಣಶ್ವಾಸವನ್ನು ಬಿಟ್ಟು, ಸುಮ್ಮನಾದಳು.

ಆದರೆ ಪ್ರಿಯೇ, ಆತನು ನಮ್ಮ ಸಂಗಡ ಬಂದೇ ತೀರುವ ನೆಂಬದು ಮಾತ್ರ ಖಾತ್ರಿಯಾಗಿಲ್ಲ. ಆತನು ವೀರನೂ, ಸಾಹಸಿಯೂ ಆಗಿರುವಂತೆ ಹಳ್ಳೀ ಪಂಡಿತನೂ ಆಗಿರುತ್ತಾನೆ. ಹದಿನೆಂಟು-ಇಪ್ಪತ್ತು ವರ್ಷಗಳ ಇಷ್ಟು ಚಿಕ್ಕ ವಯಸ್ಸಿನಲ್ಲಿ ಆತನಿಗೆ ಕುರಾಣ ಗ್ರಂಥವು ಮುಖೋದ್ಗತವಾಗಿರುವದಲ್ಲದೆ, ಆತನು ಇತರ ಧರ್ಮದವರ ಧಾರ್ಮಿಕ ಹಾಗು ಸಾಮಾಜಿಕ ಗ್ರಂಥಗಳನ್ನು ಪರಿಶೀಲಿಸಿ, ಅವರ ವ್ಯವಹಾರಗಳನ್ನು ಮನದಟ್ಟಾಗಿ ಮಾಡಿಕೊಂಡಿರುವನಂತೆ. ಪ್ರಿಯೇ, ಇನ್ನು ನಿನ್ನೆದುರಿಗೆ ಬಚ್ಚಿಟ್ಟು ನಿನ್ನನ್ನು ಠಕ್ಕಿಸುವದರಿಂದ ಪ್ರಯೋಜನವೇನು? ನಾನು ಇಷ್ಟು ಮುದುಕನಾಗಿರುವೆನು-(ತುಟಿಯನ್ನು ಕಚ್ಚುತ್ತ) ಅಲ್ಲ, ಅಲ್ಲ, ಇಷ್ಟು ದೊಡ್ಡವನಾಗಿರುವೆನು; ಆದರೆ ನನಗೆ ಕುರಾಣದ ಒಂದು ಪುಟವನ್ನು ಕೂಡ ಓದಲಿಕ್ಕೆ ಬರುವದಿಲ್ಲ. ಅದರ ಅರ್ಥವಂತೂ ನನಗೆ ತಿಳಿಯುವದೇ ಇಲ್ಲ ಬರೆಯುವ ಬಾಬಿನಲ್ಲಿ ನನ್ನ ಸಹಿಯ ಅಕ್ಷರಗಳನ್ನು ಕಾರಕೂನರು ಜ್ಞಾಪಿಸಿ ಕೊಡುವಂತೆ ಬರೆಯುವದಕ್ಕೇ ನನಗೆ ಸಾಕು-ಸಾಕಾಗುತ್ತಿರಲು, ಹೆಚ್ಚಿನ ಬರಹದ ಸಾಹಸಕ್ಕೆ ನಾನು ಎಂದೂ ಹೋಗುವದಿಲ್ಲ. (ಮೀಸೆ-ಗಡ್ಡಗಳ ಮೇಲೆ ಹಿಗ್ಗಿನಿಂದ ಕೈಯಾಡಿಸುತ್ತ) ನಮ್ಮಂಥ ಅವ್ವಲ್ ರಣಪಂಡಿತರಿಗೆ ಈ ಓದು-ಬರಹಗಳಿಂದೇನು ಪ್ರಯೋಜನ? ಆದರೆ ಈ ತರುಣ ಕಾಜೀಮುನನ್ನು ನೋಡಿದಾಗಿನಿಂದ ನನಗೆ ಬಹು ನಾಚಿಕೆಯೆನಿಸಹತ್ತಿದೆ. ಆತನು ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಇಷ್ಟೆಲ್ಲ ಜ್ಞಾನವನ್ನು ಸಂಪಾದನೆ ಮಾಡಿದ್ದಲ್ಲದೆ, ಆತನಲ್ಲಿ ರಣಸಾಹಿತ್ಯಕ್ಕೆ ಬೇಕಾಗುವ ಧೈರ್ಯ-ಸಾಹಸಗಳೂ ತುಂಬಿ ತುಳುಕುತ್ತವೆ. ಆದ್ದರಿಂದ ನಾನು ಆತನನ್ನು ಹೇಗಾದರೂ ಮಾಡಿ ನನ್ನೊಡನೆ ಕರೆದೊಯ್ಯುವ ಯತ್ನವನ್ನೇ ಮಾಡುವೆನು. ಓಹೋ! ನೆನಪಾಯಿತು. ನಿನ್ನಿನ ಆ ವಿಪತ್ತಿನೊಳಗೆ ಸಿಕ್ಕ ನಮ್ಮ ಪ್ರಿಯ

ದಾವುದನು ತೀರಿಕೊಳ್ಳಲಿಲ್ಲವೆ? ಅವನ ಸ್ಥಳವೊಂದು ನಮ್ಮ ದಂಡಿ ನಲ್ಲಿ ಹೇಗೂ ತೆರವಾಗಿದೆ. ಈ ಕಾಸೀಮನನ್ನು ನಾನು ಆ ದಾವುದನ ಬದಲಿಯಾಗಿ ನೇಮಿಸಿಕೊಳ್ಳುತ್ತೇನೆ, ಅಂದರಾಯಿತು.

ಏನಂದಿರಿ? ನಮ್ಮ ದಾವುದನು ತೀರಿಕೊಂಡನೆ? ಏತರಿಂದ! ಯಾವಾಗ? ಪ್ರವಾಹದಲ್ಲಿ ಮುಳುಗಿ ಸತ್ತನೇನು? ಎಂದು ಖಾನ ಮಳು ಪ್ರಶ್ನೆ ಮಾಡಿದಳು. ಅಬ್ದುಲ್‌ರಹಿಮಾನಖಾನನ ಹೆಂಡತಿಯಾದ ಖಾನಮಳ ಅಂಕಿತನಾಮವು 'ಅಮೀನೆ' ಎಂದಿದ್ದ ಕಾರಣ ಇನ್ನು ಮುಂದೆ ನಾವು ಆಕೆಯನ್ನು ಅಮೀನೆಯೆಂದೇ ಸಂಬೋಧಿಸುವಾ.

"ಪ್ರಿಯೇ, ಅಮೀನೆ; ಆತನ ಆಯುಸ್ಸೂತ್ರವು ಆಕಸ್ಮಿಕವಾಗಿ ಹರಿದುದರಿಂದ, ಆತನು ಹಾಗೆ ಆ ಸಿಡಲಿನ ಹೊಡತದಿಂದ ಮರಣ ಹೊಂದಿದನು."

"ಅಯ್ಯಯ್ಯೋ!! ನನ್ನನ್ನು ಆ ದಾವುದನೇ ಈ ಮೊದಲೆರಡು ಸಾರೆ ಗಂಡಾಂತರದಿಂದ ಉಳಿಸಿರಲಿಲ್ಲವೆ? ಬಹಳ ಕೆಡಕಾಯಿತು!"

ದೈವಲೀಲೆಯು ಮುಂದೆ ಯಾರ ಆಟವು ಸಾಗುವಂತಿದೆ? ಅದಿ ರಲಿ. ಪ್ರಿಯೇ, ಈ ಕಾಸೀಮಗೌಡನಿಗೆ ಆ ದಾವುದನ ಚಾಕರಿ ಯನ್ನು ಸ್ವೀಕರಿಸಬೇಕೆಂದು ಕೇಳಲೊ?

ಅಮೀನೆಯು ಮನಸ್ಸಿನಲ್ಲಿ ಹಿಗ್ಗಿ ಹುರುಪುಗೊಂಡರೂ ಅದ ನ್ನವಳು ವ್ಯಕ್ತಪಡಿಸದೆ:—ಛೇ-ಛೇ! ಈ ಬಾಬಿನಲ್ಲಿ ನನ್ನಂಥ ಅಬ ಲೆಯ ಮತದಿಂದೇನು ಪ್ರಯೋಜನ? ಆದರೂ ತಾವು ಕೇಳುತ್ತಿರು ವದರಿಂದ, ಹೇಳದಿರುವದು ಹೇಗೆ? ಆ ವೀರನು ಕುಲೀನನು, ಮನೆ ತನಸ್ತನು ಆದುದರಿಂದ ಆತನಿಗೆ ಇಂಥ ಕ್ಷುಲ್ಲಕ ಚಾಕರಿಯು ಹೇಗೆ ಒಪ್ಪಬೇಕು? ನಿಮ್ಮ ಮನಸ್ಸಿಗೆ ಬಂದರೆ ನೀವು ಆತನಿಗೀಗ ಇಷ್ಟೇ ಹೇಳಬೇಕು, "ತರುಣಾ, ನಾನು ನಿನ್ನನ್ನು ಬಹಳವಾಗಿ ಪ್ರೀತಿಸುತ್ತೇನೆ. ನೀನು ನಮ್ಮೊಡನೆ ಬರಬೇಕೆಂದು ನನ್ನ ಇಚ್ಛೆಯಿ

ರುತ್ತದೆ. ನಿನ್ನನ್ನು ದೊಡ್ಡ ಪದವಿಗೇರಿಸುವ ಭಾರವು ನನ್ನ ಮೇಲಿರುತ್ತದೆ. ಅನುಮಾನಪಡದೆ, ನೀನು ನನ್ನೊಡನೆ ಬಂದು ಬಿಡು" ಎಂದು ತಿಳಿಸಿದಳು.

ಪ್ರಿಯೇ, ಹೀಗೇಕೆ ನುಡಿಯುವೆ? ಆ ಕಾಸೀಮನು ತನ್ನ ಜೀವದ ಹಂಗು ತೊರೆದು ನಿನ್ನನ್ನು ಆ ಪ್ರವಾಹದಿಂದ ತೆಗೆದನೆಂದೇ ನಿನ್ನ-ನನ್ನ ಪುನರ್ದರ್ಶನವಾಯಿತು. ಅದಕ್ಕಾಗಿ ನಾನು ನಿನ್ನ ಈ ಕ್ಷುಲ್ಲಕ ಸೂಚನೆಯನ್ನು ಕೂಡ ಮನ್ನಿಸಲಾರೆನೆ? ಈಗಲೆ ಕರೆಸಿ ಆತನಿಗೆ ಈ ಸಂಗತಿಯನ್ನು ತಿಳಿಸುವೆನು ಆತನು ಪಟ್ಟ ಸಾಹಸಕ್ಕಾಗಿ ನಾನು ನನ್ನ ಮೈದೊಗಲಿನ ಜೋಡುಗಳನ್ನು ಮಾಡಿಸಿ ಆತನಿಗೆ ತೊಡಿಸಿದರೂ ಅಲ್ಪವೇ ಆಗಿರುತ್ತದೆ. ಪ್ರಿಯೆ, ನಾನು ನಿನ್ನ ಅನುಮತಿಯಂತೆಯೇ ವರ್ತಿಸುವೆನು. ಆ ಬಗ್ಗೆ ನೀನು ನಿಧಾಸ್ತಳಾಗಿರು. ನಿನಗೀಗ ಆರಾಮವೆನಿಸುವದಷ್ಟೇ? ನಾನಿನ್ನು ಇಲ್ಲಿಂದ ಹೊರಡುವೆನು ಆ ಕಾಸೀಮನ ತಾಯಿಯು ಇಲ್ಲಿ ನಿನಗಾವ ಅನಾನುಕೂಲವೂ ಆಗದಂತೆ ನೋಡಿಕೊಳ್ಳುವಳು. ಹಾಗಾದರೆ ನಾನಿನ್ನು ಹೊರಡಲೋ? ಎಂದೆನ್ನುತ್ತ, ಅಬ್ದುಲ್‌ರಹಿಮಾನಖಾನನು ಅಮೀನೆಯ ಬಳಿಯಿಂದ ಹೊರಟು ಹೋದನು.

ಖಾನನು ಹೊರಟು ಹೋಗುತ್ತಲೆ ಅಮೀನೆಯು ಗಹನವಾದ ವಿಚಾರದಲ್ಲಿ ಮಗ್ನಳಾದಳು. ಆಕೆಯು ಪ್ರವಾಹದಲ್ಲಿ ಮುಳುಗಿದಾಗ ಅರಿವುಗೆಟ್ಟಿದ್ದರೂ ಪೂರಾ ನಿಶ್ಚೇಷ್ಟಿತಳಾಗಿದ್ದಿಲ್ಲ. ತಾನು ಪ್ರವಾಹದಲ್ಲಿ ಬಿದ್ದಾಗ ತನ್ನನ್ನು ಯಾವನೋ ಒಬ್ಬ ಗಂಧರ್ವನಂಥ ಅತ್ಯಂತ ಸುಂದರ ತರುಣನು ಎದೆಗೆ ಅವಚಿಕೊಂಡು ಹೊರಗೆ ತೆಗೆದಂತೆಯೂ, ಆಗ ತಾನು ಒಂದೇ ಒಂದು ಸಾರೆ ಕಣ್ಣು ತೆರೆದು ಆ ಮನ್ಮಥಸದೃಶ ಯುವಕನನ್ನು ನೋಡಿದಂತೆಯೂ, ಆಗಿನ ಆತನ ಆ ರೂಪ-ಲಾವಣ್ಯಗಳನ್ನು ನೋಡಿಯೇ ತನಗೆ ಬಪಳಿ ಬಂದಂತೆಯೂ ಅಮೀನೆಗೆ ಭಾಸ

ವಾಗುತ್ತಿತ್ತು. ಆಗ ಕಂಡ ಆ ರೂಪವನ್ನೇ ಈಗ ಮನದಂದು, ಅಮೀನೆಯು ಆ ರೂಪಚಿಂತನದಲ್ಲಿ ಮಗ್ನಳಾಗಿದ್ದಳು. ಕೆಲ ಹೊತ್ತಿನ ಮೇಲೆ ಅವಳು ತನ್ನಷ್ಟಕ್ಕೆ ತಾನೇ:—"ಮೂರ್ತಿಮಂತ ರುಸ್ತುಮ ನವನು! ಪೂರ್ಣಚಂದ್ರ ಮುಖವದು!!"ಎಂದೆನ್ನುತ್ತ, ಪಕ್ಕದಲ್ಲಿದ್ದ ಗಾದಿ-ಗಿರದಿಗಳ ಹಾಸಿಗೆಯ ಮೇಲೆ ಅಡ್ಡಾದಳು. ಆ ಮೂರ್ತಿಯು ಅಷ್ಟು ಸಾಹಸಿಯೂ ಪಂಡಿತನೂ ಗುಣವಂತನೂ ಆಗಿರುವನೇ? ಅಂಥ ವನ ಲಗ್ನವಿನ್ನೂ ಆಗಿಲ್ಲವೆ? ಆತನು-ಆ ವೃದ್ಧಮಾತೆಯ ಏಕಪುತ್ರನ:- ನಮ್ಮೊಡನೆ ಬರುವದು ಹೇಗೆ? ಆಕೆಯು ಈ ವೃದ್ಧಾಪ್ಯ ದೆಸೆಯಲ್ಲಿ ತನ್ನ ಒಬ್ಬೊಂಟಿಗನಾದ ಮಗನನ್ನು ಅಗಲಿರುವದು ಹೇಗೆ? ಎಂದಂ ದುಕೊಂಡು, ಮತ್ತೆ ಕೆಲ ಹೊತ್ತು ಆಲೋಚಿಸಿ:-ಆ ತರುಣನನು ನನ್ನ ರೂಪವನ್ನು ನೋಡಿರಲಿಕ್ಕೇ ಬೇಕು. ನಾನು ಆಗ ಅಸಾವಧಳಾಗಿದ್ದ ರಿಂದ ಅದನ್ನು ಮುಚ್ಚಿಡುವಂತೆಯೇ ಇರಲಿಲ್ಲ. ಆ ತರುಣನು ನನ್ನನ್ನು ತನ್ನ ಬಾಹುಪಾಶದಲ್ಲಿ ಹಿಡಿಯುವ ವರೆಗೆ ನಾನು ಎಚ್ಚತ್ತಿದ್ದಂತೆ ನನಗೀಗ ಭಾಸವಾಗುತ್ತದೆ. ತದನಂತರ ನಾನು ತೀರ ಅವಸಾನ ಗೆಟ್ಟೆನು. ಬರೇ ಪ್ರವಾಹದಿಂದಾಗಲಿ ನೀರಿನಿಂದಾಗಲಿ ನಾನು ಅಷ್ಟು ಎಚ್ಚರದಪ್ಪಿ ಬೀಳುತ್ತಿರಲಿಲ್ಲ; ಆದರೆ ಮನ್ಮಥಸದೃಶನಾದ ಆ ತರು ಣನು ನನ್ನನ್ನು ತನ್ನ ಬಾಹುಪಾಶದಲ್ಲಿ ಅವಚಿಕೊಂಡು ಹೊರಗೆ ತೆಗೆಯುವಾಗ ನನಗುಂಟಾದ ಪರಮ ಆಹ್ಲಾದದಿಂದಲೇ ನಾನು ಹಾಗೆ ದೇಹಭಾನವಿಲ್ಲದೆ ಬಿದ್ದಿರಬೇಕು. ನಾನು ಹಾಗೆ ಎಚ್ಚರದಪ್ಪಿ ಬಿದ್ದಿರುವಾಗ ನನ್ನ ವಸ್ತ್ರ-ಪ್ರಾವರಣಗಳು ಅತ್ತಿತ್ತ ಸರಿದು, ನನ್ನ ಶರೀರವು ಆತನ ಕಣ್ಣಿಗೆ ಬಿದ್ದಿರಬಹುದಷ್ಟೇ?........ ಆಗ ಅಮೀನೆಗೆ ಬಹು ನಾಚಿಕೆಯುಂಟಾಯಿತು. ಇನ್ನೂ ತಾನು ಅದೇ ಸ್ಥಿತಿಯಲ್ಲಿರು ವೆನೋ-ಏನೋ ಎಂಬಂತೆ ಅವಳು ತನ್ನ ಬುರುಕೆಯನ್ನು ಸಾವರಿಸಿಕೊ ಳ್ಳುತ್ತ:--ಆತನು ನನ್ನನ್ನು ಈ ಅಂತಃಪುರದೊಳಗೆ ತಂದಾಗ ಇಲ್ಲಿದ್ದ

ದೀಪದ ಬೆಳಕಿನಲ್ಲಿ ನನ್ನ ಮುಖವು ಈತನಿಗೆ ಚೆನ್ನಾಗಿ ಕಂಡಿರಬಹುದಲ್ಲವೆ? ನನ್ನನ್ನು ನೋಡಿ ಆತನಿಗೇನೆನಿಸಿರಬಹುದು? ನನ್ನ ಗೆಳತಿಯರಂತೂ ನಾನು ಬಹು ಸುಂದರಳೆಂದು ಅನ್ನುತ್ತಿರುತ್ತಾರೆ........ ಇಷ್ಟರಲ್ಲಿ ಎದುರಿಗೇ ಇಟ್ಟಿದ್ದ ಒಂದು ಸ್ವಚ್ಛವಾದ ಕನ್ನಡಿಯ ಕಡೆಗೆ ಅವಳ ದೃಷ್ಟಿಯು ತಿರುಗಿತು; ಕೂಡಲೆ ಅವಳು ಅದರಲ್ಲಿ ಸಹಜವಾಗಿ ಇಣಿಕಿ ನೋಡಿದಳು. ಆಗ ಅವಳ ಮುಖದಲ್ಲಿ ರೂಪಗರ್ವದಿಂದ ಮತ್ತವಾದ ಕಳೆಯು ಕಾಣಿಸಹತ್ತಿತು. ಆಗ ಅವಳು ಪುನಃ:—ಆ ತರುಣನಿಗೆ ನನ್ನ ಮುಖವನ್ನು ನೋಡಿ ಏನು ಅನಿಸಿರಬಹುದು? ಅವನಿಗೆ ಏನೇ ಅನಿಸಿರಲಿ; ಆದರೆ ನನಗಂತೂ...........ಎಂದಂದು ಅಮೀನೆಯು ಚಂಚಲಚಿತ್ತಳಾದಳು. ಹೀಗೆ ಅವಳ ಮನಸ್ಸು ಅಸ್ವಸ್ಥವಾಗಲಿಕ್ಕೆ ಕಾರಣವೇನಿತ್ತೋ ದೇವರೇ ಬಲ್ಲ!

ಅಮೀನೆಯು ಮೇಲೆ ವಿವರಿಸಿದಂತೆ ಆಲೋಚಿಸುತ್ತ ಆ ಮೆತ್ತನ್ನ ಹಾಸಿಗೆಯ ಮೇಲೆ ಬಿದ್ದುಕೊಂಡಿರಲು, ಅವಳಿಗೆ ಮತ್ತೆ ಜಂಪು ಹತ್ತಿತು; ಆದರೆ ಅದು ಗಾಢನಿದ್ರೆಯಾಗಿರಲಿಲ್ಲ. ಆ ತಂದ್ರಾವಸ್ಥೆಯಲ್ಲಿ ಅವಳಿಗೆ ಪುನಃ ಕಾಸೀಮನ ಮೂರ್ತಿಯು ಕಾಣಿಸಹತ್ತಿತು. ಆತನ ವಿಷಯಕವಾದ ಕೇಳಿ ತಿಳಿದ ಎಷ್ಟೋ ಸಂಗತಿಗಳು ಆಗ ಪುನಃ ಅವಳ ಸ್ಮರಣಕ್ಕೆ ಬಂದವು. ಆ ಮೊದಲಿನ ರಾತ್ರಿಯಲ್ಲುಂಟಾಗಿದ್ದ ಬಿರುಗಾಳಿಯೂ, ಗುಡುಗು-ಮಿಂಚುಗಳೂ ಪುನಃ ಆಗುತ್ತಿರುವಂತೆ ಭಾಸವಾಯಿತು. ಪ್ರಚಂಡ ಪ್ರವಾಹದಿಂದ ಪ್ರಕ್ಷುಬ್ಧವಾದ ಆ ನದಿಯೂ, ಅದರಲ್ಲಿ ತಾನು ಮೇಣೆ ಸಹಿತ ಬೀಳುವದೂ, ತನ್ನನ್ನು ತೆಗೆಯಲು ಪ್ರವಾಹದಲ್ಲಿ ದುಮುಕಿದ ಆ ಕಾಸೀಮನ ವೀರ ಮೂರ್ತಿಯೂ ಪುನಃ ಅವಳಿಗೆ ಆ ತಂದ್ರಾವಸ್ಥೆಯಲ್ಲಿ ಸ್ಪಷ್ಟವಾಗಿ ತೋರಹತ್ತಿದವು. ಆಗ ಕಾಸೀಮನು ಏನೇನೋ ಅನ್ನಹತ್ತಿದನು. ಅಮೀನೆಯು ಅದನ್ನು ಆಲಿಸಿ ಕೇಳಹತ್ತಿದ್ದಳು.

ಅಮೀನೆಯು ಹೀಗೆ ಕದೇಕಧ್ಯಾನಳಾಗಿ ಅಡ್ಡಾಗಲಿಕ್ಕೂ, ಕಾಸೀಮನು ತನ್ನ ತಾಯಿಯೊಡನೆ ಆ ಅಂತಃಪುರದ ಬಳಿಯ ಹುಸಿಯಲ್ಲಿ ನಿಂತು ಮಾತಾಡಹತ್ತಲಿಕ್ಕೂ ಗಂಟೇ ಬಿದ್ದಿತು ಅಮೀನೆಗೆ ಆಕೆಯ ತಂದ್ರಾವಸ್ಥೆಯಲ್ಲಿ ಕೇಳಿದ ಕಾಸೀಮನ ಭಾಷಣವು ಇದೇ ಆಗಿತ್ತು.

ಕಾಸೀಮ:—"ತಾಯಿ, ಖಾನಮಳಿಗೆ ಈಗ ಹೇಗೆ ಅನಿಸುತ್ತಿದೆ? ಅವಳು ಸಂಪೂರ್ಣ ಗುಣವಾಗಿದ್ದಾಳಷ್ಟೇ?"

ತಾಯಿ:—"ಬೇಟಾ, ಆಕೆಯು ವಿರಾಮವಾಗಿದ್ದಾಳೆ. ಅವಳೀಗ ಖಾನಸಾಹೇಬರೊಡನೆ ಮಾತಾಡುತ್ತ ಕುಳಿತಿರುತ್ತಾಳೆ. ಆಕೆಯ ಬಗ್ಗೆ ಇನ್ನು ಯೋಚಿಸುವ ಕಾರಣವಿಲ್ಲ; ಆದರೆ ಮಗೂ, ನಿನ್ನಿನಿಂದಲೂ ನಿನ್ನ ಮುಖವು ಇಷ್ಟು ಚಿಂತಾಕ್ರಾಂತವಾಗಿ ಏಕೆ ತೋರುತ್ತದೆ? ಪ್ರವಾಹದಲ್ಲಿ ಹಾರಿದಾಗ ನಿನಗೆ ನೋವೇನಾದರೂ ಆಯಿತೇನು?"

ಕಾಸೀಮ:-ಛೇ! ಹಾಗೇನೂ ಆಗಿರುವದಿಲ್ಲ; ಆದರೆ ತಾಯೀ, ಏಕೋ ಹೇಳಲಾರೆ; ಆ ಖಾನಮಳನ್ನು ನೋಡಿದಾಗಿನಿಂದ ನನ್ನ ಮನಸ್ಸು ಅಸ್ವಸ್ಥವಾಗಿರುತ್ತದೆ.

ತಾಯಿ:—ಬೇಟಾ, ನಿನ್ನ ಮನಸ್ಸಿನ ಆ ಹುರುಹುರಿಯನ್ನು ಬಿಟ್ಟು ಕೊಡು. ನೀನು ವಿವೇಕಿಯಾಗಿರುವೆ. ಓದಿದವನಿರುತ್ತೀ. ಆ ಪರಸ್ತ್ರೀ ವಿಷಯುಕವಾದ ಹೊಲ್ಲದ ಕಲ್ಪನೆಗೆ ನಿನ್ನ ಮನಸ್ಸಿನಲ್ಲಿ ಕೊಂಚವೂ ಇಂಬುಗೊಡಬೇಡ. ನಾನು ಹೇಳಿದಂತೆ ನಡೆದರೇ ನಿನ್ನ ಕಲ್ಯಾಣವಾಗುವದು. ನೀನು ಸುಜ್ಞನೇ ಆಗಿರುತ್ತೀ.

ಕಾಸೀಮ:—ಈ ಕಾಸೀಮನು ತಾಯಿಯ ಹಿತೋಪದೇಶವನ್ನು ಈ ವರೆಗೆ ಎಂದೂ ಅಲ್ಲಗಳೆಯಲಿಲ್ಲ; ಎಂದ ಬಳಿಕ ಈ ದಿನವಾದರೂ ನಾನು ನಿನ್ನ ಮಾತಿನ ವಿರುದ್ಧ ನಡೆಯುವೆನೇ? ಆದರೆ

ತಾಯಿ, ನನಗೆ ಆ ಖಾನೆಮುಳ ಬಗ್ಗೆ ಬಹಳ ಯೋಚನೆಯುಂಟಾಗಿದೆ.

ಈ ಕಡೆಯ ವಾಕ್ಯವನ್ನು ನುಡಿಯುತ್ತ ಕಾಸೀಮನು ಅಲ್ಲಿಂದ ಸಾಗಿದನು ಅಮೀನೆಯು ಈ ಮೊದಲೇ ಎಚ್ಚತ್ತು, ಆ ಭಾಷಣವು ನಡೆದ ಕಡೆಗೆ ಕಿವಿಗೊಟ್ಟು ಕೇಳುತ್ತಿದ್ದಳು ಇಷ್ಟರಲ್ಲಿ ಕಾಸೀಮನ ಮೂರ್ತಿಯು ಅಲ್ಲಿಂದ ಹಾಯ್ದು ಹೋಯಿತು. ಅಮೀನೆಯು ಹೊಳಗೆ ಕುಳಿತಿದ್ದಳು. ಸುತ್ತಲೂ ಕನಾತು ಇಳಿಬಿಟ್ಟಿದ್ದರು. ಅದ ರಿಂದ ಆಕೆ ಕುಳಿತ ಸ್ಥಳದಲ್ಲಿ ಸಾಧಾರಣವಾಗಿ ಕತ್ತಲು ಬಿದ್ದಿತ್ತು. ಹೊರಗಿನವರಿಗೆ ಅವಳು ಕುಳಿತದ್ದು ಕಾಣುತ್ತಿರಲಿಲ್ಲ; ಆದರೆ ಹೊರಗೆ ಅಡ್ಡಾಡುವವರ ಮುಖಚರ್ಯೆಗಳು ಅಲ್ಲಿದ್ದವರಿಗೆ ಆ ಕನಾತಿನೊಳ ಗಿಂದ ಚನ್ನಾಗಿ ಕಾಣುತ್ತಿದ್ದವು. ಅದರಿಂದ ಕಾಸೀಮನು ಹೊರಟು ಹೋಗುವಾಗ ಆತನ ಸಂಪೂರ್ಣ ರೂಪವು ಆಕೆಗೆ ಚೆನ್ನಾಗಿ ದೃಗ್ಗೋ ಚರವಾಯಿತು. ಅದನ್ನು ನೋಡಿ ಹರ್ಷದಿಂದ ಅವಳ ಮೈಮೇಲೆ ರೋಮಾಂಚಗಳೆದ್ದವು!

—o—

## ಚಾಕರಿಯ ಸಿದ್ಧತೆ.

ಎರಡನೇ ದಿವಸದ ಸಾಯಂಕಾಲವಾಯಿತು. ಎಡಬಲದ ಉದ್ಯಾ ನಗಳೊಳಗಿನ ಸುಗಂಧಮಿಶ್ರಿತ ತಂಗಾಳಿಯು ಸುಳಿದು, ಮಧ್ಯಾ ಹ್ನದ ಬಿಸಿಲು ತಾಪದಿಂದ ಬಳಲಿದ ಮಾನವರ ಮನಸ್ಸನ್ನು ಸಂತೋ ಷಗೊಳಿಸುತ್ತಿತ್ತು ದನ-ಕರುಗಳು ಅಡವಿಯಿಂದ ಹೊರಟು ಊರ ಸಮೀಪಕ್ಕೆ ಬಂದು: "ಅಂಬಾ-ಅಂಬಾ" ಎಂದು ಹಿದರುತ್ತ, ತಮ್ಮ ಕರ-ಮರಿಗಳಿಗೆ ತಮ್ಮ ಆಗಮನದ ಸೂಚನೆಯನ್ನು ಕೊಡುತ್ತಿ ದ್ದವು. ಕತ್ತಲಾದರೆ ತಮ್ಮ ಆಡು-ಕುರಿಗಳು ಎಲ್ಲಿ ತೋಳ, ಚಿರ್ತ ಗಳ ತುತ್ತಾಗುವವೋ ಎಂದು ಭಾವಿಸಿ, ಕುರುಬರು ಅವುಗಳನ್ನು

ದಡ್ಡಿಯ ಕಡೆಗೆ ಹತ್ತಿರದಿಂದ ಸಾಗಿಸುತ್ತಿದ್ದರು. ಅವು "ಬ್ಯಾ-ಬ್ಯಾ" ಎಂದು ಹಿದರುತ್ತ, ಹಿಂದರ ಹಿಂದೊಂದು ತಲೆ ಕೆಳಗೆ ಹಾಕಿ ನಡೆದಿದ್ದವು ದಿನಮಣಿಯು ಅಸ್ತಾಚಲದಿಂದ ಸಮುದ್ರದಲ್ಲಿ ದುಮುಕಿದುದರಿಂದ, ಅವನ ಪ್ರತಿಛಾಯೆಯು ಆಕಾಶದ ತುಂಬೆಲ್ಲ ಪ್ರತಿಬಿಂಬಿತವಾಗಿ ಆರಕ್ತವರ್ಣವನ್ನು ಧರಿಸಿತ್ತು. ಇಂಥ ಪ್ರಶಾಂತ ಸಮಯದಲ್ಲಿ ಆದವಾನಿಯು ಎತ್ತರವಾದ ಕೋಟೆಯು ಬಹುದೂರದ ವರೆಗೆ ಕಾಣುತ್ತಿದ್ದು, ಅತ್ತ ಕಡೆಗೆ ಸೂರ್ಯಪ್ರಕಾಶದಿಂದ ಹೊಳೆಯುವ ಸಣ್ಣ ದೊಡ್ಡ ಹಾಗು ಚಿತ್ರ ವಿಚಿತ್ರ ಬಣ್ಣದ ಮೋಡಗಳು ಬಹು ಸುಂದರವಾಗಿ ತೋರುತ್ತಿದ್ದವು ಆಗ ಖಾನನ ಜನರಿಗೆ ಪೂರ್ವರಾತ್ರಿಯಲ್ಲಿ ಬಿರುಗಾಳಿ ಹಾಗು ಭಯಂಕರ ಮಳೆ ಇವುಗಳಿಂದ ಆದ ಕಷ್ಟಗಳ ಸ್ಮರಣವಾಯಿತು. ಖಾನನ ಅಡಿಗೆಯವನಾದ ಝುಲಫೀಕರಸಂತೂ ಹೌಹಾರಿದನು; ಆದರೆ ಆತನ ಸಂಗಡಿಗರು ನಾವು ಈ ದಿನ ಕಾಸೀಮುಗೌಡನ ಆಶ್ರಯದಲ್ಲಿರುವದರಿಂದ, ನಾವಿನ್ನು ಹೆದರುವ ಕಾರಣವಿಲ್ಲೆಂದು ತಿಳಿಸಿ, ಅವನನ್ನು ಸಮಾಧಾನ ಪಡಿಸಿದರು. ಖಾನನೂ ಕಾಸೀಮನೂ ಒತ್ತಟ್ಟಿಗೆ ಮಾತಾಡುತ್ತ ಕುಳಿತಿದ್ದರು. ಅಷ್ಟರಲ್ಲಿ ಅಡಿಗೆಯಾಗಿರುವದೆಂದು ಝುಲಫೀಕರನು ವರದಿ ಕೊಡಲು, ಖಾನನು ಕಾಸೀಮನೊಡನೆ ಸಂಜೆಯ ನಮಾಜು ಮಾಡಿ ಊಟಕ್ಕೆ ಹೋದನು ಆ ದಿನ ಬೇಕು-ಬೇಕಾದ ಸಾಮಗ್ರಿಗಳನ್ನು ಕಾಸೀಮನು ತಂದು ಕೊಟ್ಟಿದ್ದರಿಂದ, ಝುಲಫೀಕರನು ಬಹು ರುಚಿಕರವಾದ ಪಾಕವನ್ನು ಮಾಡಿದ್ದನು. ಖಾನನೂ ಆತನ ದಂಡಾಳುಗಳೂ ಅಂದು ಆಕಂಠ ಪರ್ಯಂತ ಊಟ ಮಾಡಿದರು. ಅಂದಿನ ಆ ಊಟವು ಅವರಿಗೆ ಪೂರ್ವರಾತ್ರಿಯ ಪಾರಣೆಯೇ ಆದಂತಾಗಿತ್ತು.

ನಂತರ ಎಲ್ಲರೂ ಚಿಲಿಮೆ-ಹುಕ್ಕಾಗಳನ್ನು ಹೊತ್ತಿಸುತ್ತ ತಂಡ ತಂಡಾಗಿ ಕುಳಿತು ಹರಟೆ ಹೊಡೆಯಹತ್ತಿದರು. ಕಾಸೀಮನು ಖಾನ

ನೊಡನೆಯೂ, ದೌಲತ ಮೊದಲಾದ ದಂಡಾಳುಗಳು ಬೇರೆ ದಂಡಾಳುಗಳೊಡನೆಯೂ, ಅಡಿಗೆಯವನು ನೀರಿನೊಡನೆಯೂ ಹೀಗೆ ಅಧಿಕಾರ ಪಾತ್ರದ ತಾರತಮ್ಯದಿಂದ ಆ ಜನರ ಗುಂಪುಗಳಾದವು. ಖಾನನು ತನ್ನ ಆಯುಷ್ಯದೊಳಗಿನ ಎಷ್ಟೋ ಯುದ್ಧದ ಪ್ರಸಂಗಗಳನ್ನು ಕಾಸೀಮನಿಗೆ ಹೇಳುತ್ತ, ತನ್ನ ಸ್ವಭಾವಧರ್ಮದಂತೆ ತನ್ನ ಶೌರ್ಯ ಪರಾಕ್ರಮಗಳ ಸ್ತುತಿಯನ್ನು ತಾನೇ ಮಾಡಿಕೊಳ್ಳುತ್ತ ಆನಂದದಲ್ಲಿ ಮಗ್ನನಾಗಿದ್ದನು ಕಾಸೀಮನೂ ಅಂಥ ಒಂದೆರಡು ಪ್ರಸಂಗಗಳಲ್ಲಿ ತಾನು ಮಾಡಿದ ಸಾಹಸವನ್ನು ಖಾನನಿಗೆ ವಿನಯಪೂರ್ವಕವಾಗಿ ತಿಳಿಸಿದನು. ಬಳಿಕ ಖಾನನು ಏನೋ ಜ್ಞಾಪಿಸಿಕೊಂಡವನಂತೆ ನಟಿಸಿ:—ತಮ್ಮಾ, ಕಾಸೀಮಾ, ನಾನಂತೂ ಸುರಿತ ದಂಡಾಳುವು. ನೀನೂ ನನ್ನಂತೆ ಆಗಲಿಕ್ಕೆ ಅಭ್ಯಂತರವಿಲ್ಲ ನಿನ್ನ ವಯಸ್ಸಿನವನಿರುವಾಗಲೇ ನಾನು ಒಂದು ಸಾಧಾರಣವಾದ ತಟ್ಟು ಕುದುರೆ ಹಾಗು ಮುರುಕ ಕತ್ತಿ ಇವುಗಳೊಡನೆ ಹೋಗಿ, ಹೈದರ ಅಲ್ಲಿಯ ದಂಡಿನಲ್ಲಿ ಸೇರಿದೆನು. ಅದೇ ಆಗಿನ ಆ ದರಿದ್ರ ಅಬ್ದುಲ್‌ರಹಿಮಾನನು ತನ್ನ ಶೌರ್ಯ-ಸಾಹಸಗಳಿಂದ ಮುಂದೆ ಬಂದು, ಈಗ ಸಾವಿರ ಕುದುರೆಯ ಸರದಾರನಾಗಿ, ಟೀಪುವಿನ ದಂಡಿನಲ್ಲಿ ಅಬ್ದುಲ್‌ರಹಿಮಾನಖಾನನಂಥ ಸುರಿತ ಹಾಗು ಪ್ರಸಿದ್ಧ ದಂಡಾಳುವಿಲ್ಲೆಂದು ಪ್ರಸಿದ್ಧಿಪಡೆದಿರುವೆನು. ತಮ್ಮಾ, ನನ್ನಂತೆ ನೀನೂ ಉಚ್ಚ ಪದವಿಗೇರಲಿಕ್ಕಿಲ್ಲೆಂದು ಆದಾರು ಹೇಳಬೇಕು? ನೀನು ನನಗಿಂತ ಸುಂದರ ರೂಪವುಳ್ಳವನಾಗಿರುತ್ತೀ; ನಿನ್ನ ಶರೀರವು ಒಳ್ಳೇ ಬಲವಾದದ್ದಿರುತ್ತದೆ; ಅಲ್ಲದೆ, ನೀನು ಅನೇಕ ವಿದ್ಯೆಗಳಲ್ಲಿ ಪಾರಂಗತನಾಗಿರುತ್ತೀ. ಅಂದ ಬಳಿಕ ನೀನೂ ನನ್ನಂತೆ ಮಹತ್ವಾಕಾಂಕ್ಷಿಯೇಕಾಗಬಾರದು? ನಿನ್ನಲ್ಲಿ ಕಾಣುವಂಥ ಸದ್ಗುಣಗಳು ಇತರರಲ್ಲಿ ವಿರಳವಾಗಿಯೇ ತೋರುವವು. ಆ ಸದ್ಗುಣಗಳಿಂದ ನೀನು ಬಹು ಬೇಗನೆ ಊರ್ಜಿತ

ದೆಸೆಯನ್ನು ಪಡೆಯುವೆ  ಹಾಗಾದರೆ ಕಾಸೀಮಾ, ಹೇಳು; ಆ ಸದ್ಧರ್ಮ ಪಾಲಕನಾದ ರಣಸಿಂಹ ಟೀಪುವಿನ ದಂಡಿನಲ್ಲಿ ಸೇರಿ, ಪ್ರಸಿದ್ಧ ದಂಡಾಳುವಾಗಿ, ಊರ್ಜಿತದೆಸೆಯನ್ನು ಹೊಂದಲಿಕ್ಕೆ ನೀನು ಸಿದ್ಧನಿರುವಿಯೋ-ಇಲ್ಲೋ ಎಂಬದನ್ನು ನನಗೆ ತೀವ್ರವಾಗಿ ತಿಳಿಸು. ತಮ್ಮಾ, ಕಾಸೀಮಗೌಡಾ, ನಿನ್ನನ್ನು ನೋಡಿದಾಗಿನಿಂದ ನಿನ್ನ ಮೇಲೆ ನನಗೆ ಬಹು ಪ್ರೀತಿಯುಂಟಾಗಿದೆ  ಪ್ರತಿಯೊಂದು ಪ್ರಸಂಗದಲ್ಲಿಯೂ ನಾನು ನಿನಗೆ ಸಹಾಯ ಮಾಡುವೆನು  ಬೇಗನೆ ನನ್ನ ಪ್ರಶ್ನೆಗೆ ಉತ್ತರ ಕೊಡು, ಎಂದಂದನು.

ಅದಕ್ಕೆ ಕಾಸೀಮನು:—ಖಾನಸಾಹೇಬರೇ, ತಮ್ಮ ಭಾಷಣ ವನ್ನು ಕೇಳಿ ನನ್ನ ಮನಸ್ಸು ವಿಚಿತ್ರ ಸ್ಥಿತಿಯನ್ನು ಹೊಂದಿ ಹೋಗಿದೆ. ನಾನೂ ನಿಮ್ಮ ಅಂಬೋಣದಂತೆ ಎಷ್ಟೋ ಸಾರೆ ಮನೋರಾಜ್ಯ ಗಳಲ್ಲಿಯೂ ಸ್ವಪ್ನದಲ್ಲಿಯೂ, ದೊಡ್ಡ ದೊಡ್ಡ ಯುದ್ಧಗಳಲ್ಲಿ ಕಾದಿ ಪ್ರಸಿದ್ಧಿಗೆ ಬಂದ ಕಲ್ಪನೆಗಳನ್ನು ಮಾಡುತ್ತಿರುತ್ತೇನೆ; ಆದರೆ ದರಿದ್ರ ನಾದ ನನ್ನ ಆ ಮನೋರಾಜ್ಯಗಳು ನಿಜವಾಗುವ ಬಗೆ ಹೇಗೆ? ಆ ಕಲ್ಪನೆಗಳಿಂದ ನನ್ನ ಮನಸ್ಸಿನ ಶಾಂತಿಯು ಮಾತ್ರ ಅಳಿಯುವದೇ ಹೊರತು, ಫಲಿತಾಂಶವೇನೂ ಆಗುತ್ತಿರುವದಿಲ್ಲ.

ಖಾನನು ನಡುವೇ ಬಾಯಿ ಹಾಕಿ:-ಯಾ ಅಲ್ಲಾ! ಕಾಸೀಮ, ನಾನು ಅಲ್ಲಾನ ಆಣೆಯಾಗಿ ಹೇಳುತ್ತೇನೆ; ನಾನು ನುಡಿದದ್ದು ಕಲ್ಪನೆ-ಕುಶಂಕೆಗಳ ಮಾತಲ್ಲ.  ದಂಡಿನಲ್ಲಿ ಯಾವಾಗಲೂ ನಡೆಯ ಬಹುದಾಗಿದ್ದ ಸಂಗತಿಗಳನ್ನೇ ಉದಾಹರಣೆ ಕೊಟ್ಟು ಹೇಳಿರುವೆನು ತಮ್ಮಾ, ನೀನೇ ನೋಡು; ಹೈದರ ಅಲ್ಲಿಯು ಮೊದಲು ಯಾವ ಸ್ಥಿತಿ ಯಲ್ಲಿದ್ದನು?  ನೀನು ಕುಲೀನನಾದರೂ ಆಗಿರುವೆ; ಆದರೆ ಆತನು ಒಬ್ಬ ಪಂಜಾಬೀ ಫಕೀರನ ಮೊಮ್ಮಗನು! ಅವನ ತಾಯಿಯು ಕಲಬುರ್ಗೆಯ ಸಮೀಪದ ಒಂದು ಹಳ್ಳಿಯ ಜಾಡರವಳು! ತಮ್ಮಾ,

ದೈವವೊಂದು ಅನುಕೂಲಿಸಿದರೆ, ಎಲ್ಲವೂ ಅನುಕೂಲವಾಗುವದೆಂಬ ಮಾತು ಸುಳ್ಳಲ್ಲ. ನಾನಂತೂ ನಿಶ್ಚಯಪೂರ್ವಕವಾಗಿ ಹೇಳುತ್ತೇನೆ: ನಿನ್ನ ಭವ್ಯ ಹಾಗು ವಿಶಾಲವಾದ ಈ ಹಣೆಯಲ್ಲಿ ಏನಾದರೂ ಉತ್ತಮ ಬರಹವೇ ಬರೆದಿರುವದೆಂದು. ಈ ಬಗ್ಗೆ ನೀನು ಸಂಶಯ ಪಡಬೇಡ.

ಕಾಸೀಮ:—ಖಾನಸಾಹೇಬ, ತಮ್ಮ ಈ ಭಾಷಣವಂತೂ ಬಹು ಉತ್ತೇಜನಪರವಾದದ್ದಾಗಿದೆ. ತಾವಂದಂತೆ ನಾನು ಈ ತಾರುಣ್ಯದಲ್ಲಿ ಏನೂ ಮಾಡದೆ ಮನೆ ಹಿಡಕೊಂಡು ಕುಳಿತದ್ದಕ್ಕಾಗಿ ನನಗೆ ಕಡು ಖೇದವೆನಿಸುತ್ತದೆ; ಆದರೆ ಮಾಡಲೇನು? ಆ ಹೇಡಿ ನಿಜಾಮನ ಚಾಕರಿಗಿರಲಿಕ್ಕೆ ನನ್ನ ಮನಸ್ಸು ಒಗ್ಗಲೊಲ್ಲದು; ಮತ್ತು ನಿಮ್ಮ ಕಹರಾವುರಾದ ಆ ಮರಾಟರ ಚಾಕರಿಯನ್ನಂತೂ ನಾನೆಂದೂ ಮಾಡಲಾರೆನು. ಆ ಕಾಫರರ ಚಾಕರಿ ಮಾಡಿ, ನಾನು ನನ್ನ ಧರ್ಮಕ್ಕೆ ಎಂದೂ ಕಲಂಕವನ್ನುಂಟು ಮಾಡಲಾರೆನು.

ಶಾಬಾಸ! ಭಲೇರೆ ಬಹದ್ದರ!! ಹೀಗೆ ನಿನ್ನ ಮನೋನಿಶ್ಚಯವಿದ್ದ ಬಳಿಕ ಯಾವುದೊಂದು ಸಾಧಾರಣ ಕುದುರೆಯನ್ನೇರಿ, ಮುರುಕ ಹತ್ಯಾರ ಧರಿಸಿ, ನೀನೇ ಟೀಪು ಸುಲ್ತಾನನ ಕಡೆಗೆ ಹೋದರೂ, ಆತನು ನಿನಗೆ ತನ್ನ ದಂಡಿನಲ್ಲಿ ಮೇಲ್ತರಗತಿಯ ಚಾಕರಿಯನ್ನು ಕೊಟ್ಟಾನು. ಆ ಬಗ್ಗೆ ನಿನಗೆ ಬೇರೊಬ್ಬರ ಶಿಫಾರಸಿನ ಅವಶ್ಯಕತೆಯೇ ಇರುವದಿಲ್ಲ; ಆದರೆ ಇನ್ನು ನಾನು ನಿನ್ನವನೇ ಇರುತ್ತೇನೆ; ಅಂದ ಬಳಿಕ ನಿನಗಾವ ಯೋಚನೆಯೂ ಬೇಡ. ತಮ್ಮಾ, ಕಾಸೀಮಾ, ಈ ಮೊದಲು ಅಂದಂತೆ ನಿನ್ನನ್ನು ನಾನು ನನ್ನ ಒಡಹುಟ್ಟಿದವನೆಂದು ತಿಳಿದಿರುವೆನಾದ್ದರಿಂದ, ಟೀಪುಸುಲ್ತಾನನ ದಂಡಿನಲ್ಲಿ ನಿನ್ನನ್ನು ತೀವ್ರವೇ ಉಚ್ಚದರ್ಜೆಗೆ ಏರಿಸುತ್ತೇನೆ; ನೀನು ನಿನ್ನ ಜೀವದ ಹಂಗುದೊರೆದು, ನನ್ನ ಪ್ರಿಯಳನ್ನು ಬದುಕಿಸಿರುವದರಿಂದ,

ನಾನು ನಿನ್ನ ಕಲ್ಯಾಣವನ್ನು ಇಷ್ಟರಮಟ್ಟಿಗಾದರೂ ಮಾಡಲಿಚ್ಛಿಸುವದದಾವ ಘನಕಾರ್ಯವು? ತಮ್ಮಾ, ಕಾಶೀಮಾ, ನಿನ್ನಂಥ ನರವೀರನು ಈ ಹಳ್ಳಿಗಾಡಿನಲ್ಲಿ ನೊಣ ಜಾಡಿಸುತ್ತ ಕುಳಿತಿರುವದು ಸರಿಯಲ್ಲ. ನೀನು ನಮ್ಮೊಡನೆ ನಡೆ ಒಲ್ಲೆನೆಂದು ಸರ್ವಥಾ ಹೇಳಬೇಡ, ಕಂಡೆಯಾ!

ಈ ಪ್ರಕಾರ ಅಬ್ದುಲ್‌ರಹಿಮಾನಖಾನನು ಒಳ್ಳೇ ಸ್ಫೂರ್ತಿಯಿಂದ ಹೇಳಿದ್ದನ್ನು ಕೇಳಿ, ಕಾಶೀಮನ ಮೊದಲಿನ ವಿಚಾರಗಳು ಒಡಲಾಗಹತ್ತಿದವು. ಅವನು ಬಾಯಿಂದ ಏನೂ ಹೇಳದೆ, ಖಾನನ ಮೋರೆಯನ್ನು ಮಿಕಿ ಮಿಕಿ ನೋಡುತ್ತ ಏನೋ ಆಲೋಚಿಸಹತ್ತಿದನು. ಆಗ ಖಾನನು ಮತ್ತೆ: ತಮ್ಮಾ, ಈ ಸಾಬನು ಮಾತಿನಲ್ಲಿ ಬಹು ಸವಿಕಟ್ಟನವನು ಕಾಣಿಸುತ್ತಾನೆಂದು ಭಾವಿಸುತ್ತೀಯೇನ? ಈ ವರೆಗೆ ನಾನು ನುಡಿದದ್ದೆಲ್ಲ ನಿನ್ನನ್ನು ಮರುಳು ಮಾಡುವ ಸಲುವಾಗಿಯೇ ಎಂದು ನಿನಗನಿಸಿರಬಹುದಲ್ಲವೆ? ನಿನ್ನ ಮನಸ್ಸಿನಲ್ಲಿ ಆ ಭಾವನೆಯುಂಟಾಗಿದ್ದರೆ, ಅದು ನನ್ನ ತಪ್ಪೇ. ನಾನು ನನ್ನ ಮನಸ್ಸಿನ ಸಮಾಧಾನಕ್ಕಾಗಿ ನಿಷ್ಕಪಟಹೃದಯದಿಂದ ಎಷ್ಟೋ ಹಿತಕರ ಮಾತುಗಳನ್ನಾಡಿದರೂ, ನಿನಗೆ ಅವುಗಳ ಮರ್ಮ ತಿಳಿಯುವಷ್ಟು ನಿನ್ನ ನನ್ನ ಸಲಿಗೆಯಿಲ್ಲ. ಹೆಚ್ಚು ಪರಿಚಯವಿಲ್ಲ............

ಖಾನನನ್ನು ಮತ್ತೆ ಮಾತಾಡಗೊಡದೆ, ಕಾಶೀಮನು:— ಛೀ, ಛೀ, ಖಾನಸಾಹೇಬ, ಹಾಗೆನ್ನಬೇಡಿರಿ. ನೀವು ನನ್ನ ಹಿರಿಯರಂತಿರುವಿರಿ. ನಾನು ಅಷ್ಟು ಅಧೀರನೂ, ಸಂಶಯಗ್ರಸ್ತನೂ ಆಗಿಗುವನೆಂದು ತಿಳಿಯಬೇಡಿರಿ. ತಮ್ಮ ಪಾದಸಾಕ್ಷಿಯಾಗಿ ಹೇಳುತ್ತೇನೆ, ನಾನು ತಮ್ಮ ಮಾತಿನಲ್ಲಿ ವಿಶ್ವಾಸವನ್ನು ತಾಳಿರುವದಿಲ್ಲ. ನಾನು ಈಗ ಆಲೋಚಿಸುವದೇನಂದರೆ:— "ನನ್ನ ಚಾಕರಿ ಹಿಡಿಯುವ ಬೇತಿಗೆ ನಮ್ಮ ತಾಯಿಯು ಏನೆನ್ನುವಳೋ? ನನ್ನ ಹೊರತು ಆಕೆ

ಯನ್ನು ಸಂರಕ್ಷಿಸುವವರಾರೂ ಇಲ್ಲ ನಾವು ಬಡವರು ನನ್ನ ಹಿಂದೆ ಅವಳ ನಿರ್ವಾಹವು ಹೇಗೆ ಸಾಗಬೇಕು!" ಇತ್ಯಾದಿ

ತಮ್ಮಾ, ಬಡತನ ಸಂಬಂಧದ ಆ ವಿಚಾರವನ್ನು ಇನ್ನು ನೀನು ನಿನ್ನ ಮನಸ್ಸಿನಲ್ಲಿ ಕೂಡ ತರಬೇಡ. ನಾನು ನಿನ್ನ ಹಾಗು ನಿನ್ನ ತಾಯಿಯ ನಿರ್ವಾಹದ ಎಲ್ಲ ಭಾರವನ್ನೂ ವಹಿಸುತ್ತೇನೆ. ಆ ಬಳಿ ಕಂತೂ ನೀನು ನಮ್ಮೊಡನೆ ಟೀಪುವಿನ ಚಾಕರಿಗೆ ಬರುವಿಯಷ್ಟೇ?

ಅತ್ಯುತ್ಸಾಹದಿಂದ ಬರುತ್ತೇನೆ; ಆದರೆ ಖಾನಸಾಹೇಬ, ಕಾಲಾಳಿನವನಾಗಿ ಚಾಕರಿ ಮಾಡಲಿಕ್ಕೆ ನನ್ನ ಮನಸ್ಸು ಹಿಗ್ಗುವದಿಲ್ಲ ವಲ್ಲ! ಇನ್ನು ಸವಾರರ ದಂಡಿನಲ್ಲಿ ಸೇರಬೇಕಾದರೆ, ಉತ್ತಮ ಕುದುರೆಯೂ ಎಲ್ಲ ಶಸ್ತ್ರಾಸ್ತ್ರಗಳೂ ಬಳಿಯಲ್ಲಿರಬೇಕಾಗುತ್ತವಂತೆ. ಅವನ್ನೆಲ್ಲ ಬಡವನಾದ ನಾನು ದೊರಕಿಸುವ ಬಗೆ ಹೇಗೆ?

ತಮ್ಮಾ, ಆ ಬಗ್ಗೆ ನೀನು ಕೊಂಚವೂ ಚಿಂತಿಸಬೇಡ. ನಾನೂ ನನ್ನ ಪ್ರಿಯತಮೆಯೂ ನಿನ್ನ ಬಗ್ಗೆ ಏನೇನು ಮಾಡಬೇಕೆಂಬ ದನ್ನು ಇಂದು ಬೆಳಿಗ್ಗೇ ನಿರ್ಧರಿಸುತ್ತೇವೆ. ನಿನ್ನ ಸಾಹಸಕ್ಕಾಗಿ ನಾನು ನಿನಗೆ ಧನವನ್ನಾಗಲಿ, ದಾಗೀನುಗಳನ್ನಾಗಲಿ ಕಾಣಿಕೆ ಯೆಂದು ಕೊಡಲು ಹಾತೊರೆದೆನು; ಆದರೆ ನೀನು ಅವನ್ನು ಸ್ವೀಕ ರಿಸಲಿಕ್ಕಿಲ್ಲೆಂದೂ, ನಿನಗೆ ಉತ್ತಮ ಕುದುರೆ-ಕತಾರಿಗಳನ್ನು ಕೊಟ್ಟು ಟೀಪುವಿನ ದಂಡಿನಲ್ಲಿ ಚಾಕರಿ ಹಚ್ಚಿಕೊಡಬೇಕೆಂದೂ ನಮ್ಮ ಖಾನ ಮಸಾಹೇಬರು ನನಗೆ ಆಜ್ಞಾಪಿಸಿರುತ್ತಾರೆ. ನನ್ನ ಬಳಿಯಲ್ಲಿ ಎರಡು ಅತ್ಯುತ್ತಮ ಕುದುರೆಗಳಿರುತ್ತವೆ. ಅವುಗಳಲ್ಲಿ ಬೇಕಾದ ಒಂದನ್ನು ಅಥವಾ ಎರಡನ್ನು ನೀನು ತಕ್ಕೋ. ನಾಳೆ ಬೆಳಿಗ್ಗೆ ಅವುಗಳನ್ನು ನಿನಗೆ ತೋರಿಸುತ್ತೇನೆ. ಆ ಮೇಲಂತೂ ನೀನು ನನ್ನೊಡನೆ ಖಂಡಿತ ವಾಗಿ ಬರುವೆಯಷ್ಟೇ?

ಖಾನನ ಈ ಮಾತುಗಳನ್ನು ಕೇಳಿ ಕಾಸೀಮನು ಸಂತುಷ್ಟ

ಮನಸ್ಕನಾದನು. ಹರ್ಷಾತ್ತಿರೇಕದಿಂದ ಆತನ ಕಂಠವು ಬಿಗಿದು ಬಂತು. ಆಗ ಗದ್ಗದ ಕಂಠದಿಂದ ಅವನು:—ಖಾನಸಾಹೇಬ, ನನ್ನ ಕೈಯಿಂದ ತಮ್ಮ ಯಾವ ಸೇವೆಯನ್ನು ಮಾಡಲಿಕ್ಕೆ ಸಾಧ್ಯವೋ, ಅದನ್ನು ನಾನು ಮಾಡಲಿಕ್ಕೆ ಸಿದ್ಧನಿರುತ್ತೇನೆ. ನಾನು ನನ್ನ ವೃದ್ಧ ಹಾಗು ಪೂಜ್ಯಮಾತೆಯ ಪಾದಸಾಕ್ಷಿಯಾಗಿ ಹೇಳುತ್ತೇನೆ: ಸಾಯುವ ವರೆಗೂ ನಾನು ನಿಮ್ಮ ಆಜ್ಞೆಯಂತೆ ನಡೆಯುತ್ತೇನೆ. ನನ್ನ ಮನೆ ತನಕ್ಕೆ ಒಪ್ಪಬಹುದಾದ ಚಾಕರಿಯು ನಿಮ್ಮ ಹಾಗು ನಿಮ್ಮ ಪತ್ನಿಯ ಅನುಗ್ರಹದಿಂದ ದೊರಕುತ್ತಿರಲು, ನಾನು ಅದನ್ನು ಆನಂದದಿಂದ ಸ್ವೀಕರಿಸುತ್ತೇನೆ. ಆದಕ್ಕಾಗಿ ಪೈಗಂಬರನು ನಿಮ್ಮನ್ನೂ, ನಿಮ್ಮ ಭಾರ್ಯೆಯನ್ನೂ ಸುಖಿಯಾಗಿರಿಸಲಿ!

ಹಾಗಾದರೆ ತಮ್ಮಾ, ಕಾಸೀಮಾ, ನೀನು ನಿನ್ನ ಹೊರಡುವ ಸಿದ್ಧತೆಯನ್ನು ಆದಷ್ಟು ಬೇಗನೆ ಮಾಡು. ನಾವು ನಾಳೆಯೇ ಇಲ್ಲಿಂದ ತಳ ಕಿತ್ತತಕ್ಕವರು; ಆದರೆ ನಿನ್ನ ಆದರದ ಸತ್ಕಾರವನ್ನು ಸ್ವೀಕರಿಸುವದಕ್ಕಾಗಿ ನಾಳೆಯೊಂದು ದಿನ ಇಲ್ಲಿಯೇ ಇರುತ್ತೇವೆ. ಹೆಚ್ಚು ದಿನ ನಿಲ್ಲಲಿಕ್ಕೆ ನಮಗೆ ಅವಕಾಶವಿಲ್ಲ. ಫಿರಂಗಿಗಳನ್ನು ಬೊಗ್ಗು ಬಡಿಯುವದಕ್ಕಾಗಿ ಹವಣಿಸಿದ್ದ ಟೀಪು ಸುಲ್ತಾನನು ನನ್ನ ಹಾದಿಯನ್ನೇ ನೋಡುತ್ತಿರುವನು. ಆದುದರಿಂದ ನೀನು ನಾಳೆಯೇ ನಿನ್ನ ಇಲ್ಲಿಯ ಎಲ್ಲ ಕೆಲಸಗಳನ್ನು ತೀರಿಸಿಕೊಂಡು, ನಾಡದು ನಮ್ಮೊ ಡನೆ ಹೊರಡಲೇಬೇಕು.

ಬಡವನಾದ ನನ್ನ ಹೊರಡುವ ಸಿದ್ಧತೆಯೆಂದರೇನು? ಈ ಸಂಗತಿಯನ್ನು ನಾನೀಗ ನಮ್ಮ ತಾಯಿಗೆ ತಿಳಿಸುತ್ತೇನೆ.

ವೀರಕಾಸೀಮಸಾಹೇಬರೇ, ಒಳ್ಳೇದು, ನಿಮ್ಮ ಈ ಯೋಜನೆ ಯನ್ನು ನೀವು ನಿಮ್ಮ ತಾಯಿಗೆ ತಿಳಿಸಹೋಗಿರಿ. ನಾನೂ ಇನ್ನು ಖಾನೆ ಮಳ ಸಮಾಚಾರಕ್ಕೆ ತೆರಳುತ್ತೇನೆ. ನೀವು ನಮ್ಮೊಡನೆ ಹೊರಡಲಿಕ್ಕೆ

ಹಿಡಂಬಟ್ಟ ಸುದ್ದಿಯನ್ನು ಕೇಳಿ, ಖಾನಮಳಿಗೆ ಬಹು ಸಂತೋಷ ವಾಗುವದರಲ್ಲಿ ಸಂಶಯವಿಲ್ಲ.

ಬಳಿಕ ಕಾಸೀಮನು ತಾಯಿಯ ಬಳಿಗೆ ಹೋದನು. ಆತನ ತಾಯಿಯು ಅಂತಃಪುರದೊಳಗೆ ಖಾನಮಳ ಕೂಡ ಮಾತನಾಡುತ್ತ ಕುಳಿತಿದ್ದಳಾದ್ದರಿಂದ ಅವನು ಹೊರಗೆ ನಿಂತೇ ಆಕೆಯನ್ನು ಕರೆದನು.

ತಾಯಿಯು ಬಂದೊಡನೆ ಅವಳು ಕಾಸೀಮನನ್ನು ಕುರಿತು:- ಕ್ಯಾಂ ಬೇಟಾ, ಇಷ್ಟೇಕೆ ಅವಸರದಿಂದ ಕರೆದೆ? ಖಾನಸಾಹೇಬ ರಿಗೆ ನಮ್ಮ ಬಡವರ ಆತಿಥ್ಯವು ರುಚಿಸಿತೇ? ಅಡಿಗೆಯು ಚೆನ್ನಾಗಿತ್ತೆ? ಅಡಿಗೆಯವನು ಬಹು ಚನ್ನಾಗಿ ಅಡಿಗೆ ಮಾಡುತ್ತಾನೆ ಖಾನಮ ಳಿಗೆ ಬಂದ ಊಟದ ತಾಟುಗಳಲ್ಲಿ, ಅವಳ ಭಿಡೆ ಮುರಿಯಲಾರದೆ, ನಾನೂ ಹಿಂದರಲ್ಲಿ ಊಟ ಮಾಡಿದೆನು ನನಗಂತೂ ಆ ಅಡಿಗೆಯು ಬಹು ರುಚಿಯಾಗಿ ಹತ್ತಿತು ........

ಆಕೆಯನ್ನು ಮತ್ತೆ ಮಾತಾಡಗೊಡದೆ ಕಾಸೀಮನು:-ಅಮ್ಮಾ, ನಿನ್ನೊಡನೆ ಬಹಳ ಮಾತಾಡುವದಿದೆ? ನೀನು ಶಾಂತಚಿತ್ತದಿಂದ ಅದನ್ನೆಲ್ಲ ಕೇಳಿ, ನನಗೆ ಯೋಗ್ಯವಾದ ಸಲಹೆಯನ್ನು ಕೊಡುವೆಯಾ? ಎಂದು ಗಂಭೀರವಾಣಿಯಿಂದ ನುಡಿಯಲು,

ಆ ವೃದ್ಧಳು ಹಿಳ್ಳೀ ಉತ್ಸುಕತೆಯಿಂದ:—ತಮ್ಮಾ, ಅಂಥ ಯಾವ ಮಹತ್ವದ ಸಂಗತಿಯನ್ನು ಕುರಿತು ನೀನು ನನ್ನೊಡನೆ ಚರ್ಚಿ ಸಬೇಕಾಗಿದೆ? ಹೇಳು, ನಿಶ್ಶಂಕೆಯಿಂದ ಹೇಳು; ಎನ್ನಲು, ಕಾಸೀ ಮನು ಅಬ್ದುಲ್‌ರಹಿಮಾನಖಾನನು ಈ ಮೊದಲು ತನಗೆ ಹೇಳಿದ ಟೀಪು ಸುಲ್ತಾನನ ದಂಡಿನ ಚಾಕರಿಯ ಸಂಬಂಧದ ಸಮಗ್ರ ಸಂಗ ತಿಯನ್ನೂ ಆ ಮುದುಕಿಗೆ ತಿಳಿಸಿದನು.

ಅದನ್ನು ಕೇಳಿ ಆಕೆಯು ಮೊದಲು ಬಹಳ ದುಃಖಿಸಿದಳು; ಆದರೆ ಕಾಸೀಮನು ತನ್ನ ಪ್ರಬಲವಾದ ಇಚ್ಛೆ, ತನ್ನ ಮನೋ

ನಿಶ್ಚಯ, ಸುಮ್ಮನೆ ಮನೆಯಲ್ಲಿ ಕುಳಿತಿರುವ ಬಗ್ಗೆ ತನಗುಂಟಾದ ಲಜ್ಜೆ, ಅನಾಯಾಸವಾಗಿ ಲಭಿಸಿರುವ ಈಗಿನ ಅತ್ಯುತ್ತಮ ಪ್ರಸಂಗ, ಖಾನನ ಅಮೂಲ್ಯವಾದ ಸಹಾಯ ಮುಂತಾದ ಅನೇಕ ಸಂಗತಿಗಳನ್ನು ಆ ಮುದುಕಿಗೆ ಬಹಳೇ ಚಾತುರ್ಯದಿಂದ ತಿಳಿಸಿದನು. ಆಗ ಆ ಮುದುಕಿಯ ದುಃಖದ ವೇಗವು ಎಲ್ಲಿಯೋ ತುಸ ಹಿಮ್ಮೆಟ್ಟಿ, ಅವಳು ಅವನ ವಿಚಾರಕ್ಕೆ ತುಸ ಅನುಕೂಲ ಮತವನ್ನಿತ್ತಳು. ತಾಯಿಯು ಸ್ವಲ್ಪ ಅನುಕೂಲಳಾದೊಡನೆ ಕಾಸೀಮನು ಬಹಳೇ ಹುರುಪಿನಿಂದ:—ತಾಯೀ, ನೀನು ನನ್ನನ್ನು ಬಹಳವಾಗಿ ಪ್ರೀತಿಸುತ್ತೀ. ಆದುದರಿಂದ "ನಾನು ಇಂದು ಇಷ್ಟು ದಂಡಿನ ಮುಖ್ಯಸ್ಥನಾಗಿರುವೆನು; ಇಂಥ ಇಂಥ ಯುದ್ಧಗಳಲ್ಲಿ ವಿಜಯ ಸಂಪಾದಿಸಿರುವೆನು" ಎಂಬ ಸಂಗತಿಯು ನನ್ನ ಪತ್ರಗಳು ಬಂದು ತಲುಪಿದಾಗ ನಿನಗೆ ಬಹು ಆನಂದವಾಗಲಿಕ್ಕಿಲ್ಲವೆ? ಆ ಫಿರಂಗಿಗಳೊಡನೆ ಆಗುವ ಸಂಗ್ರಾಮದಲ್ಲಿ "ನನಗೆ ಇಷ್ಟು ಬಕ್ಷೀಸು ಹಾಗು ಇಂಥ ಕಿತಾಬು ದೊರೆಯಿತೆ"ಂದು ನಾನು ನಿನಗೆ ತಿಳಿಸಿದಾಗ, ನಿನಗೆ ಮಿಗಿಲಾದ ಸಂತೋಷವಾಗಲಾರದೇ? "ಚಾಕರಿಯ ಸಲುವಾಗಿ ನಾನು ಇವನನ್ನು ಹೋಗಗೊಡದಿದ್ದರೆ ಇವನಿಗೆ ಇಂಥ ಬಹುಮಾನಗಳು ದೊರಕುತ್ತಿದ್ದವೇ?" ಎಂದು ಆಗ ನಿನಗನಿಸಲಾರದೇ? ಸ್ವಧರ್ಮರಕ್ಷಣೆಗಾಗಿ ತನ್ನ ಶಕ್ತಿ ಮೀರಿ ಕಾದುವದು ಪ್ರತಿಯೊಬ್ಬನ ಕರ್ತವ್ಯವಲ್ಲವೆ? ನೀನೇ ನೋಡು, ಆ ಕಾಫರರಾದ ಫಿರಂಗಿಗಳು ನಮ್ಮ ಧರ್ಮದವರ ಬಂಗಾಲ ಹಾಗು ಔಂಧ ರಾಜ್ಯಗಳನ್ನು ಸಂಪೂರ್ಣವಾಗಿ ನುಂಗಲಿಲ್ಲವೆ? ದಕ್ಷಿಣ ಕರ್ನಾಟಕದೊಳಗಿನ ಅರ್ಕಾಟದ ನವಾಬರ ರಾಜ್ಯಗಳನ್ನು ನಾಮಶೇಷವಾಗಿ ಮಾಡಲಿಲ್ಲವೆ? ಆ ಫಿರಂಗಿಗಳು ಬಹಳೇ ಚತುರರೂ, ಎಲ್ಲ ದೇಶಗಳನ್ನು ಗೆದ್ದು ತಮ್ಮ ರಾಜ್ಯ ಬೆಳಿಸಿಕೊಳ್ಳುವ ಲಾಲಸೆಯುಳ್ಳವರೂ ಆಗಿರುತ್ತಾರೆ. ಇತ್ತ ಮರಾಟರಂತೂ ಉತ್ತರ ಹಾಗು ದಕ್ಷಿಣ

ಹಿಂದುಸ್ತಾನಗಳನ್ನು ಗೆದ್ದು, ನಿಜಾಮನ ಹಿಂದೊಂದೇ ಪ್ರಾಂತ ಗಳನ್ನು ಸ್ವವಶ ಮಾಡಿಕೊಳ್ಳಹತ್ತಿರುತ್ತಾರೆ. ತಾಯಿ, ನೀನೇ ಹೇಳು ತ್ತಿದ್ದಿಯಲ್ಲವೆ? ಯಾರಿಗೆ ಮುಸಲ್ಮಾನೀ ಧರ್ಮದ ಬಗ್ಗೆ ನಿಜವಾದ ಅಭಿಮಾನವಿರುವದೋ, ಅವರೆಲ್ಲರೂ ಈ ಕಾಲಕ್ಕೆ ಟೀಪುಸುಲ್ತಾನನ ಕಡೆಗೇ ಹೋಗುತ್ತಿರುತ್ತಾರೆಂದು ಧರ್ಮದ ಬೆಂಬಲವಿದ್ದುದರಿಂ ದಲೇ ಆ ಟೀಪುವು ಸ್ವಪರಾಕ್ರಮದಿಂದ ದಿನಾಲು ಹಿಂದೊಂದೇ ಎಂದು ದಕ್ಷಿಣದಲ್ಲಿ ಇಷ್ಟು ದೊಡ್ಡ ರಾಜ್ಯವನ್ನು ಸಂಪಾದಿಸಿರು ತ್ತಾನೆ. ಆತನು ಈಗ ಹಳ್ಳೀ ವೈಭವಶಾಲಿಯಾಗಿರುತ್ತಾನೆ. ತಾಯಿ, ನನ್ನ ದೈವದಲ್ಲಿ ನಾನು ತುಸಮಟ್ಟಿಗಾದರೂ ವೈಭವಶಾಲಿಯಾಗ ಬೇಕೆಂದು ಇದ್ದರೆ, ನಾನು ಆ ರಣಸಿಂಹ ಟೀಪು ಸುಲ್ತಾನನ ಚಾಕರಿ ಮಾಡಿದರೇ ನನಗದು ಲಭಿಸಬಹುದಾಗಿದೆ. ಇಲ್ಲದಿದ್ದರೆ ನಾನು ಕಡೆಯುವರೆಗೂ ಈ ಕಂಗಾಲಾವಸ್ಥೆಯಲ್ಲಿಯೇ ಇರಬೇಕಾಗುವದು ನಿಶ್ಚಯ. ನನ್ನ ಮನೆತನದ ವೈಭವಶಾಲಿತ್ವವನ್ನು ಪುನಃ ಬೆಳಸ ಬೇಕೆಂದು ನಾನು ಎಷ್ಟೋ ದಿನಗಳಿಂದ ಮನಸ್ಸಿನಲ್ಲಿ ಆಲೋಚಿಸು ತ್ತಿರುವೆನು; ಆದರೆ ತಾಯಿ, ನೀನು ದಂಡಿನ ಚಾಕರಿಗೆ ಹೋಗ ಲಿಕ್ಕೆ ಸಿದ್ಧನಾಗಿರುವ ನನಗೆ ಅಡ್ಡಿಮಾಡಿ, ನನ್ನ ಪ್ರಬಲವಾದ ಇಚ್ಛೆ, ಮನೋನಿಶ್ಚಯ, ಮಹತ್ವಾಕಾಂಕ್ಷೆ, ಕೀರ್ತಿಲಾಲಸೆ, ವೈಭವ ಹಾಗು ದ್ರವ್ಯಪ್ರಾಪ್ತಿ ಇವುಗಳನ್ನೆಲ್ಲ ಮುಳುಗಿಸಿ ಬಿಡುವೆಯಾ? ತಾಯಿ, ನಾನು ನಿನಗೆ ನಿಜವಾಗಿ ಪ್ರಿಯನಾಗಿದ್ದರೆ, ನೀನು ನನ್ನ ಇಚ್ಛೆಗೆ ಅಡ್ಡ ಬರಬೇಡ, ಎಂದು ಬಹು ಪರಿಯಾಗಿ ಹೇಳಿದನು.

ಆ ವೃದ್ಧಳಿಗೆ ಮಗನ ಎಲ್ಲ ಮಾತುಗಳೂ ದಿಟವಾಗಿ ಕಂಡವು; ಆದರೆ ಮಾತೃಪ್ರೇಮವೆಂಬುದು ಅದ್ವಿತೀಯವಾದ ವಸ್ತುವಾಗಿರುತ್ತ ದಷ್ಟೇ? ಆಗ ಅವಳು ಹಿಬ್ಬೊಂಟಿಗನಾದ ತನ್ನ ಆ ಮಗನನ್ನು ಹತ್ತಿರ ಎಳೆದುಕೊಂಡಳು. ಅವನನ್ನು ದೃಢವಾಗಿ ಆಲಿಂಗಿಸಿ, ದೊಡ್ಡ

ದನಿ ತೆಗೆದು ಅಳಲಾರಂಭಿಸಿದಳು; ಆದರೆ ತುಸ ಹೊತ್ತಿನಲ್ಲಿಯೇ ವಿವೇಕವನ್ನು ತಾಳಿ, ಅಳುವದನ್ನು ಬಿಟ್ಟು, ಅವಳು ಮಗನಿಗೆ:—ಬೇಟಾ, ಕಾಸೀಮಾ, ನೀನು ಅನ್ನುವ ಮಾತು ನಿಜವಾದದ್ದೆಂದು ನನಗೆ ತಿಳಿಯುತ್ತದೆ. ಆದ್ದರಿಂದ ನೀನು ನಿನ್ನ ಇಚ್ಛೆಯಂತೆ ಆ ಟೀಪುವಿನ ಚಾಕರಿಗೆ ಹೋಗು. ನಾನು ಹಗಲಿರುಳೂ ಪೈಗಂಬರ ನನ್ನು ಪ್ರಾರ್ಥಿಸುತ್ತ, ನಿನ್ನ ಕಲ್ಯಾಣವನ್ನು ಚಿಂತಿಸುತ್ತಿರುತ್ತೇನೆ. ಹೋಗು, ಇನ್ನು ನೀನು ನಿನ್ನ ಹೊರಡುವ ಸಿದ್ಧತೆ ಮಾಡಿಕೊಳ್ಳು" ಎಂದು ಆಜ್ಞಾಪಿಸಿದಳು.

ನಂತರ ಅವಳು ಕೊಂಚವೂ ಶೋಕ ಮಾಡಲಿಲ್ಲ ಕಾಸೀಮನು ತನ್ನ ಹೊರಡುವ ಸಿದ್ಧತೆ ನಡಿಸಿದನು. ಆತನ ತಾಯಿಯೂ ಆತನಿಗೆ ನೆರವಾದಳು.

ಕಾಸೀಮನು ಆಗಲೆ ಮನೆಯಿಂದ ಹೊರಬಿದ್ದು, ತನ್ನ ಊರ ಶಾನುಭೋಗನಿಗೆ ತಾನು ಹೋಗುವ ಬಗ್ಗೆ ತಿಳಿಸಿದನು ಆ ಸಂಗತಿ ಯನ್ನು ಕೇಳಿ, ಆ ಹಾರುವನಿಗೆ ಬಲು ಆಶ್ಚರ್ಯವೆನಿಸಿತು; ಆದರೆ ಈ ವೀರ ಕಾಸೀಮನು, ಇಂದಿಲ್ಲ ನಾಳೆ ಇಲ್ಲಿಂದ ಹೋಗಿ, ಯಾವು ದೊಂದು ದಂಡಿನಲ್ಲಿ ಅಮಲ್ದಾರನಾಗುವನೆಂಬದನ್ನು ಆ ಊರ ಜನರು ಈ ಮೊದಲೇ ನಿಶ್ಚಯಿಸಿಕೊಂಡಿದ್ದರು. ಆದರಿಂದ ಕಾಸೀಮನು ಹಾಗೆ ಹೇಳಿದ ಕೂಡಲೆ ಆ ಶಾನುಭೋಗನು ಆತನ ಗೌಡಕಿಯ ಕೆಲ ಸವನ್ನು ಬೇರೊಬ್ಬ ವಿಶ್ವಾಸಿಗ ಮನುಷ್ಯನಿಗೆ ಬದಲಿಯಾಗಿ ನಿಯಮಿಸಿ ಕೊಂಡು, ಆ ಪ್ರಾಂತದ ಅಮಲ್ದಾರನ ಕಡೆಗೆ ಥೈಲಿಯನ್ನು ಬರೆ ದನು; ಹಾಗು ಖರ್ಚಿಗೆ ದುಡ್ಡೇನಾದರೂ ಬೇಕಾಗಿದ್ದರೆ, ಒಯ್ಯ ಬಹುದೆಂದು ಕಾಸೀಮನಿಗೆ ಹೇಳಿದನು. ತಾನು ಒಮ್ಮೆಲೆ ಖಾನನ ಮೇಲೆ ಭಾರ ಹಾಕುವದಕ್ಕಿಂತ, ಈ ನಮ್ಮ ಶಾನುಭೋಗನಿಂದಲೇ ಕೆಲವು ಹಣವನ್ನು ಕೈಗಡ ತಕ್ಕೊಂಡು, ನನ್ನ ಹಾಗು ನನ್ನ ತಾಯಿಯ

ವ್ಯವಸ್ಥೆ ಮಾಡಿಕೊಳ್ಳುವದು ವಿಹಿತವೆಂದು ಬಗೆದು, ಆತನು ಆ ಕುಲಕರಣಿಯಿಂದ ತನಗೆ ಬೇಕಾಗಿರುವಷ್ಟು ಹಣವನ್ನು ಕೈಗಡವಾಗಿ ಇಸಗೊಂಡನು.

ಮರುದಿನ ಬೆಳಗಾಗುವಷ್ಟರಲ್ಲಿ ತಮ್ಮೂರ ವೀರಕಾಸೀಮ ಗೌಡನು ಟೀಪುವಿನ ದಂಡಿನಲ್ಲಿ ಚಾಕರಿಗಾಗಿ ಹೋಗುವನೆಂಬ ಸುದ್ದಿಯು ಆ ಊರ ತುಂಬ ಹಬ್ಬಿತು ಆಬಾಲ-ವೃದ್ಧರಿಗೂ ಪ್ರಿಯನಾಗಿದ್ದ ಆತನ ವಿರಹವನ್ನು ತಾಳಲಾರದೆ ಅವರೆಲ್ಲರೂ ಮಿಡುಕಿದರು; ಆದರೆ ಆತನ ಭಾವೀ ಊರ್ಜಿತ ದೆಸೆಯ ಕಡೆಗೆ ಲಕ್ಷ್ಯಕೊಟ್ಟು, ಎಲ್ಲರೂ ಆತನಿಗೆ ಹೋಗಲಿಕ್ಕೆ ಪ್ರೋತ್ಸಾಹ ಕೊಟ್ಟರು; ಹಾಗು ಶಕ್ತಿಮೀರಿ ಆತನಿಗೂ ಆತನ ತಾಯಿಗೂ ಸಹಾಯ ಮಾಡಲೊಪ್ಪಿದರು. ಅದರಿಂದ ಕಾಸೀಮನಿಗೆ ಬಹು ಸಮಾಧಾನವೆನಿಸಿತು. ಈ ವರೆಗೆ ಆತನ ಮನಸ್ಸಿನಲ್ಲಿ ನೆಲೆಗೊಂಡಿದ್ದ, ತನ್ನ ಹಿಂದೆ ತನ್ನ ತಾಯಿಯ ಗತಿಯೇನಾಗುವದೋ? ಎಂಬ ಚಿಂತೆಯು ಈಗ ಬಯಲಾಯಿತು!

ಮರುದಿನ ಕಾಸೀಮನು ತನ್ನ ತಾಯಿಯ ಹಾಗು ತಮ್ಮೂರ ಜನರ ಅನುಮತಿ ಪಡೆದು, ಟೀಪುವಿನ ದಂಡಿನಲ್ಲಿ ಚಾಕರಿ ಹಿಡಿಯುವ ಸಲುವಾಗಿ ಆ ಅಬ್ದುಲ್‌ರಹಿಮಾನಖಾನನೊಡನೆ ತನ್ನೂರಿಂದ ಹೊರ ಹೊರಟನು.

---

## ಕಾಸೀಮನೂ ಪೆಂಡಾರಿಗಳೂ.

ಮೊದಲೇ ಸ್ವರೂಪದಿಂದ ಸುಂದರನಾಗಿದ್ದ ಆ ತರುಣ ಕಾಸೀಮನು ಅಬ್ದುಲ್‌ರಹಿಮಾನನು ಕೊಟ್ಟ ದಂಡಾಳುವಿನ ಪೋಷಾಕನ್ನು ಧರಿಸಿ, ತೇಜಃಪುಂಜವಾದ ಅಶ್ವವನ್ನು ಏರಿದ ಮೇಲೆ, ಆತನ ಮಿಗಿಲಾದ ಆ ಸುಂದರ ರೂಪವನ್ನು ಕಂಡು ಪ್ರತಿಯೊಬ್ಬನಲ್ಲೂ ಆತನ ವಿಷಯಕ್ಕೆ ಹೆಚ್ಚೇ ಪ್ರೇಮಾದರಗಳುತ್ಪನ್ನವಾದದ್ದು ಆಶ್ಚರ್ಯದ

ಮಾತಲ್ಲ ಖಾನನಂತೂ ಆಗಿನ ಆ ದಂಡಾಳುವಿನ ವೇಷದಲ್ಲಿದ್ದ ಕಾಸೀಮನ ಮೂರ್ತಿಯನ್ನು ನೋಡಿ:—ವಾಹವ್ಹಾ! ಕಾಸೀಮಾ, ನೀನು ಬಹು ಚನ್ನಾಗಿ ಕುದುರೆಯನ್ನೇರುವೆಯಲ್ಲ! ನಿನ್ನಂಥ ಸವಾರನನ್ನು ನಾನು ಈ ವರೆಗೂ ನೋಡಿರಲಿಲ್ಲ. ತಮ್ಮಾ, ತಡೆ, ಆ ಯಾಕೂಬ ಕುದುರೆಯು ಬಹು ಚುರುಕಾದದ್ದು; ಆದರೆ ಬಹು ಶಿಟ್ಟಿನದು; ಆದರೂ ನೀನು ಹತ್ತಲಿಕ್ಕೆ ಅದೇ ತಕ್ಕ ಅಶ್ವವಾಗಿರುತ್ತದೆ. ತುಸ ಸಾವಧಾನದಿಂದ ಮಾತ್ರ ಅದಕ್ಕೆ ಗತಿ ಕೊಡು, ಅಂದರಾಯಿತು.

"ಖಾನಸಾಹೇಬ, ತಾವಿನ್ನು ಈ ಬಗ್ಗೆ ಯತ್ಕಿಂಚಿತ್ತೂ ಚಿಂತಿಸಬೇಡಿರಿ. ನಾನು ಈ ಕುದುರೆಯನ್ನು ಒಂದೆರಡು ದಿನಗಳಲ್ಲಿಯೇ ಸಾದುಮಾಡಿಕೊಳ್ಳುವೆನು; ಆದರೆ ಖಾನಸಾಹೇಬರೇ, ನಡೆಯಿರಿನ್ನು; ಅಕೋ, ಮೇಣೆಯು ಸಿದ್ಧವಾಗಿರುತ್ತದೆ; ಖಾನಮುಸಾಹೇಬರು ತಮ್ಮ ದಾರಿಯನ್ನೇ ನೋಡುತ್ತಿದ್ದಾರೆ. ಮೇಣೆಯನ್ನು ತೀರ ಬಾಗಿಲಿಗೆ ಒಯ್ಯಲಿಕ್ಕೆ ಬೋವಿಗಳಿಗೆ ಹೇಳಿರಿ. ಅಂದರೆ ತೊಂದರೆಯಾಗಲಿಕ್ಕಿಲ್ಲ"

ಸ್ವಲ್ಪ ಹೊತ್ತಿನಲ್ಲಿಯೇ ಬುರುಕೆ ಹಾಕಿಕೊಂಡಂಥ ಒಂದು ಸುಂದರ ಮೂರ್ತಿಯು ಒಳಗಿನಿಂದ ಬಂದು ಆ ಮೇಣೆಯನ್ನು ಏರಿತು. ಆ ಮೂರ್ತಿಯು ಮೇಣೆಯನ್ನು ಏರುವಾಗ ಅದರ ಕಾಲುಗೆಜ್ಜೆಯ ಮಧುರವಾದ ಶಬ್ದವು ದೂರದಲ್ಲಿ ನಿಂತಿದ್ದ ಕಾಸೀಮನ ಕಿವಿಗೆ ಬಿದ್ದು, ಆತನಿಗೆ ಬಹು ಆನಂದವನ್ನುಂಟುಮಾಡಿತು!

ಅಷ್ಟರಲ್ಲಿ ಕಾಸೀಮನ ತಾಯಿಯು ಮೇಣೆಯ ಬಳಿಗೆ ಬಂದು ಅವಿೂನೆಯ ತಲೆಯ ಮೇಲೆ ತನ್ನ ಕೈಯಿಟ್ಟು:—"ಮಾ, ಅಲ್ಲಾ ತುಮಾರಾ ಭಲಾ ಕರೇಗಾ!" ಖಾನಮುಸಾಹೇಬ, ನೀವಿನ್ನು ವೈಭವಶಾಲಿಗಳಾಗುವಿರಿ; ಆದರೆ ಈ ಬಡ ಗೌಡಸಾನಿಯನ್ನು ಮಾತ್ರ ಮರೆಯಬೇಡಿರಿ, ಕಂಡಿರಾ! ನಾನು ನನ್ನ ಹೊಟ್ಟೆಯ ಕರಳನ್ನು ತಮ್ಮ

ಉಡಿಯಲ್ಲಿ ಹಾಕಿರುತ್ತೇನೆ. ಖಾನಸಾಹೇಬರು ನನ್ನ ಕಾಸೀಮ ನಿಗೆ ಹೇಗೆ ತಂದೆಯ ಸಮಾನರೋ, ಹಾಗೆಯೇ ನೀವು ಆತನಿಗೆ ತಾಯಿಯ ಸಮಾನರು ಇನ್ನು ಆತನ ಭವಿತವ್ಯವೆಲ್ಲ ನಿಮ್ಮನ್ನೇ ಕೂಡಿರುತ್ತದೆ'' ಎಂದು ಹಿಳ್ಳೇ ದುಃಖದಿಂದ ನುಡಿದಳು. ಅಷ್ಟರಲ್ಲಿ ಅವಳ ಕಣ್ಣುಗಳಿಂದ ಅಶ್ರುಗಳು ಟಪ-ಟಪ ಎಂದು ಬೀಳಲಾರಂಭಿಸಿ ದವು. ಆಕೆಯ ಕಂಠವು ಹಿತ್ತರಿಸಿ ಬಂದದ್ದರಿಂದ, ಮುಂದೆ ಅವಳ ಬಾಯಿಂದ ಶಬ್ದಗಳೇ ಹೊರಡದಾದವು.

“ನಿಮ್ಮ ಮಗನ ವಿಷಯವಾಗಿ ನೀವು ಕೊಂಚವೂ ಚಿಂತಿಸ ಬೇಡಿರಿ. ಆತನ ವಿಷಯಕ್ಕೆ ಎಷ್ಟು ಎಚ್ಚರ ಪಡಬೇಕೋ, ಅಲ್ಲಾನ ಸಾಕ್ಷಿಯಾಗಿ ನಾವು ಅಷ್ಟು ಪಡುವೆವು ನಿಮ್ಮ ಮಗನಿಗೆ ಯಾವ ವಿಷಯಕ್ಕೂ ಕೊರತೆಯುಂಟಾಗದಂತೆ ನೋಡಿಕೊಳ್ಳುವೆವು; ಆದರೆ ತಾಯಿ, ತಾವು ಈ ಅಮೀನೆಯನ್ನು ಎಂದೂ ಮರೆಯಲಾಗದು. ವೃದ್ಧರಾದ ತಮ್ಮ ಬಳಿಯಲ್ಲಿ ಇಷ್ಟೇ ನನ್ನ ವಿನಂತಿಯು.''

ಆ ವೃದ್ಧಳು ಬಾಯಿಂದ ಉತ್ತರವನ್ನೇನೂ ಹೇಳದೆ, ಗೋಣು ಹಾಕಿ ಅಮೀನೆಯನ್ನು ಸಮಾಧಾನ ಪಡಿಸಿ, ಮೇಣೆಯ ಪರದೆಯನ್ನು ಇಳಿಬಿಟ್ಟಳು ಕೂಡಲೆ ಬೋವಿಗಳು ಮೇಣೆಯನ್ನು ಹೊತ್ತುಕೊಂಡು ಭರದಿಂದ ಸಾಗಹತ್ತಿದರು.

ಖಾನನೂ ತನ್ನ ಅಶ್ವವನ್ನೇರಿ ಕಾಸೀಮನಿಗೆ: —“ಇನ್ನು ತಡ ಮಾಡಬೇಡಿರಿ. ಎಲ್ಲರೂ ಭರದಿಂದ ಸಾಗಿರಿ'' ಎನ್ನಲು,— “ನೀವು ಮುಂದಾಗಿರಿ. ತಾಯಿಗೆ ಹಿಂದೇ ಹಿಂದು ಮಾತು ಹೇಳಿದವನೇ ಬರುತ್ತೇನೆ'' ಎಂದವನೇ, ಕಾಸೀಮನು ತನ್ನ ತಾಯಿಯ ಬಳಿಗೆ ಹೋದನು. ಕಾಸೀಮನ ತಾಯಿಯು ತಮ್ಮ ಮನೆಯ ಬಾಗಿಲಲ್ಲಿ ನಿಂತಿದ್ದಳು. ಅವನು ಅವಳ ಬಳಿಗೆ ಹೋಗಿ ಆಕೆಗೆ ಪೊಡಮಟ್ಟು:- ತಾಯಿ, ನೀನು ಇನ್ನೊಮ್ಮೆ ನನ್ನನ್ನು ಆಶೀರ್ವದಿಸು; ಹಾಗು ಕಟ್ಟ

ಕಡೆಯ ಭೆಟ್ಟಿಯನ್ನು ಕೊಡು ನಾನು ಇನ್ನು ಹೊರಡುವೆನು, ಎಂದನು.

ಆಗ ಅವಳು ಆವನನ್ನು ಹೃದಯಪೂರ್ವಕವಾಗಿ ಹರಸಿದಳು; ಹಾಗೂ ಲಗುಬಗೆಯಿಂದ ಒಳಗೆ ಹೋಗಿ ಅಡಕಲ ಗಡಿಗೆಯೊಳಗಿನ ಒಂದು ವರಾಹವನ್ನು ತಂದು ಅರಿವೆಯಲ್ಲಿ ಸುತ್ತಿ, ಆತನ ರಟ್ಟೆಗೆ ಕಟ್ಟಿ: ಮಗನೇ, ನಿನ್ನನ್ನು ರಕ್ಷಿಸಲಿಕ್ಕೂ, ನಿನ್ನ ಕಲ್ಯಾಣ ಮಾಡಲಿಕ್ಕೂ ಅಲ್ಲಾನೊಬ್ಬನೇ ಸಮರ್ಥನಾಗಿರುತ್ತಾನೆ. ಆತನು ನಿನ್ನನ್ನು ಬೇಗ ಬೇಗನೆ ಉಚ್ಚ ದರ್ಜೆಗೆ ಏರಿಸಲಿ. ಹೋಗು, ನೀನು ದೊಡ್ಡ ಪದವಿಯನ್ನು ಹೊಂದು ನಿನ್ನ ಯಶೋದುಂದುಭಿಗಳು ಮೊಳಗಲಿ; ಆದರೆ ತಮ್ಮಾ, ನನ್ನ ಅವಸಾನಕಾಲಕ್ಕೆ ಮಾತ್ರ ಎಲ್ಲಿದ್ದರೂ ನೀನು ಬರಲೇಬೇಕು, ಕಂಡೆಯಾ! ಎಂದಂದಳು.

ತಾಯೀ, ನೀನು ಆ ಬಗ್ಗೆ ಆಲೋಚಿಸಲೇ ಬೇಡ. ನಿನ್ನ ಶುಭಾಶೀರ್ವಾದವು ಖಂಡಿತವಾಗಿ ಫಲಿಸುವದು; ಆದರೆ ತಾಂ ನೀನು ನನ್ನ ವಿಷಯವಾಗಿ ಆ ಖಾನನವುಳ ಬಳಿಯಲ್ಲಿ ಹೇಳಿದೆಯೇನು?

"ಅಹುದು, ನಿನ್ನ ಬಗ್ಗೆ ಎಲ್ಲ ಸಂಗತಿಯನ್ನು. ನಿವೇದಿಸಿರುತ್ತೇನೆ. ಬಾಲ್ಯತನದಿಂದ ಈ ವರೆಗಿನ ಎಲ್ಲ ವಿಷಯಗಳನ್ನೂ ನಾನು ಅವಳಿಗೆ ಅಚ್ಚುಕಟ್ಟಾಗಿ ತ್ತೇನೆ. ಅದನ್ನೆಲ್ಲ ಕೇಳಿ ಅವಳಿಗೆ ಮಹದಾನಂದವಾಯಿತು ನಿನಃ ಏನೂ ಕಡಿಮೆ ಬೀಳದಂತೆ ನೋಡಿಕೊಳ್ಳುವೆನೆಂದು ಅವಳು ವಚನವ ಕೊಟ್ಟಿರುತ್ತಾಳೆ."

ಒಳ್ಳೇದು, ತಾಯಿ, ನಾನಿನ್ನು ನಿನಗೆ ಹೆಚ್ಚಿಗೆ ಹೇಳಲಿಚ್ಛಿಸುವದಿಲ್ಲ ನೀನು ಮನೆಯಲ್ಲಿ ನಿರ್ಧಾಸ್ತಳಾಗಿರು. ತಡವಾಯಿತು; ನಾನಿನ್ನು ಹೊರಡುತ್ತೇನೆ, ಎಂದಂದವನೇ ತನ್ನ ಕುದುರೆಯನ್ನು

ವೇಗದಿಂದ ಬಿಟ್ಟನು. ಕಾಸೀಮನು ಕಣ್ಣುಮರೆಯಾಗುವ ವರೆಗೂ ಅವನ ತಾಯಿಯು ಆತನನ್ನು ಎವೆಯಿಕ್ಕದೆ ನೋಡುತ್ತ ಬಾಗಿಲಲ್ಲಿಯೇ ನಿಂತಿದ್ದಳು. ಕೊನೆಗೆ ನಿರಾಶಳಾಗಿ ಆ ಮುದುಕಿಯು ಮನೆಯೊಳಗೆ ಹೋದಳು. ಅಲ್ಲಿ ಅವಳಿಗೆ ಎಲ್ಲವೂ ಹಾಳು ಹಾಳು ಸುರಿಯಹತ್ತಿತು! ನೋಡಿದತ್ತೆಲ್ಲ ಔದಾಸೀನ್ಯದ ಸಾಮ್ರಾಜ್ಯವೇ ನೆಲೆಗೊಂಡಿತ್ತು. ಅದರಿಂದ ಅವಳ ಶೋಕವು ಉತ್ತರಿಸಿತು. ಈ ವರೆಗೆ ಪ್ರಯತ್ನ ಪೂರ್ವಕವಾಗಿ ತಡೆದಿದ್ದ ಅವಳ ದುಃಖವು ಉಮ್ಮಳಿ ಸ್ಫೋಟವಾಯಿತು. ಅವಳು ದೊಡ್ಡ ದನಿ ತೆಗೆದು ಎಷ್ಟೋ ಹೊತ್ತಿನ ವರೆಗೆ ಅತ್ತಳು; ಆದರೆ ಹುಟ್ಟಾ ವಿವೇಕಿಯಾಗಿದ್ದ ಆ ಮುದುಕಿಯು ತನ್ನ ಶೋಕಾವೇಗವನ್ನು ತುಸ ಹೊತ್ತಿನಲ್ಲಿಯೇ ಆವರಿಸಿಕೊಂಡು ಮನೆಗೆಲಸದಲ್ಲಿಯೂ, ಮಗನ ಶುಭಾಕಾಂಕ್ಷೆಯಲ್ಲಿಯೂ, ಅಲ್ಲಾನ ನಾಮಸ್ಮರಣೆಯಲ್ಲಿಯೂ ಕಾಲಹರಣ ಮಾಡಹತ್ತಿದಳು.

ಇತ್ತ ಕಾಸೀಮನು ಭರದಿಂದ ಬಂದು ಖಾನನನ್ನು ಕೂಡಿ
. ಕೆಲ ಹೊತ್ತಿನವರೆಗೆ ಅವರೆಲ್ಲರು ವಿನೋದಪರ ಭಾಷಣ
ಗಿದ್ದರು. ಅಷ್ಟರಲ್ಲಿ ಖಾನನು ಕಾಸೀಮನನ್ನುದ್ದೇ
'ಬ, ನೀವು ನುಡಿದಂತೆ ನಡೆದು ತೋರಿಸಿದ್ದರಿಂದ
ನತಗೆ ಕುಂದಣ ಹಾಕಿದಂತಾಯಿತು; ಆದರೆ ಕಾಸೀಮ
ನಾನೊಂದು ವಿಷಯವನ್ನು ಕುರಿತು ನಿಮ್ಮನ್ನು ಕೇಳಿಕೊಳ್ಳವವನಿದ್ದೇನೆ. ಆ ನನ್ನ ಅತಿಪ್ರಸಂಗದ ಬಗ್ಗೆ ನನ್ನನ್ನು ಕ್ಷಮಿಸಿರಿ. ಈಗ ತಾವು ಕತ್ತಿ, ಢಾಲು, ಬರ್ಚಿ, ಬಂದೂಕುಗಳನ್ನು ಧರಿಸಿರುವಿರಷ್ಟೇ? ಆದರೆ ತಾವು ಅವುಗಳಲ್ಲಿಯ ಯಾವ ಯಾವ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುವದರಲ್ಲಿ ಪ್ರವೀಣತೆಯನ್ನು ಪಡೆದಿರುವಿರಿ? ತಮಗೆ ಎಲ್ಲ ಪ್ರಕಾರದ ತಾಲೀಮು, ದಾಂಡಪಟ್ಟೆ ಇವುಗಳು ಅವಗತವಾಗಿರುವವೋ? ಬಂದೂಕಿನ ಗುರಿ ಹೊಡೆಯುವ ಕಲೆಯು

ನಿಮಗೆ ಎಷ್ಟರ ಮಟ್ಟಿಗೆ ಸಾಧಿಸಿರುತ್ತದೆ?

"ಖಾನಸಾಹೇಬ, ನನಗೆ ಅದರಲ್ಲಿ ವಿಶೇಷ ಪರಿಜ್ಞಾನವಿಂದಿದ್ದರೂ ಭರದಿಂದ ಓಡುವ ಚಿಗರಿಯನ್ನು ನಾನು ತಪ್ಪದೆ ಹೊಡೆಯುವೆನು. ದಾಂಡಪಟ್ಟಿ ಮುಂತಾದ ಇತರ ಕಲೆಗಳೂ ತಕ್ಕ ಮಟ್ಟಿಗೆ ಬರುತ್ತವೆ; ಆದರೆ ಹೇಳಿ-ಕೇಳಿ ನಾನು ಹಳ್ಳಿಯವನಾದುದರಿಂದ, ನನ್ನ ಆ ವಿದ್ಯೆಗಳು ದಂಡಾಳುಗಳ ಪಾಸಂಗಕ್ಕೆ ಕೂಡ ಹತ್ತಲಾರವು!"

ಹೀಗೆ ಕಾಸೀಮನು ನುಡಿಯಲಿಕ್ಕೂ, ಖಾನನು ನಡೆದಿದ್ದ ಆ ಬೈಲು ಪ್ರದೇಶದೊಳಗಿಂದ ಚಿಗರೆಗಳ ಒಂದು ದೊಡ್ಡ ಗುಂಪು ಓಡುತ್ತ ಬರಲಿಕ್ಕೂ ಗಂಟೇ ಬಿತ್ತು. ಆಗ ಖಾನನು ಕಾಸೀಮನನ್ನು ಕುರಿತು:—ಹಾಗಾದರೆ ಕಾಸೀಮಖಾನ, ಅಗೋ, ಆ ಚಿಗರೆಗಳ ಗುಂಪಿನೊಳಗಿನ ಆ ಗಂಡೆರಳೆಯನ್ನೇ ನಿಮ್ಮ ಆ ಬಂದೂಕಿನಿಂದ ಕೆಡವಿರಿ ನೋಡೋಣ, ಎಂದು ಹೇಳಿದನು

"ಅಪ್ಪಣೆ; ಆದರೆ ಖಾನಸಾಹೇಬ, ನೀವು ನಿಮ್ಮ ಎಲ್ಲ ಜನರೊಡನೆ ಇಲ್ಲಿಯೇ ನಿಲ್ಲಿರಿ. ನಾನೊಬ್ಬನೇ ತುಸ ಮುಂದಕ್ಕೆ ಹೋಗಿ ನೀವಂದಂತೆ ಆ ಗಂಡೆರಳೆಯನ್ನು ಹೊಡೆಯುವೆನು. ನೀವು ಮುಂದೆ ಬಂದರೆ, ನಿಮ್ಮ ಇಷ್ಟು ಜನರ ಗದ್ದಲವನ್ನು ಕೇಳಿ, ಆ ಮೃಗಗಳು ನನ್ನ ಬಂದೂಕಿನ ಗುಂಡಿನ ಅಳವಿನಿಂದ ಪಾರಾಗಿ ಹೋಗಬಹುದು."

ಹಾಗೇ ಆಗಲಿ; ಎಲೈ ದಂಡಾಳುಗಳೇ, ನೀವೆಲ್ಲರೂ ತುಸ ಹೊತ್ತು ಇಲ್ಲಿಯೇ ನಿಲ್ಲಿರಿ. ಕಾಸೀಮಖಾ, ನೀನು ನಿನ್ನ ಬಂದೂಕನ್ನು ಮದ್ದು-ಗುಂಡುಗಳಿಂದ ತುಂಬಿಕೊಂಡಿರುವಿಯಷ್ಟೇ? ತಮ್ಮಾ, ನಾನು ಹೇಳುವ ಆ ಮೃಗವನ್ನೇ ಕೆಡವಬೇಕು ನೋಡು.

ಖಾನನು ಹೀಗೆ ಹೇಳ-ಹೇಳುವಷ್ಟರಲ್ಲಿ ಕಾಸೀಮನು ತನ್ನ ಕುದುರೆಯಿಂದಿಳಿದು, ಬಂದೂಕನ್ನು ಹೆಗಲ ಮೇಲಿಟ್ಟುಕೊಂಡು ಆ

ಚಿಗರೆಯ ಗುಂಪಿನ ಕಡೆಗೆ ಸಾಗಹತ್ತಿದ್ದನು ಸಹ ಆತನು ತನ್ನ ಹೆಜ್ಜೆಗಳನ್ನು ಸ್ವಲ್ಪವೂ ಸಪ್ಪಳವಾಗದ ಹಾಗೆ ಹುಶ್ಯಾರದಿಂದ ಇಕ್ಕುತ್ತ ಸಾಗಿದ್ದನು. ಯಾಕಂದರೆ, ತನ್ನ ಬರುವಿಕೆಯನ್ನು ತಿಳಿದು ಆ ಮೃಗಗಳ ಗುಂಪು ತನ್ನ ಬಂದೂಕಿನ ಅಳವನ್ನು ದಾಟಿ ಹೋಗ ಬಾರದೆಂದು ಅವನು ಎಚ್ಚರಪಡುತ್ತಿದ್ದನು.

ಕಾಸೀಮನು ಅತ್ತ ಗುರಿ ಹೊಡೆಯುವ ಸಿದ್ಧತೆ ನಡೆಸಿರಲು, ಇತ್ತ ಖಾನನು ತನ್ನ ಹೆಂಡತಿಯ ಮೇಣೆಯ ಬಳಿಗೆ ಬಂದು:— ಪ್ಯಾರೀ, ಅಮೀನೆ, ಅಕೋ, ಅತ್ತ ನೋಡು. ಆ ಗೌಡನ ಮಗನು ಬೆಕ್ಕಿನ ಹಾಗೆ ಹೇಗೆ ಮೆಲ್ಲಗೆ ಹೆಜ್ಜೆಗಳನ್ನಿಕ್ಕುತ್ತ ನಡೆದಿರುತ್ತಾನೆ! ಆತನನ್ನು ಪರೀಕ್ಷಿಸುವದಕ್ಕಾಗಿಯೇ ಇಂದು ಆತನಿಗೆ ಆ ಚಿಗರೆ ಯನ್ನು ಹೊಡೆಯ ಹೇಳಿರುತ್ತೇನೆ. ನಿನಗೂ ಆತನ ಆ ನಿಶಾನೆ ಹೊಡೆಯುವ ಪ್ರಸಂಗವನ್ನು ನೋಡುವ ಯೋಗವು ಅನಾಯಾಸ ವಾಗಿ ಪ್ರಾಪ್ತವಾಗಿರುವದರಿಂದ, ಕಣ್ಣುಮುಟ್ಟ ನೋಡು, ಎಂದಂದನು.

ಖಾನನು ತನ್ನ ಹೆಂಡತಿಯೊಡನೆ ಮಾತನಾಡುತ್ತಿರಲು, ಇತ್ತ ಆತನ ಸೇವಕರು ತಮ್ಮ ತಮ್ಮೊಳಗೆ ಹೀಗೆ ಮಾತನಾಡುತ್ತಿದ್ದರು:- ಈ ಹಳ್ಳಿಯ ಗೌಡನ ಮಗನು ಆ ಚಿಗರೆಯನ್ನು ಹೊಡೆಯುವನೆ? ನಮ್ಮ ಖಾನಸಾಹೇಬರು ಆತನನ್ನು ಸುಮ್ಮನೆ ಹುರಿದುಂಬಿಸಿರು ತ್ತಾರೆ. ಗುರಿ ಹೊಡೆಯುವ ಜನರ ಮೋರೆಯೇ ಬೇರಿರುತ್ತದೆ. ನಮ್ಮ ಹೈದರಾಬಾದದಲ್ಲಿಯು ಎಷ್ಟೋ ಜನರು ಗುರಿ ಹೊಡೆಯುವ ದರಲ್ಲಿ ಹುಳ್ಳೇ ನಿಪುಣರಿರುತ್ತಾರೆ; ಹಿಮ್ಮೆ ನಾನೂ ಒಂದು ಚಿಗರಿ ಯನ್ನು ಹೊಡೆದಿದ್ದೆನು; ಆದರೆ ಈ ಪ್ಯಾಲಿ ನನ ಮಗನು ಈ ಕೆಲ ಸಕ್ಕೆ ಕೇವಲ ಅನರ್ಹನಾಗಿರುತ್ತಾನೆ, ಎಂದು ಅವರಲ್ಲಿಯ ಝುಲ ಫೀಕರನು ನುಡಿಯಲು, ಮತ್ತೊಬ್ಬನು ಆತನ ತೊಡೆಯನ್ನು ಚಿವುಟಿ: ಎಲೈ ಅಡುಗಲಜ್ಜೀ, ಝುಲಪ್ಯಾ, ಸುಮ್ಮನಿರು. ಮಗನೇ, ಅಡಿಗೆ

ಮಾಡುವದರಲ್ಲಿಯೇ ಜನ್ಮ ಕಳೆದ ನಿನಗೆ, ಬೇಟೆಯಾಡುವ ಕಲೆಯ ಗಂಧವಾದರೂ ತಿಳಿದಿದೆಯೇನು? ಮೂರ್ಖಾ, ನೀನು ಚಿಗರೆಯನ್ನು ಕೊಂದೆಯಾ? ಕೊಂದು ಅಡಿಗೆಗೆ ತಂದು ಕೊಟ್ಟ ಚಿಗರೆಯ ತೊಗಲನ್ನು ಮಾತ್ರ ನೀನು ಸುಲಿದಿರಬಹುದು ಹೌದಲ್ಲೋ ಝುಲಪ್ಯಾ? ಮಗನೇ, ಹಾಗೆ ಹುಚ್ಚನಂತೆ ಪ್ರತಿಯೊಂದು ತರದ ಭಾಷಣದಲ್ಲಿಯೂ ಬಾಯಿ ಹಾಕಬಾರದು, ಎಂದು ನುಡಿದು ನಕ್ಕನು.

"ನಾನು ಕೊಲ್ಲದಿದ್ದರೂ ನಿಮ್ಮಂಥ ರಣಶೂರರಂತೂ ಇಂಥ ಎರಳೆಗಳನ್ನು ಸಹಜವಾಗಿ ಕೊಲ್ಲಬಲ್ಲರಷ್ಟೇ; ಆದರೆ ಈ ಹಳ್ಳಿಯ ಪ್ಯಾಲಿಯು ಇಷ್ಟು ಸಾವಕಾಶವಾಗಿ ಹೋದರೆ ಆತನಿಗೆ ಆ ಚಿಗರೆಯು ಸಿಕ್ಕೀತೇ? ಓಡುತ್ತೋಡುತ್ತ ಹೋಗಿ, "ಠಬ್ಬ" ಎಂದು ಅದನ್ನು ಬಂದೂಕಿನಿಂದ ಹೊಡೆಯುವದನ್ನು ಬಿಟ್ಟುಕೊಟ್ಟು, ಅತ್ತೆಯ ಮನೆಯ ಸೊಸೆಯು ನಡೆದ ಹಾಗೆ ಈತನು ಮೆಲ್ಲಗೆ ನಡೆಯುವದನ್ನು ನೋಡಿ ನನಗೆ ನಗೆ ಬರುತ್ತದೆ" ಹೀಗೆ ಝುಲಫೀಕರನು ನುಡಿದದ್ದಕ್ಕೆ ಇನ್ನೊಬ್ಬ ದಂಡಾಳುವು:— ಮಗನೇ, ಬೇಟೆ ಹೊಡೆಯುವ ಕೆಲಸವೇ ನಿನ್ನದಲ್ಲದ್ದರಿಂದ, ನಿನಗೆ ಅದರೊಳಗಿನ ಮರ್ಮಗಳ ಜ್ಞಾನವು ಹೇಗಿರಬೇಕು? ಅದಿರಲಿ ಈಗ ಆ ಬಹದ್ದರನು ಆ ಚಿಗರೆಯನ್ನು ಹೊಡೆದು ತರುವನು. ಝುಲಪ್ಯಾ, ನೀನು ಇಂದು ಸಂಜೆಗೆ ಅದರ ಪಕ್ವಾನ್ನವನ್ನು ಹಳ್ಳೀ ರುಚಿಕರವಾಗಿ ಮಾಡು; ಅಂದರೆ ನೀನೇ ಶಿಕಾರಿಯನ್ನು ಮಾಡಿದೆಯೆಂದು ನಾವು ತಿಳಿಯುತ್ತೇವೆ. ಈಗ ನೀನು ಅತ್ತ ಲಕ್ಷ್ಯಗೊಡದೆ, ಆ ಚಿಗರೆಯ ಪಕ್ವಾನ್ನಕ್ಕೆ ಉಪ್ಪು, ಎಣ್ಣೆ, ಮಸಾಲಿ ಮುಂತಾದವುಗಳಲ್ಲಿ ಯಾವ ಯಾವವು ಎಷ್ಟೆಷ್ಟು ಬೇಕೆಂಬದನ್ನು ಆಲೋಚಿಸಿ, ನಡುವೆ ಹತ್ತುವ ಊರಲ್ಲಿ ಅವನ್ನೆಲ್ಲ ಕೊಂಡುಕೊಂಡು ಸಿದ್ಧಮಾಡಿಟ್ಟಿರು, ಎಂದನು.

ಈ ಪ್ರಕಾರ ಖಾನನೂ ಆತನ ಸಂಗಡಿಗರೂ ಮಾತಾಡುತ್ತ

ಹತ್ತುಟ್ಟಿಗೆ ನಿಂತಿರಲು, ಕಾಸೀಮನು ಆ ಚಿಗರೆಯು ಗುಂಪಿನ ತೀರ ಸಮೀಪಕ್ಕೆ ಹೋಗಿ ತಲುಪಿದನು. ಇಷ್ಟರಲ್ಲಿ ಆತನು ಯಾವ ಗಂಡೆ ರಳೆಯನ್ನು ಹೊಡೆಯಬೇಕಾಗಿತ್ತೋ, ಅದು ಅಲ್ಲಿಂದ ಹೊರಡುವ ಚಳವಳಿ ಮಾಡಲಾರಂಭಿಸಿತು. ಅದನ್ನು ಕಂಡು ಖಾನನು ಅಮೀನೆ ಯನ್ನು ಕುರಿತು—ಪ್ರಿಯೇ, ಆ ಮೃಗವು ಇನ್ನು ಆತನ ಗುರಿಗೆ ಸಿಗು ವದಿಲ್ಲ. ಬಿಟ್ಟಿತು, ಅದು ಇನ್ನು ಅವನ ಕೈಬಿಟ್ಟಿತು, ಎಂದನು

ಆಗ ಅಮೀನೆಯು:—ಛೀ, ಆತನು ಅದನ್ನೆಂದೂ ಬಿಡನು.

ಖಾನ:—ಪ್ರಿಯೇ, ಇನ್ನು ಅದು ಆತನಿಂದ ಸಾಧ್ಯವಿಲ್ಲ; ಖಂಡಿತವಾಗಿಯೂ ಸಾಧ್ಯವಿಲ್ಲ. ಒಂದು ವೇಳೆ ನನ್ನ ಮಾತು ಸುಳ್ಳಾಗಿ ಆತನು ಅದನ್ನು ಕೆಡವಿದುದೇ ಆದರೆ, ನಾನು ನಿನ ಗೊಂದು ಕೊಯಿಮುತ್ತೂರ ಜರದ ಪತ್ತಲವನ್ನುಡಿಸುವೆನು.

ಹೀಗೆ ಅವರು ನುಡಿಯುತ್ತಿರಲು, ಕಾಸೀಮನು ಆ ಚಿಗರೆಗಳ ಗುಂಪಿನ ಬದಿಯ ಒಂದು ದಿನ್ನೆಯ ಮರೆಗೆ ಹೋದನು ಅವನು ಆ ಬದಿಯಿಂದ ಮೆಲ್ಲಮೆಲ್ಲನೆ ಅದನ್ನು ಏರಿ, ಆ ಗಂಡೆರಳೆಗೆ ಗುರಿಯಿ ಡಲಿಕ್ಕೂ, ಆ ಚಿಗರೆಯು ಹಿಂಡು ಟಣ್-ಪುಣ್ ಎಂದು ಹಾರಲಿಕ್ಕೂ ಗಂಟೇ ಬಿದ್ದಿತು! ಆಗ ಖಾನನೂ ಆತನ ದಂಡಾಳುಗಳೂ:—ನಿನಗೆ ಇನ್ನು ಅದು ಸಿಗಲಾರದು, ಎಂದು ಗಟ್ಟಿಯಾಗಿ ಒದರಿದರು; ಆದರೆ ಅಷ್ಟರಲ್ಲಿಯೇ ಆ ವೀರನು ತನ್ನ ಬಂದೂಕಿನ ಕುದುರೆಯನ್ನು ಒತ್ತಿ ದ್ದನು. ಅದರ ಗುಂಡು ಠಬ್ ಎಂದು ಸಪ್ಪಳ ಮಾಡಿ, ಆ ಗಂಡೆರ ಳೆಯ ಪಕ್ಕೆಯಲ್ಲಿ ಹಾಯ್ದು ಪಾರಾಯಿತು. ಆದರೂ ಆ ಚಿಗರೆಯು ಓಡುತ್ತಲೇ ಇತ್ತು. ಬಂದೂಕಿನ ಪೆಟ್ಟಿನಿಂದ ಒಂದೆರಡು ನಿಮಿಷ ಗಳಲ್ಲಿಯೇ ಅದರ ಅವಸಾನಕಾಲವು ಸಮೀಪಿಸಲು, ಅದು 'ಧಪ್ಪ' ಎಂದು ನೆಲಕ್ಕೆ ಬಿದ್ದಿತು. ಕೂಡಲೆ ಖಾನನೂ ಆತನ ಸೇವಕರೂ ಕಾಸೀಮನನ್ನು ಗೌರವಿಸಿದರು. ಝುಲಫೀಕರನಂತೂ ಕಾಸೀಮ

ನನ್ನು ಬಾಯಿಂದ ಹೊಗಳುತ್ತ, ಕೈಯಲ್ಲಿ ದೊಡ್ಡ ಚೂರಿಯನ್ನು ತಕ್ಕೊಂಡು ಆ ಚಿಗರೆಯನ್ನು ತನ್ನ ಅಡಿಗೆಗೆ ಸರಿಬರುವಂತೆ ಕೊಯ್ದು ಸಿದ್ಧಮಾಡತೊಡಗಿದನು.

ಕಾಸೀಮನ ನಿಶಾನೆಬಾಜಿಯನ್ನು ಕಂಡು ಖಾನನಿಗೆ ಪರಮ ಸಂತೋಷವಾಯಿತು; ಆದರೆ ಅದಕ್ಕಿಂತಲೂ ಮಿಗಿಲಾದ ಆನಂದವು ಮೇಣೆಯೊಳಗೆ ಬುರುಕೆ ಹಾಕಿಕೊಂಡು ಕುಳಿತಿದ್ದ ಆ ವ್ಯಕ್ತಿಗೆ ಆಯಿತು. ಬೇರೆಯವರೆದುರಿಗೆ ಆಡಿತೋರಿಸಿ ಕಾಸೀಮನನ್ನು ಗೌರವಿಸುವ ಸ್ವಾತಂತ್ರ್ಯವು ಖಾನನಿಗಿದ್ದುದರಿಂದ, ಅವನ ಆ ದಟ್ಟ ಆನಂದವು ತುಸ ಹೊತ್ತಿನಲ್ಲಿ ವಿರಲವಾಯಿತು; ಆದರೆ ಅಮೀನೆಗೆ ಆ ಪ್ರಕಾರದ ಸೌಕರ್ಯವಿರದ್ದರಿಂದ, ಅವಳು ಏಕಾಕಿನಿಯಾಗಿ ಕುಳಿತು, ಮನದಲ್ಲಿಯೇ ಆ ಕಾಸೀಮನ ಮೂರ್ತಿಯನ್ನು ಸ್ಥಾಪಿಸಿಕೊಂಡು, ಅದನ್ನು ನಾನಾ ಬಗೆಯ ಮನೋಭಾವನೆಗಳಿಂದಲೇ ಗೌರವಿಸುತ್ತಿದ್ದಳು.

ಚಿಗರೆಯ ಬೇಟೆಯ ಪ್ರಸಂಗವು ಕಳೆದ ಮೇಲೆ ಆ ನಮ್ಮ ಪ್ರವಾಸಿಗಳು ದಾರಿ ನಡೆದು ಸಂಜೆಯಾಗುವ ಮೊದಲೇ ಒಂದು ಗ್ರಾಮದ ಬಳಿಗೆ ಬಂದರು ಆಗ ಖಾನನು ಕಾಸೀಮನನ್ನುದ್ದೇಶಿಸಿ: ಮೀರಕಾಸೀಮ, ನಿನ್ನ ಗುರುತಿನವರಾರಾದರೂ ಈ ಊರಲ್ಲಿದ್ದರೆ ನೋಡು; ಅಂದರೆ ಇಳಕೊಳ್ಳಲಿಕ್ಕೆ ತೊಂದರೆಯಾಗಲಿಕ್ಕಿಲ್ಲ, ಎಂದು ಅನ್ನಲು, ಆತನು ಅವರನ್ನೆಲ್ಲ ಹಿಂದೆ ಬಿಟ್ಟು, ತಾನೊಬ್ಬನೇ ತನ್ನ ಕುದುರೆಯನ್ನೋಡಿಸುತ್ತ ಭರದಿಂದ ಮುಂದೆ ಸಾಗಿದನು; ಹಾಗು ಊರೊಳಗೆ ಹೋಗಿ ತನ್ನ ಗುರುತಿನ ಗೌಡನೊಡನೆ ಆಲೋಚಿಸಿ, ಅವರೆಲ್ಲರ ಇಳಕೊಳ್ಳುವ ವ್ಯವಸ್ಥೆ ಮಾಡಿ, ಆ ಗೌಡನೊಡನೆ ಖಾನನನ್ನು ಎದುರಗೊಳ್ಳಲಿಕ್ಕೆ ಬಂದನು. ಅಷ್ಟರಲ್ಲಿ ಖಾನನೂ ತನ್ನ ಜನರೊಡನೆ ಆ ಊರ ಅಗಸಿಗೆ ಬಂದು ತಲುಪಿದ್ದನು. ಅವರೆಲ್ಲರೂ ಆ ಊರಲ್ಲಿಯ ಒಂದು ಚಿಕ್ಕದಾದ ಮಸೀದೆಯಲ್ಲಿ ಇಳಕೊಂಡರು.

ಅಲ್ಲಿ ಅವರಿಗೆ ಯಾವ ಬಗೆಯ ಕೊರತೆಯೂ ಆಗಲಿಲ್ಲ. ಅಂದು ರಾತ್ರಿ ಝುಲಫೀಕರನು ಮಾಡಿದ ಚಿಗರೆಯ ಮಾಂಸದ ರುಚಿಕರವಾದ ಪಕ್ವಾನ್ನಗಳನ್ನು ಮನದಣಿಯಾಗಿ ತಿಂದು, ಅವರೆಲ್ಲರೂ ಸಂತುಷ್ಟಚಿತ್ತರಾಗಿ ಮಲಗಿಬಿದರು.

ಂ ಂ ಂ ಂ ಂ ಂ ಂ

ಝುಲಫೀಕರನು ಪೌರುಷವಂತನಾಗಿರದಿದ್ದರೂ, ಮಹಾ ಧೋರಣೆಯೂ, ಕುಶಾಗ್ರಬುದ್ಧಿಯುವನೂ ಆಗಿದ್ದನು. ಝುಲಫೀಕರನು ಹೈದರಾಬಾದಿನವನು. ಅಮೀನೆಯ ತವರುಮನೆಯಲ್ಲಿ ಝುಲಫೀಕರನ ತಂಗಿಯು ಬಹು ದಿನಗಳಿಂದಲೂ ದಾಸಿಯಾಗಿದ್ದಳು. ಝುಲಫೀಕರನು ನಿಜಾಮನ ಖಾಸ ಅಡಿಗೆಯ ಕೆಲಸ ಮಾಡುತ್ತಿದ್ದನು; ಆದರೆ ದೈವಯೋಗದಿಂದಲೋ, ಮೊಗಲಾಯಿ ದರ್ಬಾರದ ಅಮಲಬಜಾವಣೆಯಿಂದಲೋ-ಏನೋ, ಝುಲಫೀಕರನ ಮೇಲೆ ಹೇಳಲ್ಲದ ಆರೋಪ ಬಂದುದರಿಂದ, ಅವನು ಆ ತನ್ನ ಸ್ಥಾನವನ್ನು ತ್ಯಜಿಸಬೇಕಾಯಿತು. ಆತನು ಪುನಃ ಹೈದರಾಬಾದದಲ್ಲಿಯೇ ಇರಬೇಕೆಂದಿದ್ದರೆ, ಆತನ ರುಚಿಕಟ್ಟಾದ ಅಡಿಗೆಗೆ ಮರುಳಾಗಿದ್ದ ಎಷ್ಟೋ ಜನ ಅಮೀರ-ಉಮರಾವರು ಆತನಿಗೆ ಆಶ್ರಯ ಕೊಡುತ್ತಿದ್ದರು; ಆದರೆ ಆತನಿಗೆ ನಿಜಾಮನ ಆ ರೊಟಿಂಗಪಾಚ್ಛಾಯಿಯಲ್ಲಿ ವಾಸ ಮಾಡುವದೇ ಬೇಸರವಾದ್ದರಿಂದ, ಆತನು ತನ್ನ ತಂಗಿಯ ಸಂಧಾನದಿಂದ ಈ ಅಬ್ದುಲ್‌ರಹಿಮಾನಖಾನನಲ್ಲಿ ಆಚಾರಿಯಾಗಿ ಬಂದಿದ್ದನು.

ಝುಲಫೀಕರನ ತಂಗಿಯು ಅಮೀನೆಯನ್ನು ಬಹು ಪ್ರೀತಿಸುತ್ತಿದ್ದಳು. ಅದರಿಂದ ಅಮೀನೆಯಾದರೂ ತನ್ನ ಎಲ್ಲ ಹಿತಗುಜಗಳನ್ನು ಅವಳಿಗೆ ತಿಳಿಸುತ್ತಿದ್ದಳು. ಹೀಗಿದ್ದುದರಿಂದ ಅಮೀನೆಯು ಆಕೆಯ ಬಳಿಯಲ್ಲಿ ತನ್ನನ್ನು ತನ್ನ ಮನಸ್ಸಿನ ವಿರುದ್ಧವಾಗಿ ತನ್ನ ತಂದೆಯು ಅಬ್ದುಲ್‌ರಹಿಮಾನಖಾನನಂಥ ವೃದ್ಧನಿಗೆ ದುಡ್ಡಿನ ಆಶೆಯಿಂದ

ಕೊಟ್ಟಿದ್ದಕ್ಕಾಗಿ ಬಹಳವಾಗಿ ದುಃಖಿಸಿ ಹೇಳಿದ್ದಳು. ಝುಲಫೀಕರನ ತಂಗಿಗಾದರೂ ಕೆಡಕೆನಿಸಿದ್ದರಿಂದ, ಆ ಸಂಗತಿಯನ್ನು ಅವಳು ತನ್ನ ಅಣ್ಣನ ಮುಂದೆ ಹೇಳಿದ್ದಳು. ಝುಲಫೀಕರನು ಹುಟ್ಟಾ ಹೆಣ್ಣುಗಳ್ಳನವನು. ಗಂಡಸರ ಸಹವಾಸದಲ್ಲಿ ಕಾಲಹರಣ ಮಾಡುವದಕ್ಕಿಂತ ಹೆಂಗಳೆಯರ ಸಹವಾಸದಲ್ಲಿರುವದೇ ಆತನಿಗೆ ಹೆಚ್ಚು ರುಚಿಸುತ್ತಿತ್ತು. ಅದರಿಂದ ಅವನಿಗೆ ಹೆಂಗಸರ ಹಿತಾಹಿತಗಳ ಜ್ಞಾನವು ಬೇರೆ ಗಂಡಸರಿಗಿಂತ ಹೆಚ್ಚಾಗಿತ್ತು. ಕಾಸೀಮನು ಅಮೀನೆಯನ್ನು ನೀರೊಳಗಿಂದ ತೆಗೆದಂದಿನಿಂದ, ತನ್ನ ಯಜಮಾನಳಿಗೆ ಕಾಸೀಮನ ಸಹವಾಸವು ರುಚಿಸಬಹುದೆಂದು ಅವನು ಹೇಗೋ ನಿಶ್ಚಯಿಸಿದ್ದನು; ಆದರೆ ಆ ಮಾತು ಕಾಸೀಮನಿಗೆ ಎಷ್ಟರಮಟ್ಟಿಗೆ ರುಚಿಸಬಹುದೆಂಬದನ್ನು ತಿಳಕೊಳ್ಳುವ ಸಲುವಾಗಿ, ಆತನು ಅಂದು ಎಲ್ಲರೂ ಮಲಗಿದ ಬಳಿಕ ಕಾಸೀಮನೆಡೆಗೆ ಬಂದು, ಅಂದಿನ ಚಿಗರೆಯ ಬೇಟೆಯ ಸಲುವಾಗಿ ಆತನನ್ನು ಮನಸೋಕ್ತವಾಗಿ ಸ್ತುತಿಸಿ:-ಮೀರಸಾಹೇಬ, ಇಂದಿನಂಥ ಉತ್ಕೃಷ್ಟ ಚಿಗರೆಯು ಈ ನಮ್ಮ ಖಾನಸಾಹೇಬರ ಮೊನ್ನಿನ ಲಗ್ನದಲ್ಲಿ ಕೂಡ ಸಿಕ್ಕಿರಲಿಲ್ಲ. ಅವರ ಲಗ್ನವು ಬಹು ಸಡಗರದಿಂದ ನೆರವೇರಿತು. ಅದಿರಲಿ ಮೀರಸಾಹೇಬ, ನಾನೊಂದು ಮಾತನ್ನು ನಿಮ್ಮೆದುರಿಗೆ ಆಡಬೇಕೆಂದಿರುವೆನು; ಆದರೆ ಆಡಲೋ-ಬೇಡವೋ? ಎಂಬದು ಇನ್ನೂ ನಿಶ್ಚಯುವೇ ಆಗಲೊಲ್ಲದು, ಎಂದು ನುಡಿದು ಸುಮ್ಮನಾಗಲು, ಈತನು ಅಮೀನೆಯ ವಿಷಯವಾಗಿಯೇ ಮಾತಾಡುವನೆಂದು ಕಾಸೀಮನು ತರ್ಕಿಸಿ, ಉತ್ಸುಕತೆಯಿಂದ ಆತನನ್ನು ಕುರಿತು:-ಝುಲಫೀಕರಖಾ, ಮಾತಾಡು; ಏಳ್ಳಷ್ಟು ಸಂಶಯ ಪಡದೆ ಹೇಳತಕ್ಕದ್ದನ್ನು ಹೇಳು, ಎನ್ನಲು, ಝುಲಫೀಕರನು ಖೇಕರಿಸಿ ಗಂಟಲು ಸಾಫ ಮಾಡಿಕೊಳ್ಳುತ್ತ:— ತಾವು ಖಾನಮಸಾಹೇಬಳನ್ನು ಆ ಪ್ರವಾಹದಿಂದ ತೆಗೆದು ಖಾನಸಾಹೇಬರ ಮೇಲೆ ಉಪ

ಕಾರದ ಬಹು ದೊಡ್ಡ ಹೊರೆಯನ್ನು ಹೊರಿಸಿದಂತಾಗಿರುತ್ತದೆ. ಅದರಿಂದಲೇ ಅವರು ನಿಮ್ಮನ್ನು ಇಷ್ಟು ಪ್ರೀತಿಸುತ್ತಿರುವರು. ಖಾನ ಮಸಾಹೇಬಳ ರೂಪವು ನಿಮ್ಮ ಕಣ್ಣಿಗೆ ಬಿದ್ದಿರಲಿಕ್ಕಿಲ್ಲ. ಅವಳು ಬಹು ಸುಂದರಳು; ಸ್ವರ್ಗದಿಂದಿಳಿದ ದೇವತೆಯೋ-ಏನೋ ಎಂಬಂತೆ ಭಾಸವಾಗುತ್ತದೆ. ಇಷ್ಟೇ ಅಲ್ಲ, ಇನ್ನೂ ಹೇಳುತ್ತೇನೆ ಕೇಳಿರಿ. ಈ ಅವಿವಾನೆಯು ಮನಸ್ಸಿನಲ್ಲಿ ಈ ಮುದಿಹದ್ದಿನೊಡನೆ ವಿವಾಹ ಮಾಡಿಕೊಳ್ಳುವದಿರಲಿಲ್ಲ; ಆದರೆ ಅವಿವಾನೆಯ ತಂದೆಯು ದುಡ್ಡಿನ ಲೋಭಿಯಾದದ್ದರಿಂದ, ಅವನು ಮಗಳ ಹಿತದ ಕಡೆಗೆ ಲಕ್ಷ್ಯಗೊಡಲಿಲ್ಲ. ಈ ಖಾನನೂ ಹೈದರಾಬಾದಿನವನೇ. ಮೊದಲು ಈತನ ತಂದೆಯು ಅಲ್ಲಿ ತೈನಾತಿಯ ಒಬ್ಬ ಕ್ಷುಲ್ಲಕ ಶಿಪಾಯಿಯಾಗಿದ್ದನು. ಈತನ ಬೇಳೆಯು ಆ ನಿಜಾಮಶಾಹಿಯಲ್ಲಿ ಬೇಯದ್ದರಿಂದ, ಈತನು ದಕ್ಷಿಣಕ್ಕೆ ಹೋಗಿ, ಹೈದರನ ಚಾಕರಿಗಿದ್ದು, ಈಗ ಎಲ್ಲಿಯೋ ದಳಪತಿಯಾಗಿರುತ್ತಾನೆ; ಈತನ ಅಪಾರ ಸಂಪತ್ತಿಗೆ ಮರುಳಾಗಿಯೇ ಅವಿವಾನೆಯ ತಂದೆಯು, ಈತನಿಗಿರುವ ಈ ಮೊದಲಿನ ಇಬ್ಬರು ಹೆಂಡಂದಿರ ಮೇಲೆ ತನ್ನ ಈ ಮಗಳನ್ನು ಕೊಟ್ಟಿರುತ್ತಾನೆ ಈತನ ಗೆಳೆಯರು ಪುನಃ ವಿವಾಹವಾಗುವದೇಕೆಂದು ಈತನನ್ನು ಕೇಳಲು, ತನಗೆ ಈ ವರೆಗೆ ಒಂದೂ ಸಂತತಿಯಾಗದಿರುವ ಕಾರಣವನ್ನು ಇವನು ತೋರಿಸುತ್ತಾನೆ.

"ಝುಲಫೀಕರ, ಹಾಗಾದರೆ ಈ ಖಾನಸಾಹೇಬರ ಚರಿತ್ರವು ಬಹು ವಿಚಿತ್ರವಾಗಿರುತ್ತದೆ!"

"ವಿಚಿತ್ರವೆಂದು ಏನು ಕೇಳುವಿರಿ? ಶ್ರೀರಂಗಪಟ್ಟಣಕ್ಕೆ ಹೋದ ಮೇಲೆ ಈ ಮೂರು ಜನ ಹೆಂಡಂದಿರ ಗೋಳು ಎಷ್ಟಾಗುವದೋ ಯಾರು ಹೇಳಬೇಕು? ಎಂದು ನುಡಿಯುವಷ್ಟರಲ್ಲಿ ಅಲ್ಲಿಗೆ ಯಾರೋ ಬಂದ ಸುಳುವು ಹತ್ತಲು, ಆತನು ಮತ್ತೆ ಮಾತನಾಡದೆ

ಅಲ್ಲಿಂದ ಹೊರಟು ಹೋದನು.

\+ + + + + +

ಮರುದಿನ ಆ ಪ್ರವಾಸಿಗಳು ಬಳ್ಳಾರಿಗೆ ಹೋದರು. ಮರಾಟರ ಹಾಗು ಪೆಂಡಾರಿಗಳ ಟೋಳಿಗಳು ಆ ಪ್ರಾಂತದಲ್ಲಿ ಸುಲಿಗೆಯನ್ನು ಪ್ರಾರಂಭಿಸಿರುವವೆಂದೂ, ಆ ಟೋಳಿಗಳು ತಮಗೆ ಸಮೀಪಿಸಿರುವವೆಂದೂ ಖಾವನ ದಂಡಿನವರಿಗೆ ಸುದ್ದಿ ಬಡಿಯಿತು. ತಾವು ನೆಟ್ಟಗೆ ದಕ್ಷಿಣಕ್ಕೆ ಹೋಗಿ ಆ ಸುಲಿಗೆಗಾರರ ಅಳವಿನೊಳಗೆ ಸಿಗದೆ, ನಂದಿದುರ್ಗದ ಮಾರ್ಗ ಹಿಡಿದು ಪೂರ್ವಕ್ಕೆ ಹೋಗುವದೇ ವಿಹಿತವೆಂದು ಅವನು ನಿಶ್ಚಯಿಸಿದರು. ಯಾಕಂದರೆ, ಖಾನನು ಲಗ್ನಕ್ಕೆ ಹೋಗಿ ಬಂದವನಾದುದರಿಂದ ಅವನ ಬಳಿಯಲ್ಲಿ ಸಾಕಷ್ಟು ಧನವೂ ಮುತ್ತು-ರತ್ನಗಳ ದಾಗೀನುಗಳೂ ಇದ್ದವು; ಅಲ್ಲದೆ ಆತನ ತರುಣ ಪತ್ನಿಯೂ ಸಂಗಡ ಇದ್ದಳು.

ಕೆಲ ದಿನ ಆ ಜನರು ಪ್ರವಾಸ ಮಾಡಿ ಟೀಪು ಸುಲ್ತಾನನ ರಾಜ್ಯವನ್ನು ಸೇರಿದ ಬಳಿಕ, ಅವರು ಒಂದು ದಿನ ಒಂದು ಮಸೀದೆಯಲ್ಲಿಳಿದಿರಲು, ಆ ಹಳ್ಳಿಗೆ ಮೊದಲಿನ ದಿನವೇ ಸುಲಿಗೆಗಾರರು ಬಂದು ಅಲ್ಪ-ಸ್ವಲ್ಪ ಗದ್ದಲ ಮಾಡಿ ಹೋಗಿರುವರೆಂದೂ, ಅಂದು ರಾತ್ರಿ ಪುನಃ ಅವರ ಉಪಟಳವು ಆಗಬಹುದೆಂದೂ ಆ ಊರ ಜನರು ಖಾನನಿಗೆ ಹೇಳಿದರು. ಅದರಿಂದ ಖಾನನು ತನ್ನ ದಂಡಾಳುಗಳನ್ನೂ, ಆ ಊರಲ್ಲಿಯ ಕೆಲ ಜನ ಪ್ರಮುಖರನ್ನೂ ಊರ ಸುತ್ತಮುತ್ತಲು ಪಹರೆ ಮಾಡಲು ನಿಯಮಿಸಿ, ತಾನು ಕಾಸೀಮನೊಡನೆ ಆ ಮಸೀದೆಯ ಶಿಖರದ ಮೇಲೆ ಏರಿ ಕುಳಿತು, ಆ ಸುಲಿಗೆಗಾರರ ಮಾರ್ಗವನ್ನು ನಿರೀಕ್ಷಿಸುತ್ತಿದ್ದನು. ಆಗ ಒಂದು ಪ್ರಹರ ರಾತ್ರಿಯಾಗಿರಬಹುದು ಅಷ್ಟರಲ್ಲಿ ಸುಲಿಗೆಗಾರರಾದ ಮರಾಟರ ಹಾಗು ಪೆಂಡಾರಿಗಳ ಎರಡು ಟೋಳಿಗಳು ಇತ್ತಂಡವಾಗಿ ಆ ಗ್ರಾಮದ ಕಡೆಗೆ

ಬರುತ್ತಿರುವದು ಖಾನನ ದೃಷ್ಟಿಗೆ ಬಿತ್ತು. ಆಗ ಅವನು:—ಯಾ ಅಲ್ಲಾ! ಈ ಬದ್‌ಮಾಷರು ತಮ್ಮ ಉದ್ಯೋಗಕ್ಕೆ ಎಷ್ಟು ದಿಟ್ಟತನ ದಿಂದ ಮುಂದುವರಿಯುತ್ತಿರುವರಲ್ಲ! ಇದು ನಮ್ಮ ಟೀಪುವಿನ ರಾಜ್ಯ ವಾಗಿದ್ದು, ಪ್ರಜೆಗಳ ಸಂರಕ್ಷಣೆಗಾಗಿ ಇಲ್ಲಿ ಸಮೀಪದಲ್ಲಿ ಒಂದು ದಂಡಿನ ಠಾಣ್ಯ ಕೂಡ ಇಲ್ಲವಲ್ಲ! ಅಂತೇ ಇವರು ಇಷ್ಟು ದಿಟ್ಟತನ ದಿಂದ ಏರಿ ಬರುತ್ತಿರುವರು. ಕಾಸೀಮಾ, ನಾನೊಬ್ಬನೇ ಇದ್ದಿದ್ದರೆ, ಒಮ್ಮೆಲೆ ಇವರ ಮೇಲೆ ಬಿದ್ದು, ಎಲ್ಲರನ್ನೂ ನುಚ್ಚುನುಚ್ಚಾಗಿ ಮಾಡಿ ಚೆಲ್ಲುತ್ತಿದ್ದೆನು; ಆದರೆ ಸಂಗಡ ನಮ್ಮ ಬೀಬೀಸಾಹೇಬರಿರುವದ ರಿಂದ ನಾನು ಅವರನ್ನು ಬಿಟ್ಟು ಬರಲಿಕ್ಕೆ ಶಕ್ಯವಿಲ್ಲ. ಅವರ ಹಾಗು ನಮ್ಮ ವಸ್ತ್ರ-ಒಡವೆಗಳ ರಕ್ಷಣೆಗಾಗಿ ನಾನು ಇಲ್ಲಿಯೇ ಇರಬೇಕಾ ಗಿದೆ. ಅಕೋ, ನೋಡು; ಅವರು ಆಚೆಯ ಆ ಹುಲ್ಲ ಚಪ್ಪರಕ್ಕೆ ಬೆಂಕಿ ಹಚ್ಚಿದರು. ಕಾಸೀಮ, ಹೀಗೆ ಅಗ್ನಿಪ್ರಲಯ ಮಾಡುವ ಅವರ ಉದ್ದೇಶವೇನಿರಬಹುದು?

ಕಾಸೀಮ:—ಒತ್ತಟ್ಟಿಗೆ ಬೆಂಕೀ ಹಚ್ಚಿದರೆ, ಊರ ಗಂಡಸ ರೆಲ್ಲ ಅಲ್ಲಿ ಸೇರಿ ಅದನ್ನು ನಂದಿಸುವ ಪ್ರಯತ್ನಕ್ಕೆ ಹತ್ತುವರು. ಆಗ ಆ ನೀಚರಿಗೆ ತಮ್ಮ ಸುಲಿಗೆಯ ಕೆಲಸವನ್ನು ನಿರಾತಂಕವಾಗಿ ಸಾಗಿ ಸಲಿಕ್ಕೂ, ಮನೆ-ಮನೆಗೆ ಹೊಕ್ಕು ಹೆಂಗಸರ-ಹುಡುಗರ ಮೈಮೇಲಿನ ವಸ್ತ್ರಾಭರಣಗಳನ್ನು ನಿರ್ಧಾಸ್ತವಾಗಿ ಸೆಳಕೊಳ್ಳಲಿಕ್ಕೂ ಅನುಕೂಲ ವಾಗುವದು. ಖಾನಸಾಹೇಬ, ಈಗ ತಾವು ಅಪ್ಪಣೆ ಕೊಡುವದಾ ದರೆ, ನಾನು ತಮಗೊಂದು ವಿನಂತಿ ಮಾಡಿಕೊಳ್ಳುವವನಿದ್ದೇನೆ. ಅದೇನಂದರೆ, ಇನ್ನು ಮುಂದಿನ ಮಾರ್ಗವನ್ನು ಕ್ರಮಿಸುವಾಗ ಇಂದಿಲ್ಲ ನಾಳೆ ನಮಗೆ ಈ ಸುಲಿಗೆಗಾರರ ಗುಂಪು ಗಂಟು ಬಿದ್ದೇ ಬೀಳುವದು. ನಮ್ಮಲ್ಲಿ ಈಗ ವಿಶೇಷ ದಂಡಾಳುಗಳಿಲ್ಲ. ಇದ್ದ ನಮ್ಮ ಅಲ್ಪ ಜನರು ಖಾನಮಸಾಹೇಬರ ಹಾಗು ಧನ-ಕನಕಗಳ ಸಂರಕ್ಷಣೆ

ಗಾಗಿ ಬೇಕೇ ಬೇಕು. ಆದ್ದರಿಂದ ನಾವು ಮತ್ತೆ ಕೆಲ ಜನ ಶೂರ ರನ್ನು ನಮ್ಮ ದಂಡಿನಲ್ಲಿ ಹಂಗಾಮಿಯಾಗಿ ಸೇರಿಸಿಕೊಳ್ಳಬೇಕು. ಆ ಜನರಿಗೆ ನಾವು ಹಿಮ್ಮೆಲೆ ಸಂಪೂರ್ಣ ಸಂಬಳವನ್ನು ಕೊಡಬಾರದು. ಅಲ್ಪ ಸ್ವಲ್ಪ ಮುಂಗಡವಾಗಿ ಕೊಟ್ಟು, ಬಾಕಿ ಉಳಿಯುವದನ್ನು ನಾವು ಶ್ರೀರಂಗಪಟ್ಟಣಕ್ಕೆ ತಲುಪಿದ ಮೇಲೆ ಕೊಡುವೆವೆಂದು ಅವ ರೊಡನೆ ಕರಾರು ಮಾಡಿಕೊಳ್ಳಬೇಕು. ಅಂದರೆ ನಾವು ಆ ಪೆಂಡಾರಿಗಳ ಕಾಟದಿಂದ ನಿರ್ಧಾಸ್ತರಾಗಿ ದಾರಿ ಕ್ರಮಿಸಲಿಕ್ಕೆ ಅರ್ಹರಾಗುವೆವು.

ಖಾನನು ಅದಕ್ಕೆ ಸಮ್ಮತಿಸಲು, ಕಾಸೀಮನು ಆಗಲೇ ಒಬ್ಬ ಸೇವಕನನ್ನು ಕಳಿಸಿ, ಆ ಊರ ಪಾಟೀಲನನ್ನು ಹಿಡತರಿಸಿದನು; ಹಾಗು ಆತನಿಗೆ ಖಾನಸಾಹೇಬರ ಆದೇಶವನ್ನು ತಿಳಿಸಿ, ಆತನಿಂದ ಹತ್ತಿಪ್ಪತ್ತು ಜನ ತರುಣ ಹಾಗು ಸಾಹಸಿಗರಾದ ಜನರನ್ನು ಕರೆಸಿ, ಅವರನ್ನು ಖಾನನ ಚಾಕರಿಗೆ ಇಟ್ಟುಕೊಂಡನು. ಇಷ್ಟಾಗುವದ ರೊಳಗೆ ಸುಲಿಗೆಗಾರರ ಉಪಟಳವು ಹೆಚ್ಚಾದ್ದರಿಂಥ, ಬೆಂಕಿ ಹತ್ತಿದ ಕಡೆಯು ಊರ ಜನರು ಗಟ್ಟ-ಗಟ್ಟಿಯಾಗಿ ಒದರಲಿಕ್ಕೂ ಶಂಖನಾದ ಮಾಡಲಿಕ್ಕೂ ಪ್ರಾರಂಭಿಸಿದರು. ಆ ಸುಲಿಗೆಗಾರರು ಖಾನನು ಇಳ ಕೊಂಡಿದ್ದ ಮಸೀದೆಯ ಕಡೆಗೇ ಭರದಿಂದ ಬರಹತ್ತಿದರು. ಖಾನ ನಲ್ಲಿ ಅಪಾರ ಸಂಪತ್ತಿಯಿರುವದೆಂದು ಆ ಸುಲಿಗೆಗಾರರು ಹೇಗೋ ಪತ್ತೆ ಹಚ್ಚಿದ್ದರು. ಅದರಿಂದಲೇ ಅವರು ಆ ಊರ ಬೇರೆ ಬೇರೆ ಭಾಗ ವನ್ನು ಸುಲಿಯುವ ಗೊಡವೆಗೆ ಹೋಗದೆ, "ದೀನ-ದೀನ, ಹರ-ಹರ ಮಹಾದೇವ"ಎಂಬ ಪ್ರಚಂಡ ಧ್ವನಿ ಮಾಡುತ್ತ ಮಸೀದೆಯ ಕಡೆಗೇ ಬರತೊಡಗಿದರು. ಅದನ್ನು ಕಂಡು ಖಾನನ ಸೊಂಡೆಯು ಒಣಗಿತು. ಮುಂದೇನು ಮಾಡಬೇಕೆಂಬದು ಆತನಿಗೆ ತೋಚದಾಯಿತು ಆಗ ಅವನು ಗಾಬರಿಯಿಂದ ಆ ಮಸೀದೆಯ ಶಿಖರದಿಂದ ಇಳಿದು, ತನ್ನ ಸೇವಕರಿಂದ ತನ್ನ ದ್ರವ್ಯ ಹಾಗು ವಸ್ತ್ರ-ಒಡವೆಗಳ ಎಲ್ಲ ಪೆಟ್ಟಿಗ

ಗಳನ್ನು ಆ ಮಸೀದೆಯ ನೆಲಮನೆಯ ಒಂದು ಕತ್ತಲುಕೋಣೆಯಲ್ಲಿ ರಿಸಿದನು; ಹಾಗು ಅಮೀನೆಗೂ ಅಲ್ಲಿಗೇ ಹೋಗಿ ಕುಳಿತಿರಲಿಕ್ಕೆ ತಿಳಿಸಿದನು. ಆಕೆಯು ಆ ಕತ್ತಲು ಕೋಣೆಯಲ್ಲಿ ಒಬ್ಬೊಂಟಿಗ ಳಾಗಿ ಕೂಡ್ರಲು ಸಮ್ಮತಿಸದೆ:—ನಾನು ಇಂಥ ಇಕ್ಕಟ್ಟಿನ ಪ್ರಸಂಗ ದಲ್ಲಿ ಹೀಗೆ ಗವಿಯಲ್ಲಿ ಕುಳಿತಿರಬೇಕೇ? ನಾನೂ ಒಬ್ಬ ದಂಡಾಳು ವಿನ ಮಗಳೇ ಆಗಿದ್ದೇನೆ; ಆದುದರಿಂದ ನಾನು ಅವ್ವಾಳಿಯ ಹಾಗೆ ನೆಲಮನೆಯಲ್ಲಿ ಅಡಗದೆ, ಮಸೀದೆಯ ಶಿಖರವನ್ನೇರಿ ಸುಲಿಗೆಗಾರ ರನ್ನು ಕೈಲಾದ ಮಟ್ಟಿಗೆ ಹೊಡೆದೋಡಿಸಲಿಕ್ಕೆ ಉದ್ಯುಕ್ತಳಾಗು ತ್ತೇನೆ, ಎಂದಂದಳು.

ಹೆಂಡತಿಯ ಈ ನಿರ್ಧಾರದ ನುಡಿಯನ್ನು ಕೇಳಿ ಖಾನನ ಹರ ಣವು ಹಾರಹತ್ತಿತು. ಅವನು ಕಳಕಳಿಯಿಂದ:—ಪ್ರಿಯೇ, ನಿನ್ನಂಥ ಸೂಜ್ಞಳು ಇಂಥ ಹಟಮಾರಿತನಕ್ಕೆ ಪ್ರವೃತ್ತಳಾಗುವದು ಸರಿಯಲ್ಲ. ನೀನು ಶಿಪಾಯಿಯ ಮಗಳಾಗಿದ್ದರೂ ಅಲ್ಲಿ ಆ ಪೆಂಡಾರಿಗಳ ಗುಂಡು ಬಿಂಡು ಬಂದು ಬಡಿಯುವ ಸಂಭವವಿದೆ. ಆದ್ದರಿಂದ ನೀನು ಅಲ್ಲಿಗೆ ಹೋಗಬೇಡ. ಇಲ್ಲಿಯೇ ಇರು. ನಾನೂ ನಿನ್ನ ಬಳಿಯಲ್ಲೇ ಇರು ವೆನು; ಅಥವಾ ಕಾಸೀಮನನ್ನಾದರೂ ಇಲ್ಲಿ ನಿನ್ನ ಕಾವಲಿಗೆ ಇಟ್ಟು, ನಾನು ಆ ಹರಾಮಖೋರರ ಪಾರುಪತ್ಯಕ್ಕೆ ಹೋಗುತ್ತೇನೆ, ಎಂ- ದಂದು, ಆಕೆಯನ್ನು ನೆಲಮನೆಯಲ್ಲಿಡದೆ ಹಾಗು ಆ ಮಸೀದೆಯ ಹೊರಬದಿಯ ಶಿಖರಕ್ಕೂ ಕರೆದೊಯ್ಯದೆ, ಒಳಬದಿಯ ಉಪ್ಪರಿಗೆಯ ಮೇಲೆ ಕೂಡ್ರಿಸಿ, ಆತನು ತನ್ನ ಜನರನ್ನು ಕುರಿತು:— ಎಲೈ ಸೇವ ಕರೇ, ನೀವೆಲ್ಲರೂ ನಿಮ್ಮ ನಿಮ್ಮ ಬಂದೂಕಗಳ ಹುಸಿಬಾರುಗಳನ್ನು ಒಮ್ಮೆ ಹಾರಿಸಿರಿ. ಅಂದರೆ ಆ ಸುಲಿಗೆಗಾರರು ಇತ್ತ ಬರದೆ, ಇಲ್ಲಿಯ ಜನರು ಎಚ್ಚತ್ತಿರುವರೆಂದು ತಿಳಿದು, ಬಂದ ದಾರಿಯಿಂದ ಹಿಂದಿರು ಗುವರು, ಎಂದು ಆಜ್ಞಾಪಿಸಿದನು. ಕೂಡಲೆ ಬಂದೂಕಿನ ಜನರೆಲ್ಲ

ಹುಸಿಬಾರುಗಳನ್ನು ಮಾಡಿದರು ಆದರೂ ಆ ಸುಲಿಗೆಗಾರರು ಹೆದರಿ ಹಿಂಜರಿಯಲಿಲ್ಲ. ಅವರು ಮತ್ತಷ್ಟು ಭರದಿಂದ ಬರತೊಡಗಿದರು. ಆಗ ಕಾಸೀಮನು ಖಾನನಿಗೆ:—ಖಾನಸಾಹೇಬ, ನಾವೆಲ್ಲರೂ ಈ ಮಸೀದೆಯಲ್ಲೇ ಕುಳಿತು, ಅವರನ್ನೋಡಿಸಲು ಪ್ರಯತ್ನಿಸುವದು ಸರಿಯಲ್ಲ. ಸಂಖ್ಯೆಯಲ್ಲಿ ನಮಗಿಂತಲೂ ಹೆಚ್ಚಾಗಿರುವ ಅವರು, ನಮ್ಮನ್ನು ಸುತ್ತುಗಟ್ಟಿ ನಮ್ಮ ಮೇಲೆ ಗುಂಡುಗಳನ್ನು ವರ್ಷಿಸ ಹತ್ತಿದರೆಂದರೆ, ನಮ್ಮ ಈ ಪ್ರಯತ್ನವು ನಿಷ್ಫಲವಾದೀತು. ಆದುದ ರಿಂದ ನನ್ನೊಡನೆ ಕೆಲ ಜನರನ್ನು ಕಳಿಸಿರಿ. ನಾನು ದಾರಿಯಲ್ಲಿ ಎದು ರಾಗಿ ಅವರನ್ನು ಅಡ್ಡಗಟ್ಟುವೆನು. ಬಳಿಕ ತಾವು ತಮ್ಮ ಜನರೊಡನೆ ಇಲ್ಲಿಂದಲೇ ಅವರ ಮೇಲೆ ಗುಂಡು ಹಾರಿಸಬೇಕು. ಹೀಗೆ ಮಾಡು ವದರಿಂದ ಆ ಸುಲಿಗೆಗಾರರು ಎರಡೂ ಕಡೆಗೆ ಕಾದಬೇಕಾಗುವದ ರಿಂದ, ತುಸ ಹೊತ್ತಿನಲ್ಲಿಯೇ ಅವಸಾನಗೆಟ್ಟು ಓಡಿ ಹೋಗುವರು, ಎಂದು ಸೂಚಿಸಲು, ಖಾನನು ಕಾಸೀಮನ ಆ ರಣಕೌಶಲ್ಯಕ್ಕೆ ತಲೆ ದೂಗಿ, ಹಾಗೆಯೇ ಮಾಡಲು ಸಮ್ಮತಿಯನ್ನಿತ್ತನು; ಆದರೆ ಕಾಸೀ ಮನು ಅಲ್ಲಿಂದ ಹೊರಡುವಾಗ "ತಮ್ಮಾ, ಬಹು ಎಚ್ಚರಿಕೆಯಿಂ ದಿರು; ಅಂಥ ಪ್ರಸಂಗವೇ ಬಂದರೆ, ಜೀವದ ಮೇಲೆ ಪ್ರಸಂಗ ತಂದುಕೊಳ್ಳದೆ ಇತ್ತ ಹೊರಟು ಬಾ" ಎಂದು ನಾಲ್ಕು ನಾಲ್ಕು ಸಾರೆ ಖಾನನು ಆತನಿಗೆ ಹೇಳಿದನು

ಕಾಸೀಮನು ಕೆಲ ಆರಿಸಿದ ಜನರೊಡನೆ ಅಶ್ವಾರೂಢನಾಗಿ ಆ ಪೆಂಡಾರಿಗಳನ್ನು ಅಡ್ಡಗಟ್ಟಲಿಕ್ಕೆ ಹೊರಟನು. ಇಷ್ಟರಲ್ಲಿ ಅವರು ಮಸೀದೆಯ ಸಮೀಪಕ್ಕೇ ಬಂದಿದ್ದರು. ಹಿಲಾಲುಗಳ ಬೆಳಕಿನಲ್ಲಿ ಬರುತ್ತಿದ್ದ ಆ ಸುಲಿಗೆಗಾರರ ಮುಖಗಳು ಕೂಡ ಮಸೀದೆಯ ಉಪ್ಪ ರಿಗೆ-ಶಿಖರಗಳ ಮ್ಯಾಲಿದ್ದವರಿಗೆ ಕಾಣಿಸಹತ್ತಿದವು; ಆದರೆ ಸುತ್ತಲೂ ಕತ್ತಲುಗವಿದಿದ್ದರಿಂದ ಮಸೀದೆಯ ಮೇಲಿದ್ದವರ ಸುಳುವು ಕೂಡ

ಕೆಳಗಿದ್ದ ಆ ಪೆಂಡಾರಿಗಳಿಗೆ ಕಾಣುತ್ತಿರಲಿಲ್ಲ. ಕಾಸೀಮನು ಅವರ ಸಮೀಪಕ್ಕೆ ಹೋದವನೇ ತನ್ನ ಬಂದೂಕಿನಿಂದ ಅವರ ಮುಖಸ್ಥನನ್ನು ಹೊಡೆದನು. ಇತ್ತ ಖಾನನೂ ಆ ಸುಲಿಗೆಗಾರರ ಮೇಲೆ ಮಸೀದೆಯ ಮೇಲಿನಿಂದಲೇ ನೂರಾರು ಗುಂಡುಗಳನ್ನು ಹಾರಿಸಿದನು. ಆ ಮೊದಲನೆಯ ಚಕಮಕಿಯಲ್ಲೇ ವೈರಿಗಳ ಹತ್ತಿಪ್ಪತ್ತು ಜನರು ತಮ್ಮ ಪಿತೃಲೋಕದ ದಾರಿ ಹಿಡಿದದ್ದು ಕಂಡು ಬಂತು. ಅದರಿಂದ ಉಳಿದ ಸುಲಿಗೆಗಾರರು ರೊಚ್ಚಿಗೆದ್ದರು. ಇಷ್ಟರಲ್ಲಿ ಕಾಸೀಮನ ಬಂದೂಕಿನೊಳಗಿನ ಮದ್ದು-ಗುಂಡುಗಳು ತೀರಲು, ಅದನ್ನು ಈಗಿನಂತೆ ಒಮ್ಮೆಲೆ ತುಂಬಿಕೊಳ್ಳುವಷ್ಟು ಸೌಕರ್ಯವು ಆಗಿನ ಕಾಲದಲ್ಲಿರದ್ದರಿಂದ, ಕಾಸೀಮನು ತನ್ನ ಸಂಗಡಿಗನನ್ನು ಕುರಿತು:- "ಎಲಾ, ನನಗೆ ಮದ್ದು-ಗುಂಡು ತುಂಬಿದ ಬೇರೆ ಬಂದೂಕನ್ನು ಬೇಗನೆ ಕೊಡು ಯಾಕೆ, ನಿನ್ನ ಬಳಿಯಲ್ಲಿಲ್ಲವೆ? ಮತ್ತಾರ ಹತ್ತಿರಿದ್ದರೂ ತಂದು ಕೊಡು" ಎಂದು ಗಟ್ಟಿಯಾಗಿ ಕೂಗಿದನು.

ಕಾಸೀಮನ ಆ ವಾಕ್ಯವು ಮಸೂತಿಯ ಮೇಲಿನವರಿಗೆ ಸಹಜವಾಗಿ ಕೇಳಿಸಿತು. ಆಗ:—ಇಕೋ, ಇದನ್ನು! ಎಂದು ಉಚ್ಚರಿಸಿ, ತನ್ನ ಕಡೆಗೆ ಬಂದೂಕನ್ನು ಚಲ್ಲುವ ಒಂದು ಸ್ತ್ರೀವ್ಯಕ್ತಿಯ ಸಹಾನುಭೂತಿಯು ಕಾಸೀಮನ ನಿದರ್ಶನಕ್ಕೆ ಬಂತು ಅಮೀನೆಯು ತನ್ನ ಕೈಮುಟ್ಟಿ ಬೇರೆ ಬಂದೂಕನ್ನು ಕೊಟ್ಟಿದ್ದನ್ನು ಕಂಡು, ಕಾಸೀಮನಲ್ಲಿ ಅವರ್ಣನೀಯವಾದ ಸ್ಫುರಣವುಂಟಾಯಿತು. ಆಗ ಅವನು ಆ ಹೊಸ ಬಂದೂಕನ್ನು ಕೈಯಲ್ಲಿ ಧರಿಸಿ, ಅಂತಕನಂತೆ ಶತ್ರುಗಳನ್ನು ಸಂಹರಿಸತೊಡಗಿದನು ಆ ಬಂದೂಕಿನ ಮದ್ದು-ಗುಂಡುಗಳು ತೀರ ಬರಲು, ಅಮೀನೆಯು ಮತ್ತೊಂದು ಬಂದೂಕನ್ನು ಕಾಸೀಮನ ಕಡೆಗೆ ಚೆಲ್ಲುತ್ತಿದ್ದಳು. ಅಷ್ಟರಲ್ಲಿ ಖಾನನ ದೃಷ್ಟಿಯು ಆಕೆಯ ಕಡೆಗೆ ಮೇಧಿಸಿತು. ಕೂಡಲೆ ಆತನು:-ವಾಹವ್ಹಾ! ಪ್ರಿಯೇ, ನೀವೂ

ನಮಗೆ ಈ ಸಂಗ್ರಾಮದಲ್ಲಿ ಸಹಾಯ ಮಾಡುತ್ತಿರುವೆಯಲ್ಲವೆ? ಶಾಬಾಸ! ನಿನಗೇ ಶೂರಪತ್ನಿಯೆನಬೇಕು! ಎಂದೆಂದು, ತನ್ನ ಜನರನ್ನು ಹುರಿದುಂಬಿಸುತ್ತ, ತಾನೂ ವೈರಿಗಳ ಮೇಲೆ ಗುಂಡುಗಳನ್ನು ಬಿಡಹತ್ತಿದನು.

ಆಗ ಕಾಸೀಮನು:—ಖಾನಸಾಹೇಬ, ಇನ್ನು ನಿಮ್ಮ ಕೆಲಸವನ್ನು ನಿಲ್ಲಿಸಿರಿ; ಯಾಕಂದರೆ, ಶತ್ರುಗಳಲ್ಲಿಯ ಬಹು ಜನರು ಸಂಹರಿಸಲ್ಪಟ್ಟದ್ದು, ಉಳಿದ ಜನರು ತಮ್ಮ ಕಾಲಿಗೆ ಬುದ್ಧಿ ಹೇಳತೊಡಗಿದ್ದಾರೆ, ಎಂದೆಂದು, ಅವನು ಆ ಓಡಿ ಹೋಗುವವರ ಬೆನ್ನಟ್ಟಲಿಕ್ಕೆ ತನ್ನ ಸಂಗಡ ಕೆಲ ಜನರನ್ನು ತಕ್ಕೊಂಡು ಭರದಿಂದ ಸಾಗಿದನು. ''ಇನ್ನು ಅವರನ್ನು ಬೆನ್ನಟ್ಟುವ ಅವಶ್ಯಕತೆಯಿಲ್ಲ''ೆಂದು ಖಾನನು ಕಾಸೀಮನಿಗೆ ಬಹು ಪರಿಯಾಗಿ ಹೇಳಿದನು; ಅಮೀನೆಯೂ ಕೂಡ ಹೋಗಬಾರದೆಂದು ಆತನಿಗೆ ಒಂದೆರಡು ಸಾರೆ ಸೂಚಿಸಿದಳು; ಆದರೆ ಹೊಸ ರಕ್ತದ ಆ ತರುಣನಿಗೆ ಆ ವೃದ್ಧಪಿತಾಮಹನ ಹಾಗು ಆ ನವತರುಣಿಯ ಹಿತೋಕ್ತಿಗಳು ಹೇಗೆ ರುಚಿಸಬೇಕು?

ಊರ ಹೊರಗಿನ ಶಿಬಿರದ ಹತ್ತರ ಆ ಪೆಂಡಾರಿಗಳ ಹಾಗು ಕಾಸೀಮನ ಕಡೆಯವರ ನಡುವೆ ಮತ್ತೊಂದು ಚಿಕ್ಕ ಚಕಮಕಿಯು ಉಂಟಾಯಿತು. ಅದರಲ್ಲಿ ಕಾಸೀಮನು ಮತ್ತೆ ಇಬ್ಬರು ಪುಂಡರನ್ನು ಯಮಸದನಕ್ಕಟ್ಟಿದನು; ಹಾಗು ಮತ್ತೊಬ್ಬನನ್ನು ತುಂಡರಿಸುವ ಕೆಲಸದಲ್ಲಿ ಮಗ್ನನಾಗಿರಲು, ಯಾರಿಂದಲೋ ಅವನಿಗೊಂದು ಖಡ್ಗದ ಜೋರಗಡತವು ಬಿತ್ತು. ಕೂಡಲೆ ಅವನು ಬವಳಿ ಬಂದು ನೆಲಕ್ಕೆ ಬಿದ್ದನು ಅಷ್ಟರಲ್ಲಿ ಕಾಸೀಮನ ಕಡೆಯವರು ಮುಂದೆ ಬಂದು, ಆತನ ಮೇಲೆ ಕೈ ಎತ್ತಿದ್ದ ಆ ಪೆಂಡಾರಿಯನ್ನು ಹರಿಗಡಿದರು. ಕೂಡಲೆ ಉಳಿದ ಪೆಂಡಾರಿಗಳು ದಾರಿ ಸಿಕ್ಕತ್ತ ಓಡಿ ಹೋದರು

———

## ನಂದಿದುರ್ಗ.

ಮೀರಕಾಸೀಮನಿಗೆ ಆಯಕಟ್ಟಿನ ಸ್ಥಳಕ್ಕೆ ಪೆಟ್ಟು ಬಿದ್ದಿರಲಿಲ್ಲ. ಆದರಿಂದ ಆತನು ತುಸ ಹೊತ್ತಿನಲ್ಲಿಯೇ ಸಾವಧಗೊಂಡನು; ಆದರೂ ಆತನ ಗಾಯದಿಂದ ನೆತ್ತರವು ಹೆತ್ತರಿಸಿ ಹೊರಚಲ್ಲುತ್ತಿದ್ದು ದರಿಂದ, ಅವನು ಸ್ವಂತ ಕಾಲಿನಿಂದ ನಡೆದು, ತನ್ನ ಠಾಣ್ಯವನ್ನು ಸೇರುವಂತಿರಲಿಲ್ಲ. ಆಗ ಆತನ ಸಂಗಡಿಗರು ಒಂದು ಡೋಲಿಯನ್ನು ಸಿದ್ಧಗೊಳಿಸಿ, ಅದರಲ್ಲಿ ಅವನನ್ನು ಕೂರಿಸಿಕೊಂಡು ಖಾನನಿಳಿದು ಕೊಂಡಿದ್ದ ಮಸೀದೆಗೆ ಸಾಗಿದರು.

ಪೆಂಡಾರಿಗಳು ಪಲಾಯನ ಸೂಕ್ತವನ್ನು ಪಠಿಸಿದ ಬಳಿಕ, ಕಾಸೀಮನು ತೀವ್ರವೇ ಮನೆಗೆ ಬರಬಹುದೆಂದು ತಿಳಿದಿದ್ದ ಅಮೀ ನೆಯು, ಆತನ ಮಾರ್ಗ ನಿರೀಕ್ಷಣೆ ಮಾಡುತ್ತ ಆ ಮಸೀದೆಯ ಉಪ್ಪರಿಗೆಯ ಮೇಲೆಯೇ ಕುಳಿತಿದ್ದಳು. ಅಷ್ಟರಲ್ಲಿ ಹಿಲಾಲುಗಳ ಬೆಳ ಕಿನಲ್ಲಿ ಬರುತ್ತಿದ್ದ ಒಂದು ಡೋಲಿಯೂ, ಅದು ಸಮಿ-ಸಮೀಪಿಸಿದ ಹಾಗೆ ಅದರೊಳಗೆ ಕುಳಿತಿದ್ದ ಕಾಸೀಮನ ನೀರವ ಮೂರುತಿಯೂ ಅವಳಿಗೆ ಕಾಣಿಸಿದವು. ಅದನ್ನು ನೋಡಿ ಅವಳು ಮನಸ್ಸಿನಲ್ಲಿ ಗಾಬರಿ ಯಾದಳು. ಕಾಸೀಮನಿಗೆ ಚನ್ನಾಗಿ ಪೆಟ್ಟು ತಗಲಿದೆಯೆಂದೂಹಿಸಿ, ಅವಳು ಆ ಸಂಗತಿಯನ್ನು ಖಾನನಿಗೆ ತಿಳಿಸಿದಳು. ಕಾಸೀಮನು ಅಲ್ಲಿಗೆ ಬಂದೊಡನೆಯೆ ಖಾನನು ಆತನನ್ನು ವಿಚಾರಿಸಲು, ತನಗೆ ಅಷ್ಟೊಂದು ಕಠಿಣವಾದ ಗಾಯವಾಗಿಲ್ಲೆಂದು ಆತನು ಹೇಳಿದನು. ಆದರೂ ಖಾನನು ಆತನ ಗಾಯವನ್ನು ನೋಡಿ, ಅದಕ್ಕೆ ಯೋಗ್ಯ ವಾದ ಮಲಮು ಮುಂತಾದುದನ್ನು ಹಾಕಿ, ಅಮೀನೆಯ ಸಹಾಯ ದಿಂದ ಅದನ್ನು ಕಟ್ಟಿದನು. ಈ ಗಾಯದ ನೆವದಿಂದಲಾದರೂ ತನಗೆ ಅಮೀನೆಯ ಅಂಗ ಸ್ಪರ್ಶವುಂಟಾಯಿತಲ್ಲ! ಎಂಬ ಮನೋಭಾವನೆ ಯಿಂದ ಸಂತುಷ್ಟನಾಗುತ್ತಿದ್ದ ಕಾಸೀಮನಿಗೆ ಆ ಗಾಯದ ಪರಿವೆ

ಕೂಡ ಉಳಿದಿರಲಿಲ್ಲ!! ಇದರಿಂದ ಅಂಥ ಸ್ಥಿತಿಯಲ್ಲಿಯೂ ಆತನು ಆನಂದಸ್ವರೂಪನಾಗಿ ಕಾಣುತ್ತಿದ್ದನು. ಗಾಯ ಕಟ್ಟುವದು ಮುಗಿದ ಬಳಿಕ "ನೀನು ತುಸ ಹೊತ್ತು ಸ್ವಸ್ಥವಾಗಿ ಮಲಗಿಕೊಂಡರೆ, ನಿನಗೆ ಹುಷಾರಿಯೆನಿಸಬಹುದು" ಎಂದು ಖಾನನು ಕಾಸೀಮುನಿಗೆ ಹೇಳುತ್ತಿರಲು, ಅತ್ತ ಅಮೀನೆಯು ಹಾಸಿಗೆ ಹಾಸಿ ಕೊಟ್ಟಳು. ಅಮೀನೆಯು ಕೈಮುಟ್ಟಿ ಹಾಸಿದ್ದ ಹಾಸಿಗೆಯ ಮೇಲೆ ಮಲಗುವ ಯೋಗವು ಈ ಗಾಯದ ನೆವದಿಂದ ನನಗೆ ಪ್ರಾಪ್ತವಾಯಿತಲ್ಲವೆ? ಅಲ್ಲಾ! ನಿನ್ನ ಘಟನೆಯು ವಿಚಿತ್ರವಾದುದು! ಎಂದಂದು, ಕಾಸೀಮನು ಅದರ ಮೇಲೆ ಪವಡಿಸಿದನು. ಇಡಿ ರಾತ್ರಿಯ ಶ್ರಮದಿಂದಲೂ, ಗಾಯದ ನೋವಿನಿಂದಲೂ ಹೈರಾಣಾಗಿದ್ದ ಆತನಿಗೆ ತುಸ ಹೊತ್ತಿನಲ್ಲಿಯೇ ಗಾಢವಾದ ನಿದ್ದೆ ಹತ್ತಿತು.

ಬಳಿಕ ಖಾನನು ಪೆಂಡಾರಿಗಳಿಂದ ಆ ಊರವರಿಗಾದ ಉಪಟಳವನ್ನು ಕಣ್ಣುಟ್ಟಿ ನಿರೀಕ್ಷಿಸಲಿಕ್ಕೆ ಊರೊಳಗೆ ಹೊರಟನು; ಅವನು ಮೊಟ್ಟ ಮೊದಲು ಆ ಮಸೀದೆಯನ್ನು ಸಂರಕ್ಷಿಸಲಿಕ್ಕೆ ಕೆಲ ಜನರನ್ನು ನಿಯಮಿಸತೊಡಗಿದನು. ಖಾನನು ಹೊರಗೆ ಎದ್ದು ಹೋಗಲು, ಅಮೀನೆಯೊಬ್ಬಳೇ ಕಾಸೀಮನ ಬಳಿಯಲ್ಲುಳಿದಳು. ಆಕೆಯು ಆತನಿಂದ ತುಸ ಅಂತರದ ಮೇಲೆ ದೀಪದ ಬೆಳಕಿನಲ್ಲಿ ಕುಳಿತುಕೊಂಡಿದ್ದಳು. ಖಾನನು ಮಸೀದೆಯ ಕಾವಲುಗಾರರನ್ನು ನಿಯಮಿಸುವ ಕೆಲಸದಲ್ಲಿ ಬಹಳ ವೇಳೆಗಳೆದನು. ಆದರಿಂದ ಅಮೀನೆಯೊಬ್ಬಳೇ ಕಾಸೀಮನ ಹತ್ತರ ಅಷ್ಟೊತ್ತು ಕುಳಿತಿರುವ ಯೋಗವು ತಾನಾಗಿ ಪ್ರಾಪ್ತವಾಯಿತು. ಮನುಷ್ಯನು ಸುಮ್ಮನೆ ಕುಳಿತ ಬಳಿಕ ಆತನ ಮನಸ್ಸಿನಲ್ಲಿ ಬಗೆಬಗೆಯ ಸುಷ್ಟ-ದುಷ್ಟ ವಿಚಾರಗಳು ಗೊಂದಲವೇಳುವದು ಸ್ವಾಭಾವಿಕವಾದದ್ದು. ಅದರಲ್ಲಿಯೂ ಅಮೀನೆಯಂಥ ಷೋಡಶವರ್ಷದ ತರುಣೆಯು, ಅದೇ ತಾರುಣ್ಯಾವಸ್ಥೆ

ಯಲ್ಲಿ ಪ್ರವೇಶಿಸಿದ್ದ ಕಾಸೀಮನಂಥ-ತನ್ನ ಮನಸ್ಸನ್ನಪಹರಿಸಿದ್ದ-ಯುವಕನ ಸಾನ್ನಿಧ್ಯದಲ್ಲಿ ಕುಳಿತಿರುವಾಗ ಅವಳ ಮನಸ್ಸಿನಲ್ಲಿ ಯಾವ ಯಾವ ವಿಚಾರಗಳು ತಂಡ-ತಂಡವಾಗಿ ಉದ್ಭವಿಸುತ್ತಿದ್ದವೆಂಬದನ್ನು ಆದಾರು ಹೇಳಬೇಕು? ಅಮೀನೆಯು ನಿದ್ರಾವಶನಾಗಿದ್ದ ಕಾಸೀಮನ ಮುಖದ ಕಡೆಗೆ ಎವೆಯಿಕ್ಕದೆ ನೋಡುತ್ತ, ತನ್ನ ಜೀವನ ಚರಿತ್ರದ ವಿಷಯವಾಗಿ ಆಲೋಚಿಸತೊಡಗಿದಳು. ತನ್ನನ್ನು ಈ ನರವೀರನು ಬದುಕಿಸದಿದ್ದರೆ, ಇಂದು ತನಗೆ ಈ ಪ್ರಕಾರ ಚಿಂತಾಕ್ರಾಂತಳಾಗಿ ಕುಳಿತು ಆಲೋಚಿಸುವ ಪ್ರಸಂಗವಾದರೂ ಎಲ್ಲಿ ಬರುತ್ತಿತ್ತೆಂದು ಅವಳು ಹಿಮ್ಮೆ ಅಂದುಕೊಂಡು, ಹಿಂದು ದೀರ್ಘವಾದ ನಿಟ್ಟುಸಿರನ್ನು ಬಿಟ್ಟಳು. ತದನಂತರ ಅಂದಿನ ಕಾಸೀಮನ ಧೈರ್ಯ, ಸಾಹಸ, ರಣಕೌಶಲ್ಯ ಮುಂತಾದವುಗಳು ಅವಳ ಸ್ಮರಣಕ್ಕೆ ಬರಲು, ಆಕೆಯಲ್ಲಿ ಆತನ ವಿಷಯವಾಗಿ ಹಿಳ್ಳೇ ಪೂಜ್ಯ ಭಾವನೆಯು ನೆಲೆಗೊಂಡಿತು. ಕೆಲ ನಿಮಿಷಗಳ ನಂತರ ಅವಳ ಅಂತಃಕರಣದಲ್ಲಿ ತನ್ನ ಸ್ವಂತದ ಬಗ್ಗೆ ಮಿಗಿಲಾದ ದುಃಖವುತ್ಪನ್ನವಾಗಲು, ಅವಳು ಕ್ಷುಬ್ಧಳಾದಳು. ಆಗ ಅವಳ ಮನಸ್ಸಿನಲ್ಲಿ ಹಾಗೇಕೆ ಎನಿಸಿತೋ, ಯಾರು ಬಲ್ಲರು! ತಾನು ಕಾಸೀಮನ ಹತ್ತಿರಕ್ಕೆ-ಆತನಿಗೆ ಹೊಂದಿ ಕೂಡ್ರಬೇಕೆಂಬ ಇಚ್ಛೆಯು ಅವಳಿಗೆ ಉಂಟಾಯಿತು. ಈ ವಿಚಾರಕ್ಕೆ ಅವಳ ಮನಸ್ಸು ತುಸ ಹೊತ್ತಿನ ವರೆಗೆ 'ಭವತಿ ನ ಭವತಿ' ಮಾಡಿ, ಬಳಿಕ ಸಮ್ಮತಿಯನ್ನಿತ್ತಿತು ಕಡೆಗೆ ಅವಳು ಕುಳಿತಲ್ಲಿಂದ ಎದ್ದು ಹೋಗಿ ಆತನಿಗೆ ಹೊಂದಿ ಕುಳಿತೇ ಬಿಟ್ಟಳು! ಅಲ್ಲಿ ಕುಳಿತು ಅವಳು ಆತನ ಮುಖಭಾವವನ್ನು ದಿಟ್ಟಿಸಿ ನೋಡಲಾರಂಭಿಸಿದಳು. ಮನುಷ್ಯನಿಗೆ ಮಾನಸಿಕ ವ್ಯಥೆಯುಂಟಾದಾಗ ಆತನ ಹಣೆ ಹಾಗು ಹುಬ್ಬುಗಳು ಹೇಗೆ ಗಂಟಿಕ್ಕುವವೋ, ಹಾಗೆಯೇ ಆ ಗಾಢನಿದ್ರಾಪರವಶನಾಗಿದ್ದ ಕಾಸೀಮನ ಅವಸ್ಥೆಯಾಗಿದೆಯೆಂದು ಅವಳಿಗೆ ಭಾಸವಾಯಿತು; ಹಾಗು

ಯಾವನೊಬ್ಬನು ಮಾತಾಡ ಹತ್ತಿದನೆಂದರೆ ಆತನ ತುಟಿಗಳು ಹೇಗೆ ಅಲ್ಲಾಡಹತ್ತುವವೋ, ಹಾಗೆ ನಿದ್ರಾಸಕ್ತನಾಗಿದ್ದ ಆ ರಾಮೀಮನ ಓಷ್ಠಗಳೂ ಚಲಿಸಲಾರಂಭಿಸಿದ್ದವು. ಆಗ ಅವಳು ಆತನ ಮುಖದ ಹತ್ತರ ತನ್ನ ಕಿವಿಯನ್ನು ಒಯ್ದು ಆಲಿಸಿ ಕೇಳಲಾರಂಭಿಸಿದಳು; ಆದರೆ ಮೊದಮೊದಲು ಅವಳಿಗೆ ಏನೂ ಕೇಳಿಸಲಿಲ್ಲ. ಕೆಲ ನಿಮಿಷ ಗಳ ಮೇಲೆ ಆತನು ರಣಸಂಗ್ರಾಮದಲ್ಲಿ ಆಸಕ್ತನಾಗಿದ್ದಾಗ ಶತ್ರು ಗಳನ್ನು ಕುರಿತು ನುಡಿಯುತ್ತಿದ್ದ ಹೀನವಾಕ್ಯಗಳನ್ನೇ ಬಡಬಡಿಸುವ ಅಸ್ಪಷ್ಟ ಶಬ್ದಗಳು ಆಕೆಗೆ ಕೇಳಹತ್ತಿದವು. ಬಳಿಕ ಆತನು ಒಂದು ಮಗ್ಗಲಿನಿಂದ ಮತ್ತೊಂದು ಮಗ್ಗಲಿಗೆ ಹೊರಳಿ ಸ್ವಸ್ಥವಾಗಿ ಮಲಗಿ ದನು; ಆದರೆ ಆ ಸ್ಥಿತಿಯು ಬಹಳ ಹೊತ್ತಿನ ವರೆಗೆ ಉಳಿಯಲಿಲ್ಲ ಅವನ ತುಟಿಗಳು ಮತ್ತೆ ಅಲ್ಲಾಡಹತ್ತಲು, ಅಮೀನೆಯು ಮತ್ತೆ ಆಲಿಸಿ ಕೇಳಹತ್ತಿದಳು. ಆಗ ಗಾಢನಿದ್ರಾಪರವಶನಾಗಿದ್ದ ರಾಮೀಮನ ಬಾಯಿಂದ "ಅಮೀನೆ" ಎಂಬ ಶಬ್ದವು ಹೊರಬಿತ್ತು. ಆ ಶಬ್ದ ವನ್ನು ಕೇಳಿದ ಬಳಿಕಂತೂ ಆ ತರುಣಿಯ ಮನಃಸ್ಥಿತಿಯು ಮತ್ತಿಷ್ಟು ಚಂಚಲವಾಯಿತು "ಈ ಯುವಕನಿಗೆ ನನ್ನ ಹೆಸರು ಹೇಗೆ ಗೊತ್ತಾ ಗಿರಬೇಕು?" ಎಂದು ಅವಳು ತನ್ನಷ್ಟಕ್ಕೆ ತಾನೇ ಅಂದುಕೊಂಡು, ಇನ್ನು ಅವಳು ಅವನನ್ನು ತನ್ನ ಬಾಹುಪಾಶದಲ್ಲಿ ಹಿಡಿಯತಕ್ಕವಳು; ಅಷ್ಟರಲ್ಲಿ ಹೊರಗೆ ಖಾನನು ಬಂದ ಶಬ್ದವು ಕಿವಿಗೆ ಬೀಳಲು, ಅವಳು ಮೆಟ್ಟಿ ಬಿದ್ದು, ಭಗ್ನಮನೋರಥಳಾಗಿ ತನ್ನ ಪರದೆಯೊಳಗೆ ಹೊಕ್ಕು ಕುಳಿತಳು

ಉತ್ತರಕ್ಷಣದಲ್ಲಿ ಖಾನನು ಅಲ್ಲಿಗೆ ಬಂದು ನೋಡುತ್ತಾನೆ:— ಅಲ್ಲಿ ರಾಮೀಮಗೌಡನೊಬ್ಬನೇ ಗಾಢನಿದ್ರಾಪರವಶನಾಗಿ ಮಲಗಿ ಕೊಂಡಿದ್ದು, ಆತನ ಹತ್ತರ ಯಾರೂ ಇರುವದಿಲ್ಲ. ಆಗ ಅವನು ತನ್ನ ದಂಡಾಳುಗಳನ್ನು ಕರೆದು ರಾಮೀಮನ ಹತ್ತರ ಝುಲಫೀಕರ

ನನ್ನು ಕೂಡ್ರಹೇಳಿಸಿ, ತಾನು ತನ್ನ ಸಂಗಡಿಗರೊಡನೆ ಊರೊಳಗೆ ಹೋದನು. ಝುಲಫೀಕರನು ಅಲ್ಲಿಗೆ ಬಂದು ಕುಳಿತ ಕೆಲ ನಿಮಿಷಗಳ ಮೇಲೆ ಕಾಸೀಮನ ಬಾಯಿಂದ ಮತ್ತೆ 'ಅಮೀನೆ' 'ಅಮೀನೆ' ಎಂಬ ಸ್ಪಷ್ಟ ಶಬ್ದವು ಎರಡು ಮೂರು ಸಾರೆ ಹೊರಬಿದ್ದಿತು. ಅದನ್ನು ಕೇಳಿ ಆ ಅಡಿಗೆಯುವನು ಗಾಬರಿಗೊಂಡು ತನ್ನಷ್ಟಕ್ಕೆ ತಾನೆ: "ಈ ಹೆಸರನ್ನು ಈತನು ಮಲಗಿದಾಗ ಕೂಡ ಬಡಬಡಿಸುವದೇಕೆ? ಈ ಹೆಸರು ನಮ್ಮ ಖಾನಮಸಾಹೇಬಳದೇ ಅಲ್ಲವೆ? ಈ ನಮ್ಮ ಖಾನಮಸಾಹೇಬಳ ಹೆಸರನ್ನು ಬಡಬಡಿಸುವದರಿಂದ ಈತನಿಗೇನು ಲಾಭವು? ಛೇ! ಅಮೀನೆಯೆಂದರೆ, ಈ ನಮ್ಮ ಖಾನಮಸಾಹೇಬಳಾಗಿರಲಿಕ್ಕಿಲ್ಲ. ಈತನ ಬೇರೆ ಪ್ರೀತಿಪಾತ್ರದ ಹೆಸರು ಏಕಾಗಿರಬಾರದು?" ಎಂದಂದುಕೊಂಡು ಸುಮ್ಮನಾದನು. ಆದರೆ ಆ ಚಾಣಾಕ್ಷ ಝುಲಫೀಕರನು ಅಷ್ಟಕ್ಕೆ ಸುಮ್ಮನಾಗದೆ "ನಮ್ಮ ಖಾನಮಳಿಗೆ ಆ ಅಡಮುಟ್ಟ, ವೃದ್ಧ ಹಾಗು ಕುರೂಪಿಯಾದ ಖಾನಸಾಹೇಬನಿಗಿಂತ ಶೂರ, ಧೀರ ಹಾಗು ಮನ್ಮಥಸದೃಶನಾದ ಈ ತರುಣನೇ ಗಂಡನಾಗಿದ್ದರೆ, ಚನ್ನಾಗಿ ಶೋಭಿಸುತ್ತಿತ್ತು; ಆದರೆ ಮಿಂಚಿ ಹೋದ ಮಾತಿಗೆ ಇನ್ನು ಚಿಂತಿಸಿ ಫಲವೇನು?" ಎಂದಂದುಕೊಂಡನು.

ತುಸ ಹೊತ್ತಾದ ಮೇಲೆ ಕಾಸೀಮನು ನಿದ್ದೆಯಿಂದ ತಿಳಿದೆದ್ದು ಕುಳಿತು, ನೀನು ಇಲ್ಲೇಕೆಂದು ಝುಲಫೀಕರನಿಗೆ ಕೇಳಲು, ನಾನು ಖಾನನ ಅಜ್ಞೆಯಂತೆ ನಿಮ್ಮ ಶುಶ್ರೂಷೆಗೆ ಕುಳಿತಿರುವೆನೆಂದು ಅವನು ಹೇಳಿದನು. ಝುಲಫೀಕರನು ಹೀಗೆ ಏಕಾಂತಸ್ಥಳದಲ್ಲಿ ಒಬ್ಬೊಂಟಿಗನಾಗಿ ಗಂಟು ಬಿದ್ದ ಬಳಿಕ, ಈ ಮೊದಲೊಂದು ದಿನ ಆತನು ತನಗೆ ಹೇಳಬಯಸಿದ್ದ ಅಮೀನೆಯ ಇತಿವೃತ್ತವನ್ನು ಕೇಳುವ ಮಾತಿನ ನೆನಪು ಕಾಸೀಮನಿಗೆ ಆಗಹೆ ಹೇಗೆ ಇದ್ದೀತು? ಕೂಡಲೆ ಆತನು ಝುಲಫೀಕರನನ್ನು ಹತ್ತರ ಕರೆದು, ಮೊದಲು ಆ ಮಾತು

ಈ ಮಾತು ತೆಗೆದು, ಕಡೆಗೆ ತನ್ನ ಇಷ್ಟವಾದ ಪ್ರಶ್ನೆಯನ್ನು ಕೇಳಿ ದನು. ಝುಲಫೀಕರನು ಮೊದಲೇ ಹರಟೆಗಾರನು; ಮಂದಿಯ ಎದುರಿಗೆ ಯಾವುದನ್ನು ಹೇಳಬೇಕು, ಯಾವುದನ್ನು ಹೇಳಬಾರದು? ಎಂಬದರ ಹೇಚು-ಪೇಚುಗಳ ಜ್ಞಾನವು ಆತನಲ್ಲಿ ಕಡಿಮೆ. ಅದರಿಂದ ಆತನು ಕಾಸೀಮನನ್ನು ಪ್ರಸನ್ನೀಕರಿಸಿಕೊಳ್ಳುವದಕ್ಕಾಗಿ ಅಮೀ ನೆಯ ಮನೆತನದ ಸಮಸ್ತ ವೃತ್ತಾಂತವನ್ನೂ ಯಥಾಸ್ಥಿತವಾಗಿ, ಆದೇಕೆ ಅಡಿಗೆಯ ಮನೆಯು ತನ್ನ ಸಂಬಾರ ಬಟ್ಟಲದಲ್ಲಿ ಮಿಕ್ಕಿ ಉಳಿ ದಿದ್ದ ಉಪ್ಪು-ಕಾರಗಳನ್ನೆಲ್ಲ ಚೆನ್ನಾಗಿ ಹಚ್ಚಿ, ಹಳ್ಳೀ ರುಚಿಕಟ್ಟಾಗು ವಂತೆ ತಿಳಿಸಿದನು.

ಮರುದಿನ ಖಾನನು ಆ ಊರಲ್ಲಿ ಕೆಲ ಜನ ದಂಡಾಳುಗಳನ್ನು ಹೊಸದಾಗಿ ಭರ್ತಿ ಮಾಡಿಕೊಂಡು, ಪೆಂಡಾರಿಗಳ ಬಂದೋಬಸ್ತಿ ಗಾಗಿ ಅಲ್ಲಿಯೊಂದು ಟೀಪುವಿನ ಚೌಕಿಯನ್ನು ಸ್ಥಾಪನೆ ಮಾಡಿ, ಆ ಬಗ್ಗೆ ಟೀಪುವಿನ ಕಡೆಗೆ ಥೈಲಿಯನ್ನು ಬರೆಸಿದನು. ಕಾಸೀಮನ ಗಾಯ.ವು ಗುಣವಾಗುವದಕ್ಕಾಗಿ ಒಂದರೆಡು ದಿನ ಆತನು ಅಲ್ಲಿಯೇ ತನ್ನ ಬೀಡು ಬಿಟ್ಟನು. ತದನಂತರ ಕಾಸೀಮನ ಹಾಗು ಆ ಊರ ಗೌಡನ ಅನುಮತಿ ಪಡೆದುಕೊಂಡು ಖಾನನು ಅಲ್ಲಿಂದ ತಳ ಕಿತ್ತಿದನು. ಅವನು ಈ ಮೊದಲಿನ ಪೆಂಡಾರಿಗಳ ಚಕಮಕಿಯಲ್ಲಿ ಗಾಯ ಹೊಂದಿ ಕೈವಶರಾಗಿದ್ದ ಪೆಂಡಾರಿಗಳನ್ನು ಕೈದು ಮಾಡಿ ಸಂಗಡ ಸಾಗಿಸಿದ್ದನು; ಹಾಗು ಅವರ ಹಲ-ಕೆಲವು ಕುದುರೆಗಳನ್ನು ತನ್ನ ದಂಡಿನಲ್ಲಿ ಸೇರಿಸಿ ಕೊಂಡಿದ್ದ ಹೊಸ ಶಿಪಾಯಿಗಳಿಗೆ ಕೊಟ್ಟಿದ್ದನು.

ಈ ಪ್ರಕಾರ ಖಾನನು ಹೊಸ ದಂಡಾಳುಗಳೊಡನೆ ಸಜ್ಜಾಗಿ ಮತ್ತೆ ಮಾರ್ಗಕ್ರಮಣಕ್ಕೆ ಆರಂಭಿಸಿದನು ಬಳ್ಳಾರಿಯಿಂದ ಮೈಸೂರ ವರೆಗಿನ ದಾರಿಯು ನೋಡಲಿಕ್ಕೆ ಅಷ್ಟೊಂದು ಗುಡ್ಡ ಗಾಡಿನದಲ್ಲೆಂದು ಕಂಡರೂ, ನಿಜಸ್ಥಿತಿಯು ಇದಕ್ಕೆ ವಿಪರೀತವಾಗಿರುತ್ತದೆ. ಬಳ್ಳಾರಿ

ಯಿಂದ ಪೆನುಗೊಂಡವು ಸರಾಸರಿ ನೂರಿಪ್ಪತ್ತು ಮೈಲು ದೂರದ ಲ್ಲಿದ್ದು, ಅಷ್ಟರಲ್ಲಿಯೇ ಎಷ್ಟೋ ಗುಡ್ಡ-ದಿನ್ನೆಗಳೂ ಏರಿಳಿತಗಳೂ ಹತ್ತುತ್ತವೆ. ಪ್ರವಾಸಿಗನು ಕ್ಷಣಕಾಲ ಎತ್ತರ ಪ್ರದೇಶದೊಳಗಿನ ಸ್ವಚ್ಛವಾದ ಹವೆಯನ್ನು ಉಪಭೋಗಿಸಿದರೆ, ತುಸ ಹೊತ್ತಿನಲ್ಲಿಯೇ ಗಿರಿ-ಕಂದರದೊಳಗಿನ ರೋಗಿಷ್ಟಹವೆಯನ್ನು ಸೇವಿಸಬೇಕಾಗುವದು ಕರ್ಣಾಟಕವನ್ನು ದಾಟಿ, ಮೈಸೂರ ನಾಡಿನ ಹದ್ದು ಸಮೀಪಿಸಿದ ಹಾಗೆಲ್ಲ ಹವೆಯೊಳಗಿನ ಉಷ್ಣತೆಯು ಕಡಿಮೆಯಾಗಿ, ಶಾಂತವಾದ ವಾತಾವರಣವು ಪ್ರಾಪ್ತವಾದಂತಾಗುವದು.

ನಮ್ಮ ಪ್ರವಾಸಿಗಳು ಪೆಂಡಾರಿಗಳ ಕೂಡ ಹೋರಾಡಿದ ಸ್ಥಳದಿಂದ ಹೊರಟ ತುಸ ದಿನಗಳಲ್ಲಿಯೇ ಅವರು ಮೈಸೂರಸೀಮೆಯ ಸುಶಾಂತ ವಾತಾವರಣವನ್ನು ಪ್ರವೇಶಿಸಿದರು. ಬರಬರುತ್ತ ಅವರಿಗೆ ಶೀತಪ್ರದೇಶವು ಹತ್ತಿತು. ಅಲ್ಲಿಯ ಆ ತಂಪು ಹವೆಯಿಂದ ಅವರೆ ಲ್ಲರ ಮುಖಭಾವಗಳಲ್ಲಿ ಪ್ರಸನ್ನತೆಯು ಕಳೆಯೇರಿತು. ಅದರಿಂದ ಅವರು ಪ್ರತಿನಿತ್ಯ ಹೆಚ್ಚು ದಾರಿಯನ್ನು ಕ್ರಮಿಸಲಿಕ್ಕೆ ಅರ್ಹರಾದರು. ಅವರಿಗೆ ಮತ್ತೆ ಒಂದೆರಡು ಕಡೆ ಮುಂಗಾಟರ ಹಾಗು ಪೆಂಡಾರಿಗಳ ಗುಂಪುಗಳು ಗಂಟುಬಿದ್ದವು; ಆದರೆ ಖಾನನ ಲವಾಜಮಿನ ಮುಂದೆ ಅವರು ನಿಲ್ಲಲಾರದೆ, ದಾರಿ ಸಿಕ್ಕತ್ತ ಓಡಿ ಹೋದರು.

ವಿಶೇಷ ತ್ರಾಸ ವಹಿಸದೆ, ಸಾಗಿದಷ್ಟು ದಾರಿಯನ್ನು ಸಾಗ ಬೇಕೆಂದೇ ಅಬ್ದುಲ್‌ರಹಿಮಾನಖಾನನ ಮೊದಲಿನ ಬೇತಾಗಿತ್ತು; ಆದರೆ ಪೆನುಗೊಂಡದ ಹತ್ತರ ಬಂದ ಬಳಿಕ "ಟೀಪುಸುಲ್ತಾನನು ತೀವ್ರವೇ ಫಿರಂಗಿಗಳೊಡನೆ ಯುದ್ಧಮಾಡತಕ್ಕವನಿರುತ್ತಾನೆಂದೂ ಅದಕ್ಕಾಗಿ ತಾನು ಸ್ವತಃ ದಂಡಿನ ವ್ಯವಸ್ಥೆ ನೋಡುತ್ತಿರುತ್ತಾ ನೆಂದೂ" ಸುದ್ದಿ ಹತ್ತಲು, ಖಾನನು ತನ್ನ ಮೊದಲಿನ ಬೇತನ್ನು ರಹಿತ ಪಡಿಸಿ, ಶಕ್ಯವಾದಷ್ಟು ತೀವ್ರ ಸಾಗಬೇಕೆಂದು ನಿಶ್ಚೈಸಿದನು.

ಯಾಕಂದರೆ, ಟೀಪುಸುಲ್ತಾನನು ಸ್ವತಃ ದಂಡಿನ ವ್ಯವಸ್ಥೆಯನ್ನು ನೋಡಹತ್ತಿದನೆಂದ ಬಳಿಕ ಇನ್ನು ಯುದ್ಧಕ್ಕೆ ವಿಲಂಬವಿಲ್ಲೆಂದು ಆತನ ಭಾವನೆಯಾಯಿತು. ಅವರೆಲ್ಲರೂ ಬಹು ಶೀಘ್ರವಾಗಿ ದಾರಿ ನಡೆದು ದೊಡ್ಡಬಳ್ಳಾಪುರಕ್ಕೆ ಬಂದರು. ಝುನಾನಖಾನೆಯುವರನ್ನು ವಿಶ್ರಾಂತಿಗಾಗಿ ಅಲ್ಲಿಯೇ ಬಿಟ್ಟುಕೊಟ್ಟು, ಖಾನನು ಕಾಸೀಮನೊಡನೆ ನಂದಿದುರ್ಗಕ್ಕೆ ನಡೆದನು.

ದೊಡ್ಡಬಳ್ಳಾಪುರವು ಬೆಂಗಳೂರಿಂದ ೨೨ ಮೈಲು ದೂರದಲ್ಲಿದೆ; ಅಲ್ಲಿಂದ ನಂದಿದುರ್ಗವು ೧೪ ಮೈಲು. ಈಗ ನಂದಿದುರ್ಗವು ಶಾನಿಟೋರಿಯುಮ್‌ದ ಸ್ಥಳವೆಂದು ಪ್ರಸಿದ್ಧವಾಗಿದೆ. ಅದು ಸಮುದ್ರ ಪಾತಳಿಯಿಂದ ೪೮೫೧ ಫೂಟು ಎತ್ತರಿರುವದರಿಂದ, ಆ ನಾಡಿನೊಳಗಿನ ತೀರ ಬೇಸಿಗೆಯ ಕಾಲ(ಎಪ್ರಿಲ್-ಮೇ ತಿಂಗಳ)ದಲ್ಲಿ ಕೂಡ ಅಲ್ಲಿಯ ಉಷ್ಣತೆಯ ಮಾನವು ೭೫ ಅಂಶಕ್ಕೆ ಮೀರುವದಿಲ್ಲ. ಅಲ್ಲಿಯ ಹವೆಯು ಕುನ್ನೂರು, ನೀಲಗಿರಿಗಳ ಹವೆಯಂತೆಯೇ ಆಗಿರುವದರಿಂದ, ಬೇಸಿಗೆಯ ಕಾಲದಲ್ಲಿ ಮೈಸೂರ ದೇಶದ ದೊಡ್ಡ ದೊಡ್ಡ ಅಧಿಕಾರಿಗಳೂ, ಶ್ರೀಮಂತ ಜನರೂ ಅಲ್ಲಿಗೆ ಹೋಗಿ ವಾಸಿಸುತ್ತಾರೆ. ಅಲ್ಲಿ ಪ್ರವಾಸಿಕರಿಗೆ ಅವಶ್ಯವಾಗಿರುವ ಎಲ್ಲ ಆಧುನಿಕ ಸಾಧನಗಳೂ ಮಾರ್ಪಟ್ಟಿವೆ.

ಆಧುನಿಕ ಕಾಲದಲ್ಲಿ ಈ ಬಗೆಯಿಂದ ಪ್ರಸಿದ್ಧ ಪಡೆದಿರುವ ನಂದಿದುರ್ಗವು ಟೀಪುಸುಲ್ತಾನನ ಕಾಲದಲ್ಲಿ ಬೇರೊಂದು ವಿಧವಾಗಿ ಖ್ಯಾತಿ ಪಡೆದಿತ್ತು. ಈಗ ನಂದಿದುರ್ಗಕ್ಕೆ ಹೋಗುವದೆಂದರೆ, ಸ್ವರ್ಗಸುಖವನ್ನು ಅನುಭವಿಸಲಿಕ್ಕೆ ಹೋದಂತಾಗುವದು; ಆದರೆ ಟೀಪುಸುಲ್ತಾನ ಕಾಲಕ್ಕೆ ನಂದಿದುರ್ಗದ ಪ್ರಯಾಣವೆಂದರೆ, ರೌರವನರಕಾಲಯದ ಪ್ರಯಾಣವೇ ಎಂಬದು ಸರ್ವಶ್ರುತವಾಗಿಬಿಟ್ಟಿತ್ತು.

ನಂದಿದುರ್ಗದ ಹತ್ತಿರ ಹೋದ ಕೂಡಲೆ ಕಾಸೀಮನು ಅತ್ತ ಕಡೆಯ ದುರ್ಗಂಧವನ್ನೂ, ರಣಹದ್ದಿನ ಸುಳಿದಾಟವನ್ನೂ ನೋಡಿ ಖಾನನನ್ನು ಕುರಿತು:-"ಖಾನಸಾಹೇಬ, ಅದೇನು? ಅತ್ತ ಅಕ್ರಾಳ-ವಿಕ್ರಾಳವಾಗಿ ಕಾಣುವದೇನದು?"ಎಂದು ಕೇಳಲು, ಖಾನನು ಮುಗುಳುನಗೆ ನಕ್ಕು:--ತಮ್ಮಾ, ವೀರಕಾಸೀಮಾ, ಹೈದರ ಅಲ್ಲಿ ಹಾಗು ಟೀಪುಸುಲ್ತಾನರಿಗೆ ಅತಿ ಪ್ರಿಯಕರವಾದ ಪ್ರದೇಶವದು.

ಕಾಸೀಮ: —ಹಾಗಾದರೆ, ಅಲ್ಲಿ ಅವರದೊಂದು ವಿಶ್ರಾಂತಿಯ ಮಹಾಲು ಇಲ್ಲವೆ ಮಂದಿರವಿರಬಹುದಲ್ಲವೆ?

ಖಾನ:—ಅದಕ್ಕೆ ಮಂದಿರವೆಂದರೂ ಸಲ್ಲಬಹುದು; ಆದರೆ ಅವರು ಅಲ್ಲಿ ಸ್ವತಃ ಇರುವದಿಲ್ಲ. ಪರದೇಶದವರು ಬಂದರೆ, ಅವರನ್ನು ಅಲ್ಲಿರಿಸುತ್ತಿರುವರು. ತಮ್ಮಾ, ವಿದೇಶಿ ಜನರಿಗೆ ಸುಖವುಂಟಾಗಲಿಕ್ಕೆಂದು ಮಾತ್ರ ಅಲ್ಲಿಗೆ ಕಳಿಸುವದಿಲ್ಲ. ಯಾರಿಗೂ ಪುನಃ ಅವರ ದರ್ಶನ ಕೂಡ ಆಗಬಾರದೆಂದೇ ಅವರನ್ನು ಅಲ್ಲಿಗೆ ಅಟ್ಟುತ್ತಿರುವರು.

ಕಾಸೀಮ:—ಅಂದರೆ ಅದೊಂದು ದೊಡ್ಡ ಸೆರೆಮನೆಯಾಗಿದೆಯೋ?

ಖಾನ:— ಸೆರೆಮನೆಯಾಗಿದ್ದರೆ ಎಷ್ಟೋ ಸುಖವಾಗಿತ್ತು. ಯಾಕಂದರೆ, ದೀರ್ಘಕಾಲಾವಧಿಯ ನಂತರವಾದರೂ ಸೆರೆಮನೆಯಿಂದ ಬಿಡುಗಡೆಯಾಗುವ ಆಶೆಯಿರುತ್ತದೆ; ಆದರೆ ಈ ನಂದಿದುರ್ಗವನ್ನು ಸೇರಿದವರು ಬಿಡುಗಡೆ ಹೊಂದುವ ಆಶೆಯೇ ಇರುವದಿಲ್ಲ

ಅದನ್ನು ಕೇಳಿ ಕಾಸೀಮನು ಹೆಳ್ಳೆ ಗೊಂದಲದಲ್ಲಿ ಮುಳುಗಿದನು. ಆಗ ಅವನು:—ಹಾಗಾದರೆ ಇಲ್ಲಿಗೆ ತಂದವರನ್ನು ಕತ್ತಿ-ಕಠಾರಿಗಳಿಂದ ತುಂಡರಿಸಿ ಚೆಲ್ಲುತ್ತಿರಬಹುದಲ್ಲವೆ?

ಖಾನ:—ಛೀ-ಛೀ! ಈ ಸ್ಥಳವು ಆ ಕಾಫರರಾದ ಫಿರಂಗಿಗಳ ಸಲುವಾಗಿಯೇ ಇರುತ್ತದೆ ಈ ವರೆಗೆ ಇಲ್ಲಿ ಎಷ್ಟೋ ಫಿರಂಗಿಗಳ

ಅಂತವಾಗಿರಬಹುದು ಇಲ್ಲಿಯ ಕಾಗೆ-ಹದ್ದುಗಳಿಗೆ ಮಾತ್ರ ಇಚ್ಛಾ ಭೋಜನವಾಗುತ್ತಿರುತ್ತದೆ ಇಲ್ಲಿ ಫಿರಂಗಿಗಳನ್ನು ಬಹುಶಃ ಕೊಲ್ಲುವದಿಲ್ಲ. ಆ ಎದುರಿಗೆ ಕಾಣುವ ಕೋಡಿನಂತಹ ಬಹು ಎತ್ತರವಾದ ಗಿರಿಶಿಖರದ ನಿಡಿದಾದ ಪ್ರದೇಶದಿಂದ ಅವರನ್ನು ಕೆಳಕ್ಕೆ ನೂಕಿಸಿ ಬಿಡುವರು. ಅದರ ಕೆಳಗೆ ಸಾವಿರಾರು ಆಳು ತಗ್ಗಾದ ದರಿಯಿರುವದು ನೂಕಿಸಲ್ಪಟ್ಟ ಪ್ರಾಣಿಯ ದೇಹವು ಬಂಡೆಗಳಿಗೆ ಬಡಿ-ಬಡಿದು ಕೆಳಕ್ಕೆ ಹೋಗಿ ನೆಲವನ್ನು ಆಶ್ರಯಿಸುವಷ್ಟರಲ್ಲಿ ಅದರ ಎಲವುಗಳೆಲ್ಲ ಪುಡಿ-ಪುಡಿಯಾಗಿ ರಕ್ತಬಂಬಾಳವಾದ ಭೀಕರ ರೂಪವನ್ನು ಧರಿಸುವದು ಅಲ್ಲಿಂದ ನೂಕಿಸಲ್ಪಟ್ಟವರೆಲ್ಲರ ಪ್ರಾಣಗಳೂ ದೇಹವು ನೆಲಕ್ಕೆ ಮುಟ್ಟುವಷ್ಟರಲ್ಲಿಯೇ ಹಾರಿ ಹೋಗುವವು ಅಂಥ ಭಯಂಕರ ಪಾಪಿಯೇ ಅಗಿದ್ದರೆ, ಅವನು ಜೀವಚ್ಛವದಂತೆ ಬಿದ್ದುಕೊಳ್ಳುವನು; ಆದರೆ ಮನುಷ್ಯನ ರಕ್ತ-ಮಾಂಸಗಳನ್ನು ತಿಂದು ತಿಂದು ಮತ್ತವಾಗಿದ್ದ ಅಲ್ಲಿಯ ನರಿ-ನಾಯಿಗಳೂ, ರಣಹದ್ದುಗಳೂ ಆತನ ಕಣ್ಣು-ಮೂಗು, ಕೈ-ಕಾಲು ಮೊದಲಾದವುಗಳನ್ನು ಹರಿದು ಮುರಿದು ತಿಂದು, ಆತನನ್ನು ಮತ್ತಿಷ್ಟು ಹೈರಾಣಾಗ ಮಾಡುವವು.

ಅದನ್ನು ಕೇಳಿ, ಕಾಸೀಮುನ ಮೈ ನಡುಗಿತು ಹೀಗೆ ಮನುಷ್ಯನನ್ನು ಕೊಲ್ಲುವದು ತೀರ ಅಮಾನುಷವೆಂದು ಅವನ ದೃಢಭಾವನೆಯಾಯಿತು ಆಗ ಆತನು ಖಾನನಿಗೆ:– ವೈರಿಯನ್ನೇ ಏಕಾಗಲೊಲ್ಲದು, ಈ ಬಗೆಯಿಂದ ಸಂಹರಿಸುವದು ತೀರ ಅಮಾನುಷವೆಂದು ನಿಮಗನಿಸುವದಿಲ್ಲವೆ? ನೀವು ಸ್ವತಃ ಎಂದಾದರೂ ಆ ಸ್ಥಳವನ್ನು ನೋಡಿರುವಿರಾ?

ಖಾನ:-ಛೇ! ಯಾವಜ್ಜನ್ಮದಲ್ಲಿ ನಾನು ಆ ಸ್ಥಳಕ್ಕೆ ಹೋಗಿಲ್ಲ; ಮತ್ತು ಹೋಗಲಿಚ್ಛಿಸುವದೂ ಇಲ್ಲ. ಕ್ರೂರ ಜನರನ್ನು ಆ ಪರಿಯಾಗಿ ಕೊಲ್ಲುವದನ್ನು ಕಣ್ಮುಟ್ಟಿ ನೋಡಲಿಕ್ಕೆ ತಾನೆ ಅಲ್ಲಿಗೆ ಹೋಗಬೇ

ಕಾದದ್ದು? ಫಿರಂಗಿಗಳು ಸ್ವಭಾವದಿಂದ ಮತ್ತೆ ಹೇಗಿದ್ದರೂ ಅವರು ಖಂಡಿತವಾಗಿಯೂ ಶೂರರಿರುತ್ತಾರೆ. ಅವರ ಶೂರತನವನ್ನು ನಾನು ಪೆರಂಬೂರಿನ ಯುದ್ಧದಲ್ಲಿ ನೋಡಿ ಬೆರಗಾಗಿ ಹೋದೆನು. ಆಗ ವಿಧಿವಶಾತ್ ಅವರಿಗೆ ಜಯ ಪ್ರಾಪ್ತಿಯಾಗದಿದ್ದರೂ, ನಮ್ಮ ವಿಪುಲ ಸೈನ್ಯದ ಮುಂದೆ ಅಲ್ಪ ಸಂಖ್ಯಾಕರಾದ ಅವರು ಕಾದಿದ್ದು, ಪರಮ ಸೋಜಿಗದ ಮಾತೇ ಸರಿ. ಅಂದು ನಾನು ಟೀಪುಸುಲ್ತಾನರ ಹತ್ತರವೇ ಇದ್ದೆನು ಅವರ ಯುದ್ಧದ ಪದ್ಧತಿಯನ್ನು ಕಂಡು ಟೀಪು ಸುಲ್ತಾನರು ಕೂಡ ಬೆರಳು ಕಚ್ಚಿದರು. ನಮ್ಮ ಟೀಪು ಸಾಹೇಬರು ಮಹಾ ವೀರರು, ಶೂರರು; ಅಂತೇ ಅವರಿಗೆ ಮೈಸೂರ ಹುಲಿಯೆನ್ನುವರು ಅಂಥವರ ಮೇಲೆ ಹಬ್ಬ ಇಂಗ್ರಜನು ಏರಿ ಬಂದು ಅವರನ್ನು ಇನ್ನು ತುಂಡರಿಸತಕ್ಕವನು; ಆದರೆ ಆಯುತ ಸಮಯಕ್ಕೆ ನಾನು ಆತನ ಬಲಗೈಗೆ ಕತ್ತಿಯಿಂದ ಇರಿಯದಿದ್ದರೆ, ಇಷ್ಟೊತ್ತಿಗೆ ದಕ್ಷಿಣದೊಳಗಿನ ನಮ್ಮ ಮುಸಲ್ಮಾನೀ ರಾಜ್ಯವನ್ನು ಆ ಫಿರಂಗಿಗಳು ಹೇಳಹೆಸರಿಲ್ಲದಂತೆ ಮಾಡಿ ಬಿಡುತ್ತಿದ್ದರು ಅಂದಿನಿಂದಲೇ ನನ್ನನ್ನು ಟೀಪುಸಾಹೇಬರು ಈ ಉಚ್ಚಪದವಿಗೇರಿಸಿರುವರು

ಕಾಸೀಮ:—ಹಾಗಾದರೆ ಟೀಪುಸುಲ್ತಾನಸಾಹೇಬರು ಬೇರೆ ಅರಸರಂತೆ ಕೈಕೆಳಗಿನವರನ್ನು ಮರೆಯತಕ್ಕವರಲ್ಲೆಂದು ತೋರುತ್ತದೆ?

ಖಾನ:—ಛೇ-ಛೇ! ಹಾಗೆಂದಿಗೂ ಮಾಡರು. ಯಾವನು ಚಲೋ ಕೆಲಸ ಮಾಡುತ್ತಿರುವನೋ, ಅವನ ಮೇಲೆ ಅವರೆಂದಿಗೂ ಸಿಟ್ಟಿಗೇಳುವದಿಲ್ಲ ಅವನ ಕಲ್ಯಾಣವನ್ನು ಅವರು ಸರ್ವತೋಮುಖಿಯಾಗಿ ಮಾಡುವರು; ಆದರೆ ಯಾವನೊಬ್ಬನು ತಮಗೆ ವೈರಿಯೆಂದು ಅವರ ಭಾವನೆಯಾಯಿತೆಂದರೆ, ಯಾವಾಗ ಆತನ ಗಂಟಲವನ್ನು ಕಡಿದೇನೋ ಎಂದು ಅವರು ಹಾತೊರೆಯುವರು. ಎಲ್ಲರಿಗಿಂತಲೂ ಅವರು ಫಿರಂಗಿಗಳನ್ನು, ಅದರಲ್ಲಿಯೂ ಆ ಕಾಫರ ಇಂಗ್ಲಿಷರನ್ನು

ಹೆಚ್ಚಾಗಿ ದ್ವೇಷಿಸುತ್ತಾರೆ. ಅವರ ದುಷ್ಟ ಕಾಂಸ್ಥಾನ, ಲುಡುಬುಡು ತನ, ಮೋಸಗಾರಿಕೆ ಇವುಗಳನ್ನೆಲ್ಲ ಟೀಪು ಸಾಹೇಬರು ಚನ್ನಾಗಿ ಮನಗಂಡಿರುತ್ತಾರೆ. ಆ ಇಂಗ್ಲಿಷರು ಬಂಗಾಲದೊಳಗೆ ಅಂತಃಕಲಹಗಳನ್ನು ಹಬ್ಬಿ ತಮ್ಮ ಲಾಭವನ್ನು ಹೇಗೆ ಮಾಡಿಕೊಂಡಿರುವರೆಂಬದನ್ನು ಅವರು ಚೆನ್ನಾಗಿ ತಿಳಕೊಂಡಿರುತ್ತಾರೆ; ಆದರೂ ಶೌರ್ಯ, ಬುದ್ಧಿಚಾತುರ್ಯ, ಯುಕ್ತಿ-ಪ್ರಯುಕ್ತಿ ಇವುಗಳಲ್ಲಿ ಇಂಗ್ಲಿಷರು ನಮಗಿಂತ ಶ್ರೇಷ್ಠರಿರುವರೆಂದು ಟೀಪು ಸಾಹೇಬರು ಪ್ರಸಂಗದಲ್ಲಿ ಆಡಿ ತೋರಿಸುತ್ತಾರೆ. ನಮ್ಮ ಟೀಪು ಸಾಹೇಬರ ದಂಡಿನಲ್ಲಿ ಫ್ರೆಂಚ ದಂಡಾಳುಗಳಿಗೆ ಕೊರತೆಯಿಲ್ಲ; ಆದರೆ ಫ್ರೆಂಚರಿಗಿಂತ ಇಂಗ್ಲಿಷ ದಂಡಾಳುಗಳೇ ಹೆಚ್ಚು ಧೂರ್ತರೂ, ಉಪ್ಪುಂಡವರ ಕಲ್ಯಾಣಕ್ಕಾಗಿ ಮನವಮುಟ್ಟಿ ಹೆಣಗುವವರೂ ಇರುವರೆಂಬದನ್ನು ಅವರು ಚೆನ್ನಾಗಿ ಬಲ್ಲರು. ಈ ಎಲ್ಲ ಕಾರಣಗಳಿಗಿಂತಲೂ ಟೀಪು ಸುಲ್ತಾನರು ಇಂಗ್ಲಿಷರನ್ನು ಹೆಚ್ಚಾಗಿ ದ್ವೇಷಿಸಲಿಕ್ಕೆ ಮತ್ತೊಂದು ವಿಶೇಷವಾದ ಕಾರಣವಿರುತ್ತದೆ. ನೀನು ಆ ಜಗತ್ಪ್ರಸಿದ್ಧ ಭವಿಷ್ಯವಾಣಿಯನ್ನು ಕೇಳಿರುವಿಯುಷ್ಟೇ? ಅದಕ್ಕಾಗಿಯೇ ಅವರು ಇಂಗ್ಲಿಷರನ್ನು ದ್ವೇಷಿಸುವರು.

ಕಾಸೀಮ:—ಅದಾವದು, ಅಂಥ ಪ್ರಸಿದ್ಧ ಭವಿಷ್ಯವಾಣಿಯು? ನಾನಂತು ಅದನ್ನು ಇದು ವರೆಗೂ ಕೇಳಿರುವದಿಲ್ಲವಲ್ಲ!

ಖಾನ:— ಒಂದು ದಿನ ಟೀಪುಸುಲ್ತಾನರು ದರ್ಯಾದೌಲತ ಬಾಗದೊಳಗಿನ ತಮ್ಮ ವ ಹಾಲಿನಲ್ಲಿ ಏಕಾಕಿಗಳಾಗಿ ಏನನ್ನೋ ಮನನ ಮಾಡುತ್ತ ಕುಳಿತಿದ್ದರು. ಇಷ್ಟರಲ್ಲಿ ಒಬ್ಬ ಫಕೀರನು ಅಕಸ್ಮಾತವಾಗಿ ಅಲ್ಲಿಗೆ ಬಂದನು. ಇಷ್ಟು ಪಹರೆಗಳೊಳಗಿಂದ ಪಾರಾಗಿ ಇವನು ಇಲ್ಲಿಗೇಕೆ ಬಂದನೆಂದು ಟೀಪುಸಾಹೇಬರು ಆತನನ್ನು ಕೆಂಪುಗಣ್ಣಿನಿಂದ ನೋಡುತ್ತ, ಇನ್ನು ಅವರು ಆತನನ್ನು ಹೊರಗೆ ಹಾಕಿಸತಕ್ಕವರು; ಇಷ್ಟರಲ್ಲಿ ಆ ಫಕೀರನು:—'ಟೀಪುಸುಲ್ತಾನ, ಆ ಕಾಫರ

ಇಂಗ್ಲಿಷರ ಬಗ್ಗೆ ನೀನು ಬಹು ಎಚ್ಚರಿಕೆಯಿಂದಿರು; ಆದರೆ ಅವರಿಂದಲೇ ಹಿಂದಾನೊಂದು ದಿನ ನಿನ್ನ ಘಾತವಾಗುವ ಸಂಭವವಿರುತ್ತದೆ' ಎಂದು ನುಡಿದನು ಇದೇ ಆ ಪ್ರಸಿದ್ಧ ಭವಿಷ್ಯವಾಣಿಯು. ಆ ಫಕೀರನು ಸುಲ್ತಾನನಿಗೆ ಮತ್ತೆ ಹೇಳಿದ್ದೇನೆಂದರೆ:—"ಮೂರಖಾ, ನೀನು ಮೂರ್ತಿಪೂಜೆಯನ್ನು ಮಾಡುತ್ತಿರುವೆ; ಮುಸಲ್ಮಾನೀ ಧರ್ಮಾಜ್ಞೆಗಳನ್ನು ಚೆನ್ನಾಗಿ ಪಾಲಿಸುವದಿಲ್ಲ; ನೀನು ಆ ಕಾಫರ ಹಿಂದುಗಳ ದೇವರನ್ನು ಭಜಿಸುತ್ತಿರುವೆ. ನಿನ್ನ ಈ ಹೇಯಕೃತಿಗೆಳಿಂದ ಅಲ್ಲಾನು ಸಂತುಷ್ಟನಾಗಲಾರನು; ಹಾಗು ನಿನ್ನ ಕಲ್ಯಾಣವನ್ನೆಂದಿಗೂ ಮಾಡನು! ಎಂಬದನ್ನು ಚೆನ್ನಾಗಿ ಲಕ್ಷ್ಯದಲ್ಲಿಟ್ಟುಕೋ" ಹೀಗೆ ಅದ್ವಾ-ತದ್ವಾ ನುಡಿದು, ಅವನು ಟೀಪುವಿನನ್ನು ರೇಗಿಗೆಬ್ಬಿಸಿದನು. ಶಿಪಾಯಿಯನ್ನು ಕರೆದು ಆ ಫಕೀರನನ್ನು ಹೊರಗೆ ಹಾಕಿಸುವಷ್ಟು ಅವಸಾನವು ಕೂಡ ಸಿಟ್ಟಿನ ಭರದಲ್ಲಿ ಉಳಿಯದ್ದರಿಂದ, ಸುಲ್ತಾನನು ಇನ್ನು ತಾನೇ ಆ ಫಕೀರನ ಕತ್ತು ಹಿಡಿದು ದಬ್ಬತಕ್ಕವನು; ಅಷ್ಟರಲ್ಲಿ ಆ ಫಕೀರನು ನೋಡನೋಡುತ್ತಿರಲಿಕ್ಕೆ-ನಿಂತಲ್ಲೇ ಮಾಯವಾಗಿ ಬಿಟ್ಟನು. ಆ ಅದ್ವಿತೀಯ ಫಕೀರ ಮೂರ್ತಿಯನ್ನು ಹುಡುಕಿಸುವ ಸಲುವಾಗಿ ಈಗಲೂ ಸುಲ್ತಾನನು ಪ್ರಯತ್ನಿಸುವನು; ಆದರೆ ಆ ಮೂರ್ತಿಯು ಪುನಃ ಯಾರ ದೃಷ್ಟಿಗೂ ಬಿದ್ದಿರುವದಿಲ್ಲ. ಅಲ್ಲಾನೇ ತನ್ನನ್ನು ಎಚ್ಚರಗೊಳಿಸುವದಕ್ಕಾಗಿ ಆ ಫಕೀರನ ವೇಷ ಧರಿಸಿ ಬಂದಿದ್ದನೆಂದು ಅಂದಿನಿಂದ ಟೀಪು ಸಾಹೇಬರ ದೃಢಭಾವನೆಯಾಗಿದೆ; ಹಾಗು ಅದಕ್ಕಾಗಿಯೇ ಅವರು ಆಗಿನಿಂದ ಇಂಗ್ರೇಜರನ್ನು ಮನವಮುಟ್ಟಿ ದ್ವೇಷಿಸಹತ್ತಿರುತ್ತಾರೆ.

ಕಾಸೀಮ:—"ಇಂಥ ಸಂಸ್ಕರಣೀಯ ಸಾಕ್ಷಾತ್ಕಾರವಾದ ಬಳಿಕ, ಅವರಿಗೆ ಹಾಗೆನಿಸದೇನು ಮಾಡೀತು? ಖಾನಸಾಹೇಬ, ನಿಮ್ಮೆದುರಿಗೆ ನಿಜವಾಗಿ ಹೇಳಬೇಕೆಂದರೆ, ಆ ಇಂಗ್ಲಿಷರ ವಿಷಯ

ನಾಗಿ ನನ್ನ ಮತವೂ ಸುಲ್ತಾನಸಾಹೇಬರಂತೆಯೇ ಆಗಿರುತ್ತದೆ. ಯಾವಾಗ ಅವರೊಡನೆ ಕಾದುವ ಪ್ರಸಂಗ ಬರುವದೋ, ಎಂಬ ಹಾದಿಯನ್ನೇ ನಾನು ಕಾಯುತ್ತಿರುವೆನು.

ಖಾನ:—ಆ ಸುಯೋಗವು ತೀವ್ರ-ಅತಿ ತೀವ್ರವೇ ಬರಬಹುದಾಗಿದೆ ಕಾಸೀಮಾ, ಇಷ್ಟು ಉತಾವಳಿಯು ಕೆಲಸದ್ದಲ್ಲ. ಕೂಸ ದಿನಗಳಲ್ಲಿಯೇ ಪ್ರಾಪ್ತವಾಗುವ ಆ ಸಮಯದಲ್ಲಿ ನೀನು ಎಷ್ಟರ ಮಟ್ಟಿಗೆ ಕಾದುವೆಯೆಂಬದನ್ನು ಕಣ್ಣುಕಟ್ಟಿ ನೋಡಬೇಕೆಂದಿರುತ್ತೇನೆ. ನಾವು ಇನ್ನು ಈ ನಂದಿದುರ್ಗದೊಳಗೆ ಹೋದೆವೆಂದರೆ, ಯುದ್ಧದ ಪ್ರಸಂಗವೆಲ್ಲ ಚೆನ್ನಾಗಿ ತಿಳಿದೀತು ನನ್ನ ಜನರು ಸುದ್ದಿ ತರುವ ಕೆಲಸದಲ್ಲಿ ಬಳ್ಳೇ ನಿಪುಣರಾಗಿರುತ್ತಾರೆ.

ಈ ಪ್ರಕಾರ ಅವರೀರ್ವರಲ್ಲಿ ಸಂಭಾಷಣ ನಡೆದಿರಲು, ಅವರ ಕುದುರೆಗಳು ಅವರನ್ನು ನಂದಿದುರ್ಗದೊಳಗೆ ಒಯ್ದೇಬಿಟ್ಟವು ಕೂಡಲೆ ಅವರೀರ್ವರೂ ಕುದುರೆಯಿಂದ ಇಳಿದು, ಅಲ್ಲಿಯ ಸುಪ್ರಸಿದ್ಧವಾದ ಬಸವಣ್ಣ(ನಂದಿ)ನ ಗುಡಿಯ ಎದುರಿಗಿನ ಪಟಾಂಗಣದಲ್ಲಿ ಹೋಗಿ ನಿಂತರು. ಅಲ್ಲಿಯ ನೋಟವು ಕಾಸೀಮನಿಗೆ ಬಳ್ಳೇ ವಿಚಿತ್ರವಾಗಿ ತೋರಿತು ಕಾಸೀಮನ ಬದಲು ಆಗ ಅಲ್ಲಿಗೆ ಯಾವನೊಬ್ಬ ಧರ್ಮನಿಷ್ಠ ಹಿಂದುವು ಹೋಗಿದ್ದರೆ, ಅಲ್ಲಿಯ ಆ ವಿಚಿತ್ರ ನೋಟವನ್ನು ಕಂಡು, ಅವನಿಗೆ ಕಡು ಖೇದವೆನಿಸದಿರುತ್ತಿರಲಿಲ್ಲ ಯಾವ ಸ್ಥಳದಲ್ಲಿ ಪೂರ್ವಕಾಲದಲ್ಲಿ ದೊಡ್ಡ ದೊಡ್ಡ ಯಜ್ಞ-ಯಾಗಗಳು ನಡೆದಿದ್ದವೋ, ಎಲ್ಲಿ ಕುಲಪತಿಗಳಾದ ಋಷಿಗಳು ನೂರಾರು ಶಿಷ್ಯರಿಗೆ ಪಾಠಪ್ರವಚನಗಳನ್ನು ಮಾಡುತ್ತಿದ್ದರೋ, ಅದೇ ಸ್ಥಳದಲ್ಲಿ ಈಗ ಟೀಪುವಿನ ದಂಡಿನ ಕುದುರೆಯ ಪಾಗೆಗಳೂ, ಹಯವಾನರ ಬಿಡಾರಗಳೂ ಕಂಗೊಳಿಸುತ್ತಿದ್ದವು. ಯಾವ ಸ್ಥಳದಲ್ಲಿ ಪೂರ್ವದ ರಾಜರು ಮಾಡಿದ ದಾನ-ಧರ್ಮಗಳ ಕಾಲುವೆಗಳು ಹರಿಯುತ್ತಿದ್ದವೋ, ಅಲ್ಲಿಯೇ ಟೀಪುವಿನ

ದಂಡಿನ ಕುದುರೆ-ಕತ್ತೆಗಳ ಉಚ್ಚೆಯು ಹರಿಗಳು ಹರಿಯುತ್ತಿದ್ದವು. ಅಲ್ಲಿದ್ದ ಪೂರ್ವಕಾಲದ ಯಜ್ಞ-ಯಾಗಗಳ ಕುಂಡಗಳು ಟೀಪುನ ದಂಡಾಳುಗಳ ಕುರಿ-ಕೋಳಿಗಳನ್ನು ಬೆಯ್ಯಿಸುವ ಒಲೆಗಳೂ, ಗಾಂಜಿ-ಗುಡುಗುಡಿಗಳನ್ನು ಹೊತ್ತಿಸುವ ಅಗ್ಗಿಷ್ಟಿಗೆಗಳೂ ಆಗಿದ್ದವು!! ಸಮೀಪದಲ್ಲಿಯೇ ಒಂಟೆಗಳೂ, ಆನೆಗಳೂ ಸಾಲು ಸಾಲಾಗಿ ಕಟ್ಟಲ್ಪಟ್ಟಿದ್ದವು. ಹತ್ತಿರದಲ್ಲಿಯೇ ಕೈದೋಟವನ್ನು ಕಲ್ಪಿಸಿದ್ದು, ಅದರೊಳಗೆ ಬೆಳೆಯುವ ಕಾಯಿ-ಪಲ್ಲೆಗಳನ್ನು ತಂದು, ತೋಟಗರು ದಂಡಾಳುಗಳಿಗೆ ಮಾರುತ್ತಿದ್ದರು. ಹಳ್ಳಿಯಹೆಂಗಸರು ತಂದ ಹಾಲು-ಮೊಸರಿನ ಗಡಿಗೆಗಳನ್ನು, ಉದ್ದಾಮ ದಂಡಾಳುಗಳು ಮರೆಗೆ ನಿಂತು ಹರಳಿನಿಂದ ಹೊಡೆದು, ಒಡೆಯುತ್ತ ಮೋಜು ಮಾಡುತ್ತಿದ್ದರು. ಒಟ್ಟಿಗೆ ನಂದಿದುರ್ಗದಲ್ಲಿಯು ಆ ಟೀಪುವಿನ ಕುದುರೆಯ ಲಾಯವನ್ನು ಕಂಡು ಕಾಶೀಮನಿಗೆ ಪರಮಸಂತೋಷವೆನಿಸಿತು.

—O—

## ಕೋನ್, ಬಮ್ಮನ ಆಯಾ ಹೈ? ಪಕಡೊ ಸಾಲೇಕೂ.

ಖಾನ:—ಯಾಕೆ ಮೀರಕಾಶೀಮ, ನಿನಗೆ ನಮ್ಮ ಈ ದಂಡಿನವರನ್ನು ಕಂಡು ಮೋಜು ಅನಿಸುವದಿಲ್ಲವೇ?

ಕಾಶೀಮ:—ಇವರು ಒಳ್ಳೇ ಆನಂದಿ ಪ್ರಾಣಿಗಳಾಗಿ ತೋರುತ್ತಾರೆ. ಖಾನಸಾಹೇಬ, ಇವರೆಲ್ಲರೂ ತಮ್ಮ ಅಧೀನರಾದವರೇನು?

ಖಾನ:—ಇಲ್ಲ. ಇವರೆಲ್ಲರೂ ನನ್ನ ಅಧೀನರಾದವರಲ್ಲ; ಆದರೆ ಇಲ್ಲಿಯವರಲ್ಲಿ ಬಹ್ವಾಂಶ ಜನರು ನನ್ನ ಅಧಿಕಾರಕ್ಕೆ ಒಳಪಟ್ಟವರೇ ಆಗಿರುತ್ತಾರೆ. ಇವರಲ್ಲಿ ಕೆಲವರು ಬೇರೆ ಕಡೆಯ ದಂಡಿನೊಳಗಿಂದ ಬಂದು ಸೇರಿದವರಾಗಿ ತೋರುತ್ತಾರೆ; ಆದರೆ ತಮ್ಮಾ, ಇಷ್ಟೇ ಜನರು ನನ್ನ ದಂಡಾಳುಗಳಲ್ಲ. ಶ್ರೀರಂಗಪಟ್ಟಣದಲ್ಲಿ ಇಲ್ಲಿರುವ ದಂಡಿನ ಮೂರುಪಟ್ಟು ಹೆಚ್ಚು ದಂಡು ನನ್ನ ಅಧೀನವಾಗಿರುತ್ತದೆ. ತಮ್ಮಾ,

ನಾವಿನ್ನು ಆಕಡೆ, ಆಚೆಗಿರುವ ಆ ಡೇರೆಯಲ್ಲಿ ಹೋಗೋಣ. ಅಲ್ಲಿ ನನ್ನ ಜವಾದಾರರಾದ ಹಬೀಬ ಉಲ್ಲಾ ಖಾನ, ಇಲ್ಲವೆ ಶೇಕ ಜಾಫರ ಸಾಹೇಬರು ಭೆಟ್ಟಿಯಾದಾರು. ಅಲ್ಲಿ ನಮಗೆ ಎಲ್ಲ ಸಂಗತಿಯೂ ತಿಳಿಯಬಹುದು. ಈ ವರೆಗೂ ನನ್ನ ದಂಡಾಳುಗಳಲ್ಲಿಯು ಒಬ್ಬನೂ ನನ್ನನ್ನು ಗುರುತಿಸದಿರುವದು ಆಶ್ಚರ್ಯಕರವಾಗಿದೆ. ಮಾಗಾರ್ಯಯಾಸದಿಂದಲೂ, ಸಾದಾ ವೇಷದಿಂದಲೂ ಎಷ್ಟೋ ಭಿನ್ನವಾಗಿ ತೋರುವ ನನ್ನನ್ನು ಅವರು ಇನ್ನೂ ಗುರುತಿಸಲಿಕ್ಕಿಲ್ಲವಷ್ಟೇ?

ಕಾಶೀಮ:- ಖಾನಸಾಹೇಬ, ನೀವು ನಿಮ್ಮ ಮೋರೆಯನ್ನು ಶಿರಸ್ತ್ರಾಣದಿಂದ ಬಹು ಮಟ್ಟಿಗೆ ಮುಚ್ಚಿ ಬಿಟ್ಟಿರುವಿರಿ. ಮೇಲಾಗಿ ನೀವು ಇಲ್ಲಿಗೆ ಸುದ್ದಿ ಕಳಿಸದೆ, ಅಕಸ್ಮಿಕವಾಗಿ ಬಂದಿರುವಿರಿ. ಅಂದ ಮೇಲೆ ಈ ಜನರು ನಿಮ್ಮನ್ನು ಗುರುತಿಸದಿದ್ದ ಬಗ್ಗೆ ಅವರ ತಪ್ಪೇನು?

ಹೀಗೆ ಮಾತನಾಡುತ್ತ ಅವರೀರ್ವರೂ ಆ ಸಮೀಪದ ಡೇರೆಯನ್ನು ಹೊಕ್ಕರು. ಖಾನನು ತನ್ನ ಮೋರೆಯ ಮೇಲೆ ಸುತ್ತಿದ್ದ ಶಿರಸ್ತ್ರಾಣವನ್ನು ಬಿಚ್ಚಿದನು. ಕೂಡಲೆ ಅಲ್ಲಿದ್ದವರೆಲ್ಲರೂ ಆತನನ್ನು ಗುರುತಿಸಿ, ಎಲ್ಲರೂ ಆತನಿಗೆ ಸಲಾಮು ಮಾಡಿದರು. ಖಾನ್‌ಸಾಹೇಬ, ತಾವು ಒಳ್ಳೇ ಸಮಯಕ್ಕೆ ಪ್ರಾಪ್ತರಾದಿರಿ ದೇವರೇ ತಮ್ಮನ್ನು ಇಲ್ಲಿಗೆ ಕಳಿಸಿದಂತಾಯಿತು, ಎಂದು ಕೆಲವರು ಮನಃಪೂರ್ವಕವಾಗಿಯೂ, ಬೇರೆ ಕೆಲವರು ಮುಖಸ್ತುತಿಗಾಗಿಯೂ ನುಡಿದರು. ಖಾನನು ಅವರಲ್ಲಿಯ ಬೇರೆ ಬೇರೆಯವರಿಗೆ ಬೇರೆ ಬೇರೆ ತರದ ಕುಶಲ ಪ್ರಶ್ನೆಗಳನ್ನು ಮಾಡಿ, ಅವರೆಲ್ಲರನ್ನು ಸಮಾಧಾನ ಪಡಿಸಿದನು. ಬಳಿಕ ಒಬ್ಬನನ್ನು ಜವಾದಾರನನ್ನು ಕರೆಯ ಕಳುಹಿ, ಮತ್ತೊಬ್ಬನಿಗೆ:—ದಂಡಿನ ತಳವನ್ನು ಇಲ್ಲಿಂದ ಕಿತ್ತಲಿಕ್ಕೆ ಸುಲ್ತಾನಸಾಹೇಬರ ಹುಕುಮಾಗಿದೆಯೇನು? ಎಂದು ಪ್ರಶ್ನೆ ಮಾಡಿದನು ಅದಕ್ಕೆ ಆತನು ಹೌದೆಂದು ಒಪ್ಪಿದನು. ಹೀಗೆ ಹುಕುಮು ಆಗಲಿಕ್ಕೆ ಕಾರಣವೇನೆಂದು

ಖಾನನು ಪುನಃ ಕೇಳಲು, ಅದಕ್ಕೆ ಮಾತ್ರ ಯಾರಿಂದಲೂ ಸಮರ್ಪ ಕವಾದ ಉತ್ತರವು ದೊರೆಯಲಿಲ್ಲ. ಆವನು ಮತ್ತೆ ಏನೇನೋ ಕೇಳತಕ್ಕವನು; ಅಷ್ಟರಲ್ಲಿ ಜಾಫರಖಾನ ಜಮಾದಾರನು ಅಲ್ಲಿಗೆ ಬಂದನು. ಆತನು ಬಂದೊಡನೆಯೇ ಮುಸಲ್ಮಾನೀ ರಿವಾಜಿನಂತೆ ಅವರು ಒಬ್ಬರನ್ನೊಬ್ಬರು ಆಲಿಂಗಿಸಿ ಭೆಟ್ಟಿಯಾದರು.

ಅಲ್ಹಮದುಲಿಲ್ಲಾ! ಖಾನಸಾಹೇಬ, ತಾವು ಈಗ ಬಂದದ್ದು ವಿಹಿತವಾಯಿತು. ತಾವು ಇಲ್ಲಿಯೇ ನಿಂತುಕೊಂಡು ಇತ್ತಣ ಸಮಾಚಾರವನ್ನು ಕೇಳಿಕೊಳ್ಳುವದಕ್ಕಿಂತ ನನ್ನ ಬಡವನ ಡೇರೆಗೆ ಬಂದು ತುಸು ವಿಶ್ರಮಿಸಿ, ಮುಂದಿನ ಉದ್ಯೋಗಕ್ಕೆ ಹತ್ತಬೇಕೆಂದು ನಾನು ಬಯಸುತ್ತೇನೆ, ಎಂದು ಜಾಫರಖಾನನು ನುಡಿದ ಕೂಡಲೆ, ಆತನ ಡೇರೆಗೆ ಹೋಗಿ, ಖಾನನು ಅಲ್ಲಿಯ ಉಚ್ಚಾಸನದ ಮೇಲೆ ಕುಳಿತನು. ಕಾಸೀಮನೂ ಖಾನನ ಹಿಂದಿಂದೆ ಹೋದನು; ಆದರೆ ಈಗ ಏನು ಮಾಡಬೇಕು? ತಾನು ಕೂಡ್ರಬೇಕೋ-ನಿಂತಿರಬೇಕೋ ಎಂಬ ಇತ್ಯರ್ಥ ವಿಚಾರದಲ್ಲಿಯೇ ಆತನು ಕೆಲಕಾಲ ಸ್ತಬ್ಧನಾಗಿ ನಿಂತನು ಕಡೆಗೆ ಅಬ್ದುಲ್ ರಹಿಮಾನಖಾನನೇ ಆತನನ್ನು ಕರೆದು ತನ್ನ ಬಳಿಯಲ್ಲಿ ಕೂಡ್ರ ಹೇಳಿದಾಗ ಆತನು ಅಲ್ಲಿ ಹೋಗಿ ಕುಳಿತನು. ಖಾನನೊಡನೆ ತನ್ನ ಡೇರೆಯನ್ನು ಪ್ರವೇಶಿಸಿದಾಗಿನಿಂದ ಕಾಸೀಮನ ಕಡೆಗೆ ಜಾಫರನು ಕಡೆಗಣ್ಣಿನಿಂದ ನೋಡಹತ್ತಿದನು. ಆತನ ಆ ವಿಚಿತ್ರ ದೃಷ್ಟಿಯನ್ನು ಕಂಡು ತನ್ನನ್ನು ಈತನು ದ್ವೇಷಿಸುತ್ತಿರುವ ನೆಂದೇ ಕಾಸೀಮನಿಗೆ ಎನಿಸಿತು. ಸುಮ್ಮ ಸುಮ್ಮನೆ ಹಗೆತನ ಕಟ್ಟಿ ಕೊಳ್ಳೋಣವೆಂದು ಇದಕ್ಕೇ ಅನ್ನಬಹುದು. ಕಾಸೀಮ ಹಾಗು ಜಾಫರ ಇವರು ಪರಸ್ಪರರನ್ನು ನೋಡಿದ್ದು ಇದೇ ಮೊದಲು ಜಾಫ ರನ ಆಗಿನ ಆ ದೃಷ್ಟಿಪಾತವನ್ನು ನೋಡಿದ ಕೂಡಲೆ, ಈತನು ತನಗೆ ಮುಂದೆ ಶತ್ರುವಾಗುವದು ಖಂಡಿತವೆಂದು ಕಾಸೀಮನು ತಿಳಿದು

ಕೊಂಡನು. ಇದೆಲ್ಲಿಯ ಪಿಶಾಚಿ ಒಂತೋ? ಎಂದು ಜಾಫರನೂ ಕಾಸೀಮುನ ವಿಷಯವಾಗಿ ಭಾವಿಸಿದನು.

ಖಾನನು ಜಾಫರನೊಡನೆ ಸೈನ್ಯದ ಬಗ್ಗೆ ಮಾತಾಡುತ್ತಿರಲು, ನಡುನಡುವೆ ಆತನು ಕಾಸೀಮುನಿಗೆ:—ತಮ್ಮಾ, ಈ ಬಗ್ಗೆ ನಿನಗೇನೆನಿಸುವದು? ಹೀಗೆ ಮಾಡುವದೇ ಉಕ್ತವಲ್ಲವೆ? ಮುಂತಾಗಿ ಕೇಳುತ್ತಿದ್ದನು ಅದರಿಂದಂತೂ ಕಾಸೀಮುನ ಬಗ್ಗೆ ಜಮಾದಾರನ ಅಂಗ-ಪ್ರತ್ಯಂಗಗಳಲ್ಲಿ ದ್ವೇಷಾಸೂಯೆಗಳು ಪ್ರಾದುರ್ಭವಿಸಿದವು!

ಅಲ್ಲಿಯ ದಂಡಿನ ತಳ ಕಿತ್ತುವದಕ್ಕೆ ಸುಲ್ತಾನನ ಹುಕುಮು ಹೊರಟದ್ದೇ ನಿಜವಾಗಿತ್ತು ಪಟ್ಟಣದ ಹೊರತು ಬೇರೆ ಕಡೆಗಿನ ಎಲ್ಲ ಸೈನ್ಯಗಳಿಗೂ ಪಟ್ಟಣಕ್ಕೆ ಶೀಘ್ರವಾಗಿ ಬರಲಿಕ್ಕೆ ಅಪ್ಪಣೆಯಾಗಿತ್ತು ಮರಾಟರ ಸದ್ದಿನ ಯಾವ ಒಂದೆರಡು ಠಾಣ್ಯಗಳಾಗಿದ್ದವೋ, ಅಲ್ಲಿಯ ದಂಡಿಗೆ ಮಾತ್ರ ಠಾಣ್ಯ ಬಿಟ್ಟು ಕದಲಲಿಕ್ಕೆ ಅಪ್ಪಣೆಯಾಗಿರಲಿಲ್ಲ. ಹೀಗೆ ಒಮ್ಮಿಂದೊಮ್ಮೆ ಎಲ್ಲ ದಂಡುಗಳನ್ನು ಶ್ರೀರಂಗಪಟ್ಟಣಕ್ಕೆ ಕರೆಯಿಸುವದೇಕೆಂಬದರ ನಿಜವಾದ ಕಾರಣವು ಸಿಪಾಯಿಯಿಂದ ದಂಡಿನ ಮುಖ್ಯಸ್ಥನ ವರೆಗೆ ಒಬ್ಬನಿಗೂ ಗೊತ್ತಾಗಿದ್ದಿಲ್ಲ. ಅಂದ ಮೇಲೆ ನೀಲಿ ಕಟ್ಟ ಸುದ್ದಿಗಳ ಸುಳಿದಾಟಕ್ಕೆ ಕೊರತೆಯೇ? ಇಂಗ್ಲಿಷರೊಡನೆ ಟೀಪುಸಾಹೇಬರ ಘನಸಂಗ್ರಾಮವೆಸಗುವದೆಂದು ಕೆಲವರು ಅಂದರೆ, ಕೆಲವರು ತ್ರಾವಣಕೋರದ ಮೇಲೆ ದಂಡೆತ್ತಿ ಸಾಗಬೇಕಾಗಿದೆಯೆಂದು ಸುದ್ದಿ ಬೀರುವರು. ಮತ್ತೆ ಕೆಲವರು ಹೇಳುವದೇನೆಂದರೆ: ವಿಶೇಷ ಕಾರಣವೇನೂ ಇಲ್ಲ ತಮ್ಮ ಲಹರಿಯ ಸ್ವಭಾವಕ್ಕನುಸರಿಸಿ, ಟೀಪುಸಾಹೇಬರು ತಮ್ಮ ಎಲ್ಲ ದಂಡಾಳುಗಳ ಪರೀಕ್ಷೆ ತಕ್ಕೊಳ್ಳುವ ಸಲುವಾಗಿ ಕರೆಸಿರುತ್ತಾರೆ.

ಕೆಲ ಕಾಲ ಖಾನನು ಜಾಫರನ ಡೇರೆಯಲ್ಲಿ ಕುಳಿತು, ಊಟ ಮುಗಿಸಿಕೊಂಡು ತನ್ನ ದಂಡಿನ ಮುಂದಿನ ಮುಕ್ಕಾಮುನ್ನು ಎಲ್ಲಿಗೆ

ಹಾಕುವದು ಯುಕ್ತವೆಂಬದನ್ನು ಆಲೋಚಿಸುವದಕ್ಕಾಗಿ ಕಾಸೀಮ ನೊಡನೆ ಅಲ್ಲಿಂದ ಹೊರಬಿದ್ದನು. ಸುಷ್ಟ ಮನುಷ್ಯನನ್ನು ದುಷ್ಟರು ನಿಷ್ಕಾರಣ ದ್ವೇಷಿಸುವರೆಂಬದು ಲೋಕದ ಸ್ಥಿತಿಯಾಗಿದೆಯಷ್ಟೇ? ಅದರಂತೆಯೇ ಕಾಸೀಮನನ್ನು ನೋಡಿದ ಕೂಡಲೆ ಜಾಫರನು ಆತನ ವಿಷಯವಾಗಿ ದ್ವೇಷಪಡಹತ್ತಿದನು. ಜಾಫರ ಜಮಾದಾರನು ಸ್ವತಃ ಬಹು ನೀಚನು "ಖಾನನ ಪ್ರೀತಿಗೆ ಪಾತ್ರನಾದ ಈ ಕಾಸೀಮ ನೆಲ್ಲಿಂದ ಬಂದನೋ? ಇವನನ್ನು ಖಾನನು ತನ್ನ ಹತ್ತರವೇ ಇರಿಸು ವದಾದರೆ ಈತನಿಗೆ ಶ್ರೇಷ್ಠವಾದ ನೌಕರಿಯನ್ನು ಹಚ್ಚಿ ಕೊಡಬೇಕಾ ಗುವದು; ಖಾನನ ಬಳಿಯ ಉಚ್ಚತರಗತಿಯ ನೌಕರಿಯೆಂದರೆ, ಜಮಾದಾರಿಕೆಯು ಆದರಿಂದ ಈ ಕಾಸೀಮನು ತನ್ನ ಜಮಾದಾರಿ ಕೆಯ ಮೇಲೆ ಎಲ್ಲಿ ಆಡ್ಡ ಬರುವನೋ!" ಎಂದು ಆತನು ಕಸವಿಸಿ ಪಡಲಾರಂಭಿಸಿದನು.

ಹೀಗೆ ಜಾಫರನು ತನ್ನ ಡೇರೆಯಲ್ಲಿ ಕುಳಿತು ಕಾಸೀಮನ ವಿಷ ಯವಾಗಿ ಆಲೋಚಿಸುತ್ತಿರಲಿಕ್ಕೆ, ಆತನ ಕೃಕೆಳಗಿನವನೂ ಕೇವಲ ಪ್ರೀತಿಪಾತ್ರನೂ ಆದ ಮಾದರಚೋದ್‌ನೆಂಬ ಸಿಪಾಯಿಯು ಅಲ್ಲಿಗೆ ಬಂದನು. ಮಾದರಚೋದನು ಹೆಸರಿಗೆ ತಕ್ಕಂತೆಯೇ ಇದ್ದನೆಂದು ಬರೆಯುವ ಕಾರಣವಿಲ್ಲ. ಜಾಫರನ ಪ್ರತಿಯೊಂದು ಕಪಟ ಹಾಗು ದುಷ್ಟ ಕೃತಿಗಳಲ್ಲಿ ಆತನಿಗೆ ಈ ಮಾದರಚೋದನೇ ನೆರವಾಗತಕ್ಕ ವನು. ಆಗ ಜಾಫರನು ಆತನನ್ನು ಕುರಿತು:—ಮಾದರಚೋದ್, ಈ ವೃದ್ಧಕಪಿಯು ಈಗಲೆ ಬರದಿದ್ದರೆ ಎಷ್ಟು ಅನುಕೂಲವಾಗು ತಿತ್ತು? ಆದರೆ ಇದರಲ್ಲಿ ಅವನದೇನು ತಪ್ಪು? ನಾನೇ ದುರ್ದೈವಿಯು! ಅವನನ್ನು ಕಂಡ ಕೂಡಲೆ ನನಗೊಳ್ಳೇ ಸಿಟ್ಟು ಬಂದಿತು; ಆದರೆ ಮಾಡುವದೇನು? ಆತನ ಆಗಮನದಿಂದ ನನಗೆ ಪ್ರಾಪ್ತವಾಗಬಹು ದಾಗಿದ್ದ ಒಂದು ಸಾವಿರ ಹೊನ್ನುಗಳ ಹಾನಿಯಾಯಿತು. ಹೋಗಲಿ.

ಅದನ್ನು ಮತ್ತೆ ಯಾವಾಗಾದರೂ ನೋಡಿಕೊಳ್ಳುವೆನು. ಮಾದರ, ಖಾನನು ಆ ಹೊಸ ಹುಡುಗನನ್ನು ಎಲ್ಲಿಂದ ತಂದಿರುವನು? ಆತನನ್ನು ನೋಡಿದಾಗಿನಿಂದ ನನ್ನ ಮೈಯೆಲ್ಲ ಉರಿಯುತ್ತಿದೆ.

ಮಾದರಚೋದ:—ಖುದಾವಂದ, ಆ ಬಗ್ಗೆ ನನಗೂ ಹೆಚ್ಚಿಗೆ ತಿಳಿದಿರುವದಿಲ್ಲ; ಆದರೆ ಆತನು ಖಾನಸಾಹೇಬರ ಹೊಸ ಹೆಂಡತಿಯ ಬಂಧುವಿರಬಹುದೆಂದು ನನಗನಿಸುತ್ತದೆ. ಖಾನಸಾಹೇಬರು ಆತನನ್ನು ಬಹಳವಾಗಿ ಪ್ರೀತಿಸುತ್ತಿರುವದರಿಂದ, ಆವನಿಗೆ ಯಾವುದೊಂದು ದೊಡ್ಡ ಚಾಕರಿಯನ್ನು ಹಚ್ಚಿಕೊಡುವಂತಾಗಿ ತೋರುತ್ತದೆ

ಜಾಫರ:—ಅದು ಹೇಗೆಯೋ ಇರಲಿ. ನೀನು ಆತನ ಸಂಬಂಧದ ನಿಜ ಸಂಗತಿಯನ್ನು ತಿಳಿದು, ನಾಳೆ ಸಾಯಂಕಾಲದೊಳಗಾಗಿ ಬಂದು ನನಗೆ ಹೇಳಬೇಕು ಅಂದರೆ ಮುಂದೆ ಏನು ಮಾಡಬೇಕೆಂಬದನ್ನು ನಿಶ್ಚಯಿಸಲಿಕ್ಕೆ ನನಗೆ ನೆಟ್ಟಗಾಗುವದು. 'ಬಂದದ್ದು ಬರಲಿ'ಯೆಂದು ಸುಮ್ಮನೆ ಕೂಡುವ ದಿವಸಗಳು ಇವಲ್ಲ. ತೀವ್ರವೇ ಆತನನ್ನು ಗೊತ್ತಿಗೆ ಹಚ್ಚೋಣವಂತೆ

ಜಾಫರನ ಈ ಶಬ್ದಗಳನ್ನು ಕೇಳಿ, ಮಾದರಚೋದನಿಗೆ ಭೂತನ ಕೈಯೊಳಗೆ ಕೊಳ್ಳಿ ಕೊಟ್ಟಂತಾಯಿತು. ಆಗ ಅವನು:—ಖಾವಂದ, ಅದರಲ್ಲೇನು ಮಹತ್ವವಿದೆ? ಆದರೆ ನನ್ನ ಅನುಮಾನವು ಮಾತ್ರ ಸರ್ವಥಾ ತಪ್ಪಲಿಕ್ಕಿಲ್ಲ, ಎಂದೆಂದು ಅಲ್ಲಿಂದ ಹೊರಟನು ಮಾದರನು ಮರುದಿನದ ವರೆಗೆ ಹಾದಿ ನೋಡುವನೆ? ಅಂದೇ ಮಧ್ಯಾಹ್ನ ಮೂರನೇ ಪ್ರಹರದಲ್ಲಿ ಅಬ್ದುಲ್‌ರಹಿಮಾನಖಾನನ ಮನೆಯ ಜನರು ಬರುವ ಹೊತ್ತಿಗೆ ತನ್ನ ಬೆಳ್ಳಿಯ ಬೆತ್ತವನ್ನು ತಿರುವುತ್ತ ಹಿಳ್ಳೇ ಡೌಲಿನಿಂದ ಅಲ್ಲಿಗೆ ಹೋದನು. ಆತನು ಮೊಟ್ಟ ಮೊದಲು ಖಾನನ ಹಿಬ್ಬ ಶಿಪಾಯಿಗೆ ಭೆಟ್ಟಿಯಾಗಿ:—ಕ್ಯಾಂಜೀ ದೋಸ್ತ, ನಿಮ್ಮ ಹೊಸ ಖಾನಮುಸಾಹೇಬರ ಬಂಧುವು ಹಿಳ್ಳೇ

ದೊಡ್ಡ ಮನುಷ್ಯನಾಗಿ ತೋರುತ್ತಾನಲ್ಲವೆ? ಎಂದು ಪ್ರಶ್ನೆ ಮಾಡಿ, ತನಗೆ ಬೇಕಾಗಿದ್ದ ಸಂಗತಿಯನ್ನು ಸಂಗ್ರಹಿಸುವ ಉದ್ಯೋಗಕ್ಕೆ ಮೊದಲು ಮಾಡಿದನು; ಆದರೆ ಆ ಸಿಪಾಯಿಗೆ ಈ ಬದಮಾಷ ಮಾದರಚೋದನ ಸ್ವಭಾವದ ಪರಿಚಯವು ಚೆನ್ನಾಗಿತ್ತು. ಅದರಿಂದ ಅವನು ಮಾದರನು ಹಾಗೆ ಪ್ರಶ್ನೆ ಮಾಡಿದ ಕೂಡಲೆ, ಆತನಿಗೆ:—ಎಲೇ ಮಾದರಚೋದ, ಹೊರಡು ಇಲ್ಲಿಂದ ಇಲ್ಲದಿದ್ದರೆ ನಿನಗೆ ನನ್ನ ಕಾಲ್ಮರಿಯ ಪೆಟ್ಟೇ ಬಿದ್ದೀತು ನೋಡು! ತಾಯಿಗಂಡನೇ, ಯಃಕಶ್ಚಿತ ಶಿಪಾಯಿಯು ನೀನು; ನಿನ್ನ ಬಾಯಲ್ಲಿ ನಮ್ಮ ಆ ಹೊಸ ಖಾನ ಮುಸಾಹೇಬರ ಹೆಸರೇಕೋ ಲುಚ್ಚಾ? ಈ ಬಗ್ಗೆ ನಿನಗೆ ಸ್ವಲ್ಪಾದರೂ ನಾಚಿಕೆಯುಂಟಾಗುವದಿಲ್ಲವೇ? ಮತ್ತೆ ಮಾತಾಡ ಬೇಡ, ಹೋಗು ಇಲ್ಲಿಂದ? ಎಂದಂದು, ಅವನನ್ನು ಕತ್ತು ಹಿಡಿದು ನೂಕಿಸಿಕೊಟ್ಟನು. ಹೀಗೆ 'ಪ್ರಥಮಂ ಗ್ರಾಸೇ ಮಕ್ಷಿಕಾ ಪಾತಃ' ಆದುದರಿಂದ ಆ ಮಾದರಚೋದನು ಓಣಿಯೊಳಗಿನ ಬಿಡಾಡಿ ನಾಯಿಯಂತೆ, ಬಾಯಿಂದ ಏನೋ ಗುಣುಗುಟ್ಟುತ್ತ ಅಲ್ಲಿಂದ ಹೊರಟು ಹೋದನು.

ಆದರೆ ಆ ನೀಚನು ತನ್ನ ಕೃತಕಾರ್ಯವನ್ನು ಮಾತ್ರ ಬಿಟ್ಟುಕೊಡಲಿಲ್ಲ. ಆತನು ಅಲ್ಲಿಂದ ಹೊರಟು ಆ ಸಿಪಾಯಿಯ ಕಣ್ಣು ತಪ್ಪಿಸಿ, ಬೇರೊಬ್ಬ ಕುದುರೆಯ ಸವಾರನಲ್ಲಿಗೆ ಹೋದನು. ಅಲ್ಲಿಯೂ ಅವನಿಂದ ಲತ್ತಾಪ್ರಹಾರ ಮಾಡಿಸಿಕೊಂಡ ನಂತರ, ಆತನು ಮ-ತ್ತೊಬ್ಬ ಹಯವಾನನ ಬಳಿಗೆ ಹೋದನು. ಆ ಮನುಷ್ಯನು ಭೋಳೇ ಸ್ವಭಾವದವನಿದ್ದುದರಿಂದ, ಮಾದರನ ಮಾದರಚೋದತನವು ಆತನಿಗೆ ಗೊತ್ತಾಗಲಿಲ್ಲ. ಅದರಿಂದ ಆತನು ಕಾಸೀಮನ ವಿಷಯವಾಗಿ ತನಗೆ ಗೊತ್ತಿದ್ದ ಸಮಸ್ತ ಸಂಗತಿಯನ್ನೂ ಆತನಿಗೆ ತಿಳಿಸಿದನು. ಮಾದರನು ಆತನಿಂದ ಕೇಳತಕ್ಕದ್ದನ್ನು ಜಿಜ್ಞಾಸು ಬುದ್ಧಿಯಿಂದ ಕೇಳಿ ತಿಳಕೊಂಡು, ಇನ್ನು ತನ್ನ ಬಿಡಾರದ ಕಡೆಗೆ ಹೊರಡತಕ್ಕ

ವನು; ಅಷ್ಟರಲ್ಲಿ ಆತನು ಆ ಹಯವಾನನ ಬಳಿಯಲ್ಲಿದ್ದುದನ್ನು ಆ ಮೊದಲಿನ ಸಿಪಾಯಿಯೂ, ಕಾಸೀಮನೂ ನೋಡಿದರು.

ಮಾದರನ ಈ ಅತಿ ಪ್ರಸಂಗವು ಆ ಮೊದಲಿನ ಸಿಪಾಯಿಗೆ ಸಹನವಾಗಲಿಲ್ಲ. ಯಾಕಂದರೆ ಆತನು ಅಬ್ದುಲ್‌ರಹಿಮಾನಖಾನನ ವಿಶ್ವಾಸದ ಸೇವಕನು. ಹಿಂದಕ್ಕೊಮ್ಮೆ ಈ ಮಾದರನೂ ಜಾಫರ ಜಮಾದಾರನೂ ಸೇರಿ, ಆತನ ಮೇಲೆ ಒಂದು ಸುಳ್ಳು ಆರೋಪ ಹೊರಿಸಲೆತ್ನಿಸಿದ್ದರು; ಆದರೆ ತನ್ನ ಪ್ರಾಮಾಣಿಕತನದ ಬಲದಿಂದ ಆತನು ಆಗ ಆ ಕುತ್ತಿನೊಳಗಿಂದ ಪಾರಾಗಿದ್ದನು. ಅಂದಿನಿಂದಲೇ ಅವನು ಮಾದರ ಹಾಗು ಜಾಫರರನ್ನು ದ್ವೇಷಿಸುತ್ತಿದ್ದನು ಆದರಿಂದ ಆ ಸಿಪಾಯಿಯು ಇಂದು ಮಾದರನನ್ನು ಆ ಹಯವಾನನ ಬಳಿಯಲ್ಲಿ ಮತ್ತೆ ಮಾತಾಡುತ್ತ ನಿಂತಿರುವದನ್ನು ಕಂಡ ಕೂಡಲೆ ಬೇರೊಬ್ಬ ಹಯವಾನನನ್ನು ಕಳಿಸಿ, ಮಾದರನನ್ನೂ ಆ ಹಯವಾನನನ್ನೂ ಅಬ್ದುಲ್‌ರಹಿಮಾನಖಾನನು ಕರೆಯುವನೆಂದು ಹೇಳಿ ಕರೆಸಿದನು. ಬಳಿಕ ೬ ಹಯವಾನನಿಗೆ: 'ನಿನಗೆ ಮಾದರನು ಏನೇನು ಕೇಳುತ್ತಿದ್ದನು?'ಎಂದು ವಿಚಾರಿಸಿದನು. ಯಾವ ಪಾಪವನ್ನೂ ಅರಿಯದ ಆ ಬಡ ಪ್ರಾಣಿಯು, ನಡೆದ ಸಂಗತಿಯನ್ನೆಲ್ಲ ಯಥಾಸ್ಥಿತವಾಗಿ ನಿವೇದಿಸಿದನು. ಅದನ್ನು ಕೇಳಿ ಆ ಸಿಪಾಯಿಯು ಸಂತಾಪದಿಂದ ಹುಚ್ಚಾದನು! ಕಾಸೀಮನಿಗೂ ಸಿಟ್ಟು ಬಂತು. ಅವರು ಆ ಮಾದರನನ್ನು ಕುರಿತು: 'ಬದಮಾಷ್', ನಿನಗೆ ಈ ಇಲ್ಲದ ಉಸಾಬರಿಯು ಏತಕ್ಕೆ ಬೇಕಾಗಿತ್ತು? ಇದನ್ನು ನೀನು ನಿನ್ನ ಸ್ವಂತ ಬುದ್ಧಿಯಿಂದ ಕೇಳಿರುವೆಯೋ, ಮತ್ತಾರಾದರೂ ನಿನಗೆ ಕೇಳಿ ತಿಳಿಯಲಿಕ್ಕೆ ಕಳಿಸಿರುವರೋ? ಎಂದು ಗದ್ದರಿಸಿ ಕೇಳಲು, ಆ ಹೇಡಿಯು:-ಇಲ್ಲರಿ;....ಸುಮ್ಮನೆ ಕೇಳಿದೆನು, ಎಂದು ದೈನ್ಯದಿಂದ ನುಡಿಯ ಹತ್ತಿದನು. ಇನ್ನೊಮ್ಮೆ ಇಂಥ ಉದ್ಧಟತನದ ಉಸಾಬರಿ ಮಾಡಿದೆಯೆಂದರೆ ನಿನ್ನ ಮೈಯು ಎಲವು

ಗಳೇ ದುಂಡಗಾದಾವು ಬಹು ಎಚ್ಚರ! ಎಂದು ಹೇಳಿ ಆತನನ್ನೂ ಜಾಫರನನ್ನೂ ಬಾಯಿಗೆ ಬಂದ ಹಾಗೆ ಬೈದು ಕಳಿಸಿದರು.

ಕಾಸೀಮನೂ ಆ ಮೊದಲಿನ ಶಿಪಾಯಿಯೂ ಮಾದರನಿಗೆ ಬರೇ ಸಿಟ್ಟು ಮಾಡಿ ಕೇಳಿ ಬಿಟ್ಟುಕೊಟ್ಟರೂ, ಆ ದಂಡಿನೊಳಗಣ ಉಳಿದ ಸಿಪಾಯಿಗಳು ಆತನನ್ನು ಸುಮ್ಮನೆ ಬಿಡುವರೇ? ಕೆಲವರು ಆತನನ್ನು ಕೇವಲ ಉಪಹಾಸೋಕ್ತಿಗಳಿಂದ ಅಲ್ಲಗಳೆದರೆ, ಮತ್ತೆ ಕೆಲವರು ಕೈಯೊಳಗಿನ ಕೋರಡೆಯಿಂದ ಬೆನ್ನ ಮೇಲೆ ಚೆನ್ನಾಗಿ ಎಳೆದು, ಆ ಪಾಪರನನ್ನು ಎಚ್ಚರಿಸಲಿಕ್ಕೆ ಕಡಿಮೆ ಮಾಡಲಿಲ್ಲ. ಇನ್ನು ಕೆಲವು ಉಪದ್ವ್ಯಾಪಿ ಪ್ರಾಣಿಗಳು ತಮ್ಮ ನಾಯಿಗಳನ್ನು ಆ ನೀಚನ ಮೇಲೆ ಛೂ ಬಿಟ್ಟು, ಆತನನ್ನು ಓಡ ಹಚ್ಚಿ ಮೋಜು ನೋಡ ತೊಡಗಿದರು.

ಮಾದರನು ಹೇಗಾದರೂ ಜೀವವುಳಿಸಿಕೊಂಡು ಜಾಫರನ ಬಳಿಗೆ ಬಂದು ತಲುಪಿದನು. ಆತನು ಕಾಸೀಮನ ಸಂಗತಿಯನ್ನು ಜಮಾದಾರನಿಗೆ ಸಂತಾಪವುಂಟಾಗುವಂತೆ ಸಿದ್ಧಗೊಳಿಸಿ ತಿಳಿಸಿದನು. ಕಾಸೀಮನು ಅಬ್ದುಲ್‌ರಹಿಮಾನಖಾನನ ಹೊಸ ಹೆಂಡತಿಯನ್ನು, ಆಕೆಯು ಹೊಳೆಯಲ್ಲಿ ಮುಳುಗಿದಾಗ ತೆಗೆದು, ಅಲ್ಲಿಂದ ತನ್ನ ಮನೆಗೆ ಹೊತ್ತುಕೊಂಡು ಬಂದನೆಂಬದೂ, ಅವಳು ಅವನ ಮನೆಯಲ್ಲಿ ಹಿಂದೆ ರಡು ದಿನಗಳವರೆಗೆ ಇದ್ದಳೆಂಬದೂ ಆಕೆಯು ಆತನನ್ನು ಹಳ್ಳೀ ಪ್ರೀತಿ ಯಿಂದ ನೋಡುತ್ತಿರುವಳೆಂಬದೂ ಜಾಫರನ ಕಿವಿಗೆ ಬಿದ್ದ ಕೂಡಲೆ ಅವನ ಮನಸ್ಸಿನಲ್ಲಿ ಅನುಕೂಲ ವಿಚಾರಗಳು ವ್ಯೈದೋರಿದಂತಾ ದವು. ಕೂಡಲೆ ಆತನು ಮಾದರನನ್ನು ಕುರಿತು:—ಎಲೇ ಮಾದರ, ಖಾನನ ಹೆಂಡತಿಯು ಚಲುವೆಯಾಗಿರುವಳೇ? ಅವಳು ಪುನಃ ಕಾಸೀ ಮನಿಗೆ ಏಂದಾದರೂ ಭೆಟ್ಟಿಯಾಗಿದ್ದಳೇ? ಎಂದು ಕೇಳಿದನು.

"ನನಗೇನು ಗೊತ್ತು ಸರದಾರ? ಆಕೆಯು ಸ್ವರ್ಗಲೋಕ

ದೊಳಗಿನ ಸುಂದರಿಯೇ ಆಗಿರುವಳೆಂದು ಜನರು ಅನ್ನುತ್ತಾರೆ.” ಜಾಫರನು ಉಲ್ಲಸಿತಚಿತ್ತನಾಗಿ:—ಮಾದರ, ಆ ಪೋರನ ಸಂಬಂಧದ ಮಾತ್ರಾವ ಸಂಗತಿಗಳು ನಿನಗೆ ತಿಳಿಯುವವೋ, ಅವನ್ನು ಆಗಾಗ್ಗೆ ಬಂದು ನನಗೆ ತಿಳಿಸು; ಅಂದರೆ ಮುಂದೆ ಹೇಗೆ ವರ್ತಿಸಿ, ಆತನನ್ನು ಗೊತ್ತಿಗೆ ಹಚ್ಚಬೇಕೆಂಬದನ್ನು ನಿಶ್ಚಯಿಸೋಣ, ಎಂದು ಹೇಳಿದನು.

ಮೇಲೆ ವಿವರಿಸಿದಂತೆ ಆ ಇಬ್ಬರು ನೀಚರು ತಮ್ಮ ಕೃಷ್ಣ ಕಾರಸ್ಥಾನದ ವಿಷಯವಾಗಿ ಆಲೋಚಿಸುತ್ತಿರಲು, ಇತ್ತ ಖಾನ, ಖಾನಮ ಹಾಗು ಕಾಸೀಮರು ಏನು ಮಾಡುತ್ತಾರೆಂಬದನ್ನು ನೋಡುವಾ. ಇಡಿ ದಿವಸ ಶ್ರಮವನ್ನು ವಹಿಸಿದ ಬಳಿಕ, ಎತ್ತರ ವಾದ ಮೆತ್ತನ್ನ ಹಾಸಿಗೆಯ ಮೇಲೆ ಬಿದ್ದುಕೊಂಡು, ಸುಸ್ವರೂಪ ಳಾದ ತರುಣ ಹೆಂಡತಿಯು ಮೃದುವಾದ ಹಸ್ತಗಳಿಂದ ಕಾಲನ್ನು ಹಿತ್ತಿಸಿಕೊಳ್ಳುವದೇ ಮಿಗಿಲಾದ ಸೌಖ್ಯವೆಂದು ಹಳೇ ಜನರ ರೂಢಿ ಯಾಗಿರುವದಷ್ಟೇ? ಇದರಂತೆ ಅಂದು ರಾತ್ರಿ ಅಬ್ದುಲ್‌ರಹಿಮಾನ ಖಾನನು ಪವಡಿಸಿ, ಹೆಂಡತಿಯಿಂದ ಕಾಲು ಹಿಚುಕಿಸಿಕೊಳ್ಳುತ್ತಿ ದ್ದನು ಆತನ ಮನೋರಂಜನಕ್ಕಾಗಿ ‘ಅರೇಬಿಯನ್‌ನಾಯಿಟ್ಸ’ ದೊಳಗಿನ ಒಂದು ಸರಸವಾದ ಕಥೆಯನ್ನು ಅಮೀನೆಯು ಆತನಿಗೆ ಹೇಳುತ್ತಿದ್ದಳು. ನಡುನಡುವೆ ಆತನು ಅವಳೊಡನೆ ಮಾತಾಡುತ್ತಿ ದ್ದನು. ಅವಳ ರೂಪ-ಲಾವಣ್ಯ ಹಾಗು ಸದ್ಗುಣ ಇವುಗಳನ್ನು ಕುರಿತು ಅವನು ಅವಳನ್ನು ಸ್ತುತಿಸುತ್ತಿದ್ದನು. ಆಕೆಯು ತಲೆ ಕೆಳಗೆ ಹಾಕಿ:—“ನಾನು ಅಷ್ಟೊಂದು ಗೌರವಕ್ಕೆ ಅರ್ಹಳಲ್ಲೆ”ಂದು ಮೆಲ್ಲನೆ ಹೇಳುತ್ತಿದ್ದಳು. ಇಷ್ಟರಲ್ಲಿ ಖಾನನು:—“ಪ್ರಿಯೇ, ನನಗೆ ಒಂದೇ ಒಂದು ಮಾತಿನ ಬಗ್ಗೆ ಬಲು ಖೇದವೆನಿಸುತ್ತದೆ ಆ ಮಾತು ಯಾವದೆಂದರೆ........” ಎಂದವನೇ ಸುಮ್ಮನಾಗಲು, ಅಮೀನೆಯು ವಿಷಣ್ಣವದನದಿಂದ:—ಖುದಾವಂತ, ತಮಗೆ ಖೇದ ಉತ್ಪನ್ನವಾ

ಗುವಂತಹ ಅದಾವ ತಪ್ಪು ನನ್ನಿಂದಾಗಿದೆ?

'ಛೇ! ಛೇ!' ಎಂದು ಖಾನನು ಸಾವರಿಸಿಕೊಂಡು:—ನಿನ್ನಿಂದ ಅಪರಾಧ ಘಟಿಸಿದೆಯೆಂದು ನನಗೆ ಖೇದವಾಗಿಲ್ಲ; ಆದರೆ ನನ್ನ ವರ್ತನದ ಬಗ್ಗೆಯೇ ನನಗ ಖೇದವುಂಟಾಗಿದೆ. ನಾನು ಇಷ್ಟು ಮುದುಕನಾಗಿರವಿದ್ದರೆ, ಬಹು ಚೆನ್ನಾಗಿರುತ್ತಿತ್ತು. ಇದಕ್ಕಿಂತ ೨೦-೨೫ ವರ್ಷಗಳಾದರೂ ನನ್ನ ವಯುಸ್ಸು ಕಡಿಮೆಯಾಗಿರಬೇಕಾಗಿತ್ತಲ್ಲವೆ? ಎಂದು ಹಿಳ್ಳೇ ಅವಸರದಿಂದ ನುಡಿದನು

ಈ ಶಬ್ದಗಳನ್ನು ಖಾನನು ಯಾವ ಉದ್ದೇಶದಿಂದ ನುಡಿದಿದ್ದರೂ ಅಮೀನೆಯು ಮೇಲೆ ಆಗಬೇಕಾಗಿದ್ದ ವಿಶೇಷ ಬಗೆಯ ಪರಿಣಾಮವೇ ಆಯಿತು. ಆಕೆಯು ತಲೆ ತಗ್ಗಿಸಿ ತನ್ನ ಮನಃಚಕ್ಷುವಿನ ಮುಂದೆ ಕಾಣುವ ಯಾವುದೊಂದು ಮೂರ್ತಿಯನ್ನು ನೋಡುತ್ತಿರುವಂತೆ ತೋರಿತು. ಅವಳು ಅದಾವ ಮೂರ್ತಿಯನ್ನು ಧ್ಯಾನಿಸುತ್ತಿದ್ದಳೆಂಬದನ್ನು ವಾಚಕರಿಗೆ ಬಿಚ್ಚಿ ಹೇಳುವ ಕಾರಣವಿಲ್ಲ. ಕಾಸೀಮನ ಆ ಧೀರೋದಾತ್ತ ತೇಜಃಪುಂಜವಾದ ಮೂರ್ತಿಯು ಆಕೆಯು ಮನಶ್ಚಕ್ಷುಗಳೆದುರಿಗೆ ಬಂದು ನಿಂತಿತ್ತು. ಅದನ್ನು ಮನದಣಿಯಾಗಿ ನೋಡಿದ ನಂತರ, ಅವಳೊಂದು ದೀರ್ಘವಾದ ಉಷ್ಣಶ್ವಾಸವನ್ನು ಮೆಲ್ಲನೆ ಬಿಟ್ಟಳು.

ಖಾನನು ಹೆಂಡತಿಯು ಮುಖಭಾವದ ಕಡೆಗೆ ಇಲ್ಲವೆ ಆಕೆಯು ಉಸಿರ್ಗರೆಯುವದರ ಕಡೆಗೆ ಲಕ್ಷ್ಯಗೊಟ್ಟಿರಲಿಲ್ಲ. ಆತನು ತನ್ನಲ್ಲಿಯೇ ಏನೇನೋ ಪುಟು-ಪುಟು ಅಂದುಕೊಂಡು, ಬಳಿಕ:—ಏನೂ ಅಡ್ಡಿಯಿಲ್ಲ ಆಗುವ ಕೆಲಸ ಆಗಿ ಹೋಗಿದೆ. ಇದ್ದದ್ದರಲ್ಲಿಯೇ ಸುಖದಿಂದಿರಲು ಯತ್ನಿಸೋಣ, ಅಂದರಾಯಿತು. ಪ್ರಿಯೇ, ನಿನ್ನೊಡನೆ ನಾನು ಲಗ್ನವಾದುದರ ಕಾರಣವೆಂದರೆ, ನಿನ್ನಿಂದ ನನಗೆ ಸುಖವಾಗಬೇಕೆಂಬದಿಷ್ಟೇ. ಅಮೀನೆ, ನಾನು ಇಷ್ಟು ವಯುಸ್ಸು ಕಳೆ

ದರೂ ನನಗೆ ಕೊಂಚವೂ ಸುಖಪ್ರಾಪ್ತಿಯಾಗಿಲ್ಲ. ಈ ವರೆಗೆ ನಾನು ನಿನಗೆ ತಿಳಿಸದ ಮತ್ತೊಂದು ಸಂಗತಿಯಾವುದೆಂದರೆ, ನನಗೆ ಈ ಮೊದಲಿನ ಇಬ್ಬರು ಹೆಂಡಂದಿರಿರುತ್ತಾರೆಂಬದು. ಹೆಂಗಸರೆದುರಿಗೆ ಅವರ ಸವತಿಯರ ಹೆಸರು ತೆಗೆದರೆ, ಎಷ್ಟೋ ಸಿಟ್ಟು ಒರುತ್ತದೆಂಬದು ಲೋಕಪ್ರಸಿದ್ಧವಾದ ಮಾತೇ. ಪ್ರಿಯೇ, ನಿನಗೂ ಈಗ ಸಿಟ್ಟು ಬಂದಿತೇನು?

ನಿಜವಾಗಿಯೂ ತನಗೆ ಸವತಿಯರಿರುವರೆಂಬ ಸಂಗತಿಯನ್ನು ಕೇಳಿ, ಅಮೀನೆಯಲ್ಲಿ ಕ್ರೋಧವು ತಲೆದೋರಿತು. ಆದರಿಂದ ಅವಳ ಕಣ್ಣುಗಳೊಳಗಿಂದ ಟಪ-ಟಪನೆ ನೀರುದುಂಹತ್ತಿದವು. ಅದನ್ನು ನೋಡಿ, ಖಾನನು ಆಕೆಯನ್ನು ಬಿಗಿದಪ್ಪಿ, ನಾನಾ ಪ್ರಕಾರದಿಂದ ಅವಳನ್ನು ಸಮಾಧಾನಗೊಳಿಸಲೆತ್ನಿಸಿದನು. ಹೀಗೆ ಅವಳೊಡನೆ ಮಾತಾಡುತ್ತಿರುವಾಗಲೇ ಆ ಸಂಸಾರಲಂಪಟಿಯಲ್ಲದ ಜರಠ ದಂಡಾಳುವಿಗೆ ನಿದ್ದೆ ಹತ್ತಿತು; ಆದರೆ ನವತರುಣಿಯಾದ ಅಮೀನೆಗೆ ಆಗ ನಿದ್ದೆ ಎಲ್ಲಿಂದ ಬರಬೇಕು? ಅವಳು ಸವತಿಯರ ವಿಷಯವನ್ನೇ ಪುನಃ ಪುನಃ ಆಲೋಚಿಸುತ್ತ ಬಿದ್ದುಕೊಂಡಿದ್ದಳು. ತನ್ನ ಗಂಡನು ಮುದುಕನು; ಇವನಿಂದ ತನಗೆ ಸೌಖ್ಯ ಲಭಿಸದೆಂಬದನ್ನು ಈ ಮೊದಲೇ ಅವಳು ಮನಗಂಡಿದ್ದಳು; ಆದರೆ ಇಂದು ತನಗೆ ಒಬ್ಬಳಲ್ಲ-ಇಬ್ಬರು ಸವತಿಯರಿರುವರೆಂಬದನ್ನು ಕೇಳಿ ತಿಳಿದ ಬಳಿಕ, ಜಗತ್ತಿನ ಅನುಭವವಿಲ್ಲದ ಆ ನವತರುಣಿಗೆ ಏನೆನಿಸಿರಬಹುದು? ಅಮೀನೆಯು ಈ ಪ್ರಕಾರ ದುಃಖಾತಿರೇಕದಿಂದ ಬಿಕ್ಕಿ-ಬಿಕ್ಕಿ ಅಳುತ್ತ ಬಿದ್ದುಕೊಂಡಿರಲು, ಕೆಲ ಹೊತ್ತಿನ ಮೇಲೆ ಖಾನನು ಎಚ್ಚತ್ತನು. ಆಕೆಯ ಆ ಸ್ಥಿತಿಯನ್ನು ಕಂಡು, "ಅವರಿಂದ ನಿನ್ನ ಕೂದಲಿಗೆ ಕೂಡ ಧಕ್ಕೆಯಾಗದಂತೆ ನಾನು ನೋಡಿಕೊಳ್ಳುವೆನೆ"ಂದು ಅವನು ಕುರಾಣದ ಆಣೆ ಮಾಡಿ, ಅಭಿವಚನ ಕೊಟ್ಟು ಅವಳನ್ನು ಶಾಂತ

ಗೊಳಿಸಿದನು.

ಮರುದಿನವೇ ಖಾನನ ದಂಡು ಬೆಂಗಳೂರಿಗೆ ತಲುಪಿತು. ಅಲ್ಲಿಂದ ಕೆಲವು ಖಜೀನೆಯನ್ನೂ, ಕೆಲವು ಜನ ಇಂಗ್ಲಿಷ ಸೆರೆಯಾಳು ಗಳನ್ನೂ ಶ್ರೀರಂಗಪಟ್ಟಣಕ್ಕೆ ಒಯ್ಯುವ ಅಪ್ಪಣೆಯಾಗಿತ್ತು. ಆದ ರಿಂದ ಅಲ್ಲಿಂದ ಬೇಗನೆ ತಳಕಿತ್ತಬೇಕಾಯಿತು. ಖಾನನು ನಂದಿ ದುರ್ಗದಲ್ಲಿಯೇ ತನ್ನ ದಂಡಿನ ಚಾರ್ಜನ್ನು ವಹಿಸಿಕೊಂಡದ್ದರಿಂದ, ಅವನಿಗೆ ಹಾಳು ಹರಟೆ ಹೊಡೆಯಲಿಕ್ಕೆ ಈಗ ಸಮಯವಿರಲಿಲ್ಲ; ತಾನು ಸ್ವತಃ ಮಾಡತಕ್ಕ ಕೆಲಸಗಳಲ್ಲಿಯ ಕೆಲವನ್ನು ಅವನು ಕಾಸೀ ಮನಿಗೆ ಒಪ್ಪಿಸಿದ್ದನು ಕಾಸೀಮನು ಓದು-ಬರೆಯುವದರಲ್ಲಿಯೂ, ಲೆಕ್ಕ-ಪತ್ರಗಳಲ್ಲಿಯೂ ನಿಷ್ಣಾತನಿದ್ದುದರಿಂದ, ಆತನ ಕಡೆಗೆ ತನ್ನ ದಂಡಿನ ಆ ಬಾಬಿನ ಮುಖ್ಯ ಕೆಲಸವನ್ನು ವಹಿಸಿದ್ದನು; ಹಾಗು ಈಚೆಗೆ ಒಂದೆಂಡು ವರ್ಷಗಳಿಂದ ಹಿಂದಿನ ಜಮಾಖರ್ಚಿನ ತಾಳೆ ನೋಡುವದುಳಿದ ಕೆಲಸವನ್ನೂ ಆತನಿಗೇ ಹೇಳಿದನು. ಹೀಗೆ ಖಾನನು ಹಲವು ಕೆಲಸಗಳನ್ನು-ಅದರಲ್ಲಿಯೂ ಮಹತ್ವದ ಕೆಲಸ ಗಳನ್ನು-ಕಾಸೀಮನಿಗೆ ವಹಿಸಹತ್ತಿದಂತೆ ಆತನಿಗೆ ಶತ್ರುಗಳ ಸಂಖ್ಯೆ ಯೂ ಬೆಳೆಯಿತು. ಕಂಡಕಂಡವರೆಲ್ಲ ಕಾಸೀಮನನ್ನು ದ್ವೇಷಿಸ ಹತ್ತಿದರು ಜಾಫರ ಜಮಾದಾರನಂತಹ ನಿಷ್ಕಾರಣ ಶತ್ರುತ್ವ ವಹಿ ಸುವವರಿಗಂತೂ ಈ ಹೊಸ ಕಾರಣದಿಂದ ಒಳ್ಳೇ ಹುರುಪು ಬಂತು. ಖಾನನ ದಂಡಿನ ಜಮಾಖರ್ಚನ್ನು ನಾಸರುದ್ದೀನನೆಂಬ ಮುಖ್ಯ ಗುಮಾಸ್ತನು ಬರೆಯುತ್ತಿದ್ದನು. ಆತನು ಹೆಸರಾದ ಲಂಚಗೂ ಳಿಯು ಜಾಫರ ಜಮಾದಾರನೂ ಆತನ ಪಾಲುಗಾರನು. ಖಾನನು ಲಗ್ನಕ್ಕೆಂದು ಹೈದರಾಬಾದಿಗೆ ಹೋದಂದಿನಿಂದ ಈಗ ಆರೇಳು ತಿಂಗಳುಗಳ ವರೆಗೆ ಜಾಫರ ಜಮಾದಾರನೇ ಖಾನನ ದಂಡಿನ ಹಂಗಾಮಿ ಮುಖ್ಯಸ್ಥನಾಗಿದ್ದನು ಈ ಸಂಧಿ ಸಾಧಿಸಿ ಅವರೀ

ರ್ವರೂ ಕೂಡಿ ಹೆಚ್ಚಾಗಿ ಲಂಚ ತಿಂದಿದ್ದರು ಆದರಿಂದ ಅವರೀ
ರ್ವರೂ ಕಾಸೀಮುನ ಮೇಲೆ ಹಲ್ಲು ಕಡಿಯು ಹತ್ತಿದ್ದು ತಪ್ಪಲ್ಲ.

ಕಾಸೀಮುನು ಲೆಕ್ಕ ತಪಾಸು ಮಾಡಹತ್ತಿದಂತೆ, ಅವರ
ತಪ್ಪುಗಳು ಒಂದೊಂದೇ ಎಂದು ಬಯಲಿಗೆ ಬೀಲಾರಂಭಿಸಿದವು
ಒಳ್ಳೇ ಬರಗಾಲದಲ್ಲಿ ಕೂಡ ಇರದಷ್ಟು ಕುಟ್ಟ ಧಾರಣೆಯನ್ನು
ಧಾನ್ಯ ಹಾಗು ಕುದುರೆಗಳ ಆಹಾರ ದ್ರವ್ಯಗಳಿಗಾಗಿ ಆಕಾರ ಮಾಡಿ
ಖರ್ಚು ಬರೆದಿದ್ದರು ಕಾಸೀಮುನು ಇಂಥ ಹಲವು ತಪ್ಪುಗಳನ್ನು
ಸೌಮ್ಯರೀತಿಯಿಂದಲೇ ನಾಸರುದ್ದೀನನ ಎದುರಿಗಿಟ್ಟನು. ಆಗ
ಆತನು ಕಾ-ಕೂ ಅನ್ನುತ್ತ ಕೆಲಕೆಲವು ತಪ್ಪುಗಳನ್ನು ತಿದ್ದಿ, ಕೇವಲ
ಬಂಡೀಗಾಲೆಯಾಗಿದ್ದ ಸಿಲುಕಿನ ಅಂಕಿಯನ್ನು ಅಲ್ಪ-ಸ್ವಲ್ಪಾದರೂ
ಹೆಚ್ಚಿಸಬೇಕಾಯಿತು. ಬರಬರುತ್ತ ತಪ್ಪು ತೋರಡುವ ಪ್ರಮಾಣವು
ಬೆಳೆಯಿತು. ಆಗ ನಾಸರುದ್ದೀನನು ತನ್ನ ಪಾಲುಗಾರನಾದ ಜಾಫ
ರನ ಬಳಿಗೆ ಹೋಗಿ ಆ ಸಂಗತಿಯನ್ನು ತಿಳಿಸಿದನು. ಜಾಫರನು
ಮಹಾ ಮೂರ್ಖನು; ಅಧಿಕಾರ ಲೋಲುಪನು; ದುರಭಿಮಾನಿಯು;
ಆದರಿಂದ ಕಾಸೀಮುನ ಸೂಚನೆಗೆ ತಲೆದೂಗಿ ನಾಸರುದ್ದೀನನು
ಲೆಕ್ಕ ತಿದ್ದಿದ್ದು ಅವನ ಮನಸ್ಸಿಗೆ ಹೇಗೆ ಬರಬೇಕು? ಅವನು ಕಾಸೀ
ಮುನನ್ನೂ ನಾಸರುದ್ದೀನನನ್ನೂ ಮನಸೋಕ್ತ ಬೈದು ಕಳಿಸಿದನು.
ಈ ಹೊಸ ಕಂಟಕರೂಪಿಯಾದ ಕಾಸೀಮುನನ್ನು ಹೇಗೆ ನಾಶಗೊಳಿ
ಸಬೇಕೆಂದು ಆತನು ಆಲೋಚಿಸುತ್ತ ಕುಳಿತಿರಲು, ಆತನ ಮುಖ್ಯ
ಸಲಹೆಗಾರನಾದ ಮಾದರನು ಅಲ್ಲಿಗೆ ಹೋದನು ಆ ಬಳಿಕ ಕೇಳು
ವದೇನು? ಮದ್ಯ ಕುಡಿದ ಮಂಗನಿಗೆ ಚೇಳು ಕಚ್ಚಿದಂತೆಯೂ,
ಹುಚ್ಚು ಹಿಡಿದವರ ಕೈಯಲ್ಲಿ ಕೊಳ್ಳೀ ಕೊಟ್ಟಂತೆಯೂ ಆಗ ಜಾಫ
ರನ ಅವಸ್ಥೆಯಾಯಿತು. ಅವನು ಪುನಃ ಕಾಸೀಮುನನ್ನೂ, ನಾಸರ
ನನ್ನೂ ಬೈದನಲ್ಲದೆ, ಬೇಗನೆ ತನಗೆ ಬೇಕಾಗಿರುವ ಸುದ್ದಿ ತರಲಿಲ್ಲ

ವೆಂದು ಮಾದರನಿಗೂ ಚೆನ್ನಾಗಿ ಪುಷ್ಪವೇರಿಸಿದನು. ಮಾದರನು ಏನೇನೋ ಹಿಟಿಗುಟ್ಟಿದನು.

ಹೀಗೆ "ಗದ್ಧೇಕು ಗದ್ಧಾ ಮಿಲೇತೋ ದೋ ದೋ ಲಾಥ, ದೋ ದೋ ಬುಕ್ಕಿ" ಎಂಬಂತೆ, ಆ ಇಬ್ಬರು ದುರ್ಜನರ ಪ್ರಥಮ ಪ್ರವೇಶವು ಸಂದಿ ಹೋದ ಬಳಿಕ, ಅವರು ಹಳ್ಳೀ ರಹಸ್ಯವಾಗಿ ಮಾತಾಡಹತ್ತಿದರು. ಖಾನನ ಹೊಸ ಹೆಂಡತಿಯು ಕಾಸೀಮನಿಗೆ ಭೆಟ್ಟಿಯಾದ ಸಂಗತಿಯು ಹೊರಬಿದ್ದರೆ, ಕಾಸೀಮನನ್ನು ಗತಿಗಾಣಿ ಸಬಹುದೆಂದು ಅವರು ನಿಷ್ಕರ್ಷಿಸಿದರು. ಹಾಗೆ ಅವರೀರ್ವರಲ್ಲಿ ಭೆಟ್ಟಿ ಪ್ರತಿಭೆಟ್ಟಿಯು ಯೋಗವು ಸಹಜವಾಗಿ ಆಗದಿದ್ದರೂ, ಪ್ರಯತ್ನ ಪೂರ್ವಕವಾಗಿ ಅದನ್ನು ಉಂಟು ಮಾಡಬೇಕೆಂದು ಅವರು ಗೊತ್ತು ಮಾಡಿಕೊಂಡರು. ಆತನನ್ನು ಗೊತ್ತಿಗೆ ಹಚ್ಚಲಿಕ್ಕೆ ಇದರ ಹೊರತು ಮತ್ತಾವ ಯೋಗ್ಯ ಉಪಾಯವೂ ಇಲ್ಲವೆಂದು ಜಾಫರನು ನುಡಿ ಯಲು, ಮಾದರನು:—ಖಾವಂದ, ನಾನು ನಿಮಗಾಗಿ ಅವರೀರ್ವ ರಲ್ಲಿ ಆ ಪ್ರಸಂಗವನ್ನು ಹೇಗಾದರೂ ಉಂಟು ಮಾಡುವೆನು ಶ್ರೀರಂ ಗಪಟ್ಟಣಕ್ಕೆ ನಾವು ಹೋಗುವ ವರೆಗೆ ಮಾತ್ರ ನೀವು ತಡೆಯಿರಿ. ಎಂದು ಎದೆ ತಟ್ಟಿ ಹೇಳಿದನು.

ಇತ್ತ ಜಾಫರ ಜಮಾದಾರ ಹಾಗು ಆತನ ಸಂಗಡಿಗರು ಈ ಪ್ರಕಾರ ಕಾಸೀಮನ ನಾಶದ ಸಿದ್ಧತೆ ಮಾಡುತ್ತಿರಲು, ಅದಾವ ಪಾಪವನ್ನೂ ಅರಿಯದ ಕಾಸೀಮನು ಅತ್ತ ತನ್ನ ಕೆಲಸದಲ್ಲಿ ನಿಮ ಗ್ನನಾಗಿದ್ದನು. ಅವನು ಒಂದು ದಿನ ಬೆಂಗಳೂರ ಕೋಟೆಗೆ ಹೋಗಿ ರಲು, ಅಲ್ಲಿ ಕೆಲವು ಇಂಗ್ಲಿಷ ಸೆರೆಯಾಳುಗಳು ನಿಂತುಕೊಂಡಿದ್ದು, ಅವರ ಸುತ್ತಮುತ್ತು ಎಷ್ಟೋ ಜನರು ಕಲೆತಿದ್ದರು. ಆ ಕೈದಿ ಗಳನ್ನು ಕಂಡು ಇವನಿಗೆ ಬಲು ಕೆಡಕೆನಿಸಿತು. ಇಂಗ್ಲಿಷರು ಬಹು ನೀಚರು; ಅವರಂತಹ ನೋಸಗಾರರು ಅಷ್ಟರಿಲ್ಲವೆಂದು ಅವನು ಈ

ವರೆಗೆ ಕೇಳಿ ತಿಳಿದಿದ್ದನು; ಆದರೆ ಆತನು ಇದು ವರೆಗೂ ಇಂಗ್ರಜನೊಬ್ಬನನ್ನೂ ನೋಡಿರಲಿಲ್ಲ. ಇಂದೇ ಅವನಿಗೆ ಆ ಸುಯೋಗವು ಪ್ರಾಪ್ತವಾಗಿತ್ತು. ಅವರನ್ನು ನೋಡಿ ಕಾಸೀಮನಿಗೆ ವಾಸ್ತವವಾಗಿ ದ್ವೇಷವೇ ಉಂಟಾಗಬೇಕಾಗಿತ್ತು; ಆದರೆ ಹಾಗಾಗಲಿಲ್ಲ ಯಾವನು ಹುಟ್ಟಾ ಶೂರನೂ, ದಯಾರ್ದ್ರ ಅಂತಃಕರಣಿಯೂ ಆಗಿರುವನೋ, ಅಂಥವನಿಗೆ ಶತ್ರುವಿನದೇ ಆಗಲಿ, ಮಿತ್ರನದೇ ಆಗಲಿ ವಿಪನ್ನಾವಸ್ಥೆಯು ದೃಷ್ಟಿಗೆ ಬಿದ್ದ ಕೂಡಲೆ ದಯೆ ಹುಟ್ಟುವದು ಸ್ವಾಭಾವಿಕವು. ಇಂಗ್ಲಿಷ ಕೈದಿಗಳು ಸುಮ್ಮನೆ ಅಲ್ಲಿ ನಿಂತುಕೊಂಡಿದ್ದರು ಅವರ ಸುತ್ತಮುತ್ತ ಖಾನನ ಎಷ್ಟೋ ದಂಡಾಳುಗಳು ಕಲೆತು, ನಿಷ್ಕಾರಣವಾಗಿ ಅವರಿಗೆ ಬಾಯಿಗೆ ಬಂದಂತೆ ಬೈಯುತ್ತಿದ್ದರು ಒಬ್ಬಿಬ್ಬರಂತೂ ಒಂದೆರಡು ಕಲ್ಲುಗಳನ್ನು ಕೂಡ ಅವರ ಮೇಲೆ ಎಸೆದರು ಅದನ್ನು ನೋಡಿ ಕಾಸೀಮನಿಗೆ ಸಂತಾಪವುಂಟಾಯಿತು. ಕೂಡಲೆ ಆತನು ವೇಗದಿಂದ ಹೋಗಿ ಆ ಕಲ್ಲು ಹೊಡೆದವರ ಮುಸುಡಿಯ ಮೇಲೆ ಚೆನ್ನಾಗಿ ಕುಟ್ಟಿದನು ಕಾಸೀಮನ ಆ ಔದಾರ್ಯದ ವರ್ತನವನ್ನು ಕಂಡು ಆ ಕೈದಿಗಳಲ್ಲಿಯ ಒಬ್ಬನಿಗೆ ಬಹು ಸಮಾಧಾನವೆನಿಸಿತು. ಆದರಿಂದ ಅವನು ಹಿಂದುಸ್ತಾನೀ ಭಾಷೆಯಿಂದ ಕಾಸೀಮನನ್ನು ಹತ್ತರ ಕರೆದು, ಆತನ ನ್ಯಾಯಾವರ್ತನದ ಬಗ್ಗೆ ಆಭಾರಮನ್ನಿಸಿದನು. ಆದರಿಂದಂತೂ ಕಾಸೀಮನಿಗೆ ಪರಮಾಶ್ಚರ್ಯವಾಯಿತು ನನ್ನ ಕರ್ತವ್ಯಕರ್ಮವೆಂದು ನಾನು ಮಾಡಿದ ಯಾವ ಯಃಕಶ್ಚಿತ ಕೃತಿಗೇ ಈತನು ಈ ಬಗೆಯಾಗಿ ಆಭಾರಮನ್ನಿಸಿದನೆಂದ ಬಳಿಕ, ಇಂಗ್ಲಿಷ ಕಾಫರರು ಮಹಾನೀಚರು, ಮೋಸಗಾರರು, ಉಪಕಾರಗೇಡಿಗಳು ಎಂದು ಈ ವರೆಗೆ ತಾನು ಕೇಳಿದ್ದು ಅಸತ್ಯವೆಂದೇ ಅವನ ಭಾವನೆಯಾಯಿತು. ಆ ಕೈದಿಯ ಕೂಡ ಮತ್ತೆ ಕೆಲವು ಕಾಲ ಕಾಸೀಮನು ಮಾತಾಡಿದನು. ಆಗಂತೂ

ಇಂಗ್ಲಿಷರ ವಿಷಯವಾಗಿ ಈತನ ಮನಸ್ಸಿನಲ್ಲಿ ಬಾಲ್ಯಕಾಲದಿಂದಲೂ ಮನೆಮಾಡಿಕೊಂಡಿದ್ದ ದುರಭಿಪ್ರಾಯವು ಬುಡಮಟ್ಟ ಕಿತ್ತು ಹೋಗಿ, ಅವರ ಬಗ್ಗೆ ಆದರಭಾವದ ಬೀಜಾಂಕುರವಾಯಿತು.

ಅಂದು ರಾತ್ರಿ ಅವನು ಆ ಕೈದಿಗಳ ವಿಷಯವಾಗಿ ಖಾನನ ಸಂಗಡ ಬಹಳ ಹೊತ್ತಿನ ವರೆಗೆ ಮಾತಾಡಿದನು. ಖಾನನು ಶೂರನೂ ಸರಳ ಹೃದಯದವನೂ ಇದ್ದುದರಿಂದ, ಈತನು ಇಂಗ್ಲಿಷರ ಸುಸ್ವಭಾವದ ಬಗ್ಗೆ ತಾನು ಕಂಡ ಎಷ್ಟೋ ಯುದ್ಧದೊಳಗಿನ ಇಂಗ್ಲಿಷ ಶಿಪಾಯಿಗಳ ಉದಾಹರಣೆ ಕೊಟ್ಟು ಹೇಳಿದನು. ನಾನು ಆ ಕೈದಿಗಳೊಡನೆ ಮತ್ತೊಮ್ಮೆ ಮಾತಾಡಬೇಕೆಂದಿರುವೆನು. ಇದಕ್ಕೆ ಆಕ್ಷೇಪಣೆಯುಂಟೇ? ಎಂದು ಕಾಶೀಮನು ಪ್ರಶ್ನೆ ಮಾಡಲು, "ಅಡ್ಡಿಯೇನೂ ಇಲ್ಲ; ಆದರೆ ನೀನು ಸರಳ ಹೃದಯದಿಂದ ಅವರೊಡನೆ ಮಾತಾಡಿದರೂ, ಕುಹಕರಾದ ನಮ್ಮವರಲ್ಲಿಯು ಕೆಲವರು ಸುಲ್ತಾನ ಸಾಹೇಬರಿಗೆ ಇಲ್ಲದ್ದೊಂದು ಹುಟ್ಟಿಸಿ ಚಾಡೀ ಹೇಳಬಹುದು; ಅಲ್ಲದೆ ನಾವೇ ಈ ನಮ್ಮ ಕೈದಿಗಳ ವಿಷಯವಾಗಿ ಇಷ್ಟು ಬಿಗುವಿಲ್ಲದೆ ವರ್ತಿಸಹತ್ತಿದರೆ, ನಮ್ಮ ಕ್ಷುಲ್ಲಕ ದಂಡಾಳುಗಳ ಮೇಲೆ ಇದರ ಬಗ್ಗೆ ವಿಪರೀತ ಪರಿಣಾಮವಾದೀತು. ಆದರಿಂದ ಬಲು ಎಚ್ಚರ ಪಡಬೇಕಾಗುವದು. ಇನ್ನು ನೀನು ಅವರೊಡನೆ ಮಾತಾಡುವದನ್ನೇ ನಿಶ್ಚಯಿಸಿದ್ದರೆ, ನಾಳೆ ಆ ಬಗ್ಗೆ ನಿನಗೊಂದು ಹೊಸ ಕೆಲಸವನ್ನು ನಿಯಮಿಸುವೆನು. ಇಂಗ್ಲಿಷ ಕೈದಿಗಳ ಮನವೊಲಿಸಿ, ಅವರನ್ನು ನಮ್ಮ ದಂಡಿನಲ್ಲಿಟ್ಟುಕೊಳ್ಳಲು ಪ್ರಯತ್ನ ಮಾಡುವ ದೊಂದು ಕೆಲಸಕ್ಕೆ ಟೀಪೂ ಸಾಹೇಬರ ಆಜ್ಞೆಯೇ ಇರುತ್ತದೆ. ನಾಳಿನಿಂದ ನಿನ್ನನ್ನು ಈ ಕೆಲಸಕ್ಕೇ ನಿಯಮಿಸುವೆನು; ಅಂದರೆ ಎರಡೂ ಕೆಲಸಗಳಾದಂತಾಗುವವು" ಇದನ್ನು ಕೇಳಿ ಕಾಶೀಮನಿಗೆ ಬಹಳೇ ಸಂತೋಷವಾಯಿತು.

ಮರುದಿನ ಖಾನನ ಅಪ್ಪಣೆಯ ಮೇರೆಗೆ ಕಾಸೀಮನು ಪುನಃ ಆ ಇಂಗ್ಲಿಷ ಕೈದಿಗಳ ಬಳಿಗೆ ಹೋದನು; ಹಾಗು ಹಿಂದಿನ ದಿನ ಮಾತಾಡಿದವನನ್ನು ಕರೆದು:—"ಎಲೈ ಫಿರಂಗೀ, ನೀನು ಟೀಪೂ ಸಾಹೇಬರ ಚಾಕರಿಗೆ ಇರುವದಾದರೆ, ನಿನ್ನನ್ನು ಈಗಲೇ ಬಂಧ ಮುಕ್ತ ಮಾಡುವೆನು; ಹಾಗು ಬಹುಮಾನದ ಚಾಕರಿಯನ್ನೂ ಎಷ್ಟೋ ಪುರಸ್ಕಾರವನ್ನೂ ಕೊಡಿಸುವೆನು. ನೀನು ನಿನ್ನ ಈ ಕಾಫರ ಧರ್ಮವನ್ನು ಬಿಟ್ಟುಗೊಟ್ಟು, ನಮ್ಮ ಪಂಥವನ್ನು ಸ್ವೀಕರಿಸಿದುದಾದರೆ, ನಿನಗೆ ಜಹಗೀರು ಸಹ ಕೊಡಲಾದೀತು" ಎಂದು ಅನ್ನಲು, ಆ ಕೈದಿಯು:—ಮಹಾರಾಜ, ನನ್ನ ಬಳಿಯಲ್ಲಿ ಈ ಮಾತನ್ನೆಂದೂ ತೆಗೆಯಬೇಡಿರಿ. ಇಡಿ ಜಗತ್ತಿನ ರಾಜ್ಯವನ್ನು ನನಗೆ ಕೊಡುತ್ತೇನೆಂದು ಹೇಳಿದರೂ, ನಾನು ನನ್ನ ದೇಶಕಾರ್ಯವನ್ನು ಬಿಟ್ಟುಬಿಟ್ಟು, ನಿಮ್ಮಲ್ಲಿ ಚಾಕರಿಗೆ ಇರಲಾರೆನು. ಟೀಪೂ ಸುಲ್ತಾನನಿಗೆ ನಮ್ಮ ಇಂಗ್ಲಿಷ ಜನರ ನಡಾವಳಿಯು ಚೆನ್ನಾಗಿ ಗೊತ್ತಾಗಿದೆ. ಈ ವರೆಗೆ ಅವನು ನಮ್ಮನ್ನು ಪೀಡಿಸಿದ್ದಾದರೂ ಇದಕ್ಕಾಗಿಯೇ ಎಂಬದು ನಮಗೂ ಗೊತ್ತಿದೆ. ಆತನು ನಮ್ಮನ್ನು ಪುನಃ ಶ್ರೀರಂಗಪಟ್ಟಣಕ್ಕೆ ಕರೆಯಿಸುವದಾದರೂ ನಮ್ಮ ನಿಶ್ಚಯದ ಪರೀಕ್ಷೆ ಮಾಡುವದಕ್ಕಾಗಿಯೇ. ನಮ್ಮ ನಿರಾಶಾಜನಕ ಉತ್ತರವನ್ನು ಕೇಳಿದ ಬಳಿಕ ಆತನು ನಮ್ಮನ್ನು ಕೊಲ್ಲಿಸಿ, ಈ ಅಸಹ್ಯಕರ ವೇದನೆಗಳಿಂದ ಮುಕ್ತಮಾಡುವನೆಂಬದು ಖಂಡಿತವು.

ಆ ಸೆರೆಯಾಳಿನ ಉತ್ತರವನ್ನು ಕೇಳಿ ಕಾಸೀಮನಿಗೆ ಬಹು ಕೆಡಕೆನಿಸಿತು ಆಗ ಆತನು ಸಹಜವಾಗಿ:—"ಏನಂದಿ? ಜೀವ ಕಳಕೊಳ್ಳುವಷ್ಟು ನಿನಗೆ ಇಲ್ಲಿ ತ್ರಾಸವಾಗಿದೆಯೆ?" ಇದನ್ನು ಕೇಳಿದ ಕೂಡಲೆ ಈತನು ಟೀಪುವಿನ ದಂಡಿನಲ್ಲಿ ಹೊಸದಾಗಿ ಸೇರಿದವನಿದ್ದು, ಈ ಮೈಸೂರ ಸೀಮೆಯವನಲ್ಲೆಂಬದನ್ನು ಆ ಇಂಗ್ಲಿಷ ಕೈದಿಯು

ಕಂಡು ಹಿಡಿದು, ಅವನು ಕಾಸೀಮನನ್ನು ಕುರಿತು ಆ ಬಗ್ಗೆ ಕೇಳಿ ದನು ಸಹ ಮುಚ್ಚುಮರೆ ಮಾಡದೆ, "ತಾನು ಎಲ್ಲಿಯವನು, ಇಲ್ಲಿ ಗೇಕೆ ಬಂದುದು ಮುಂತಾದುದನ್ನು ಕಾಸೀಮನು ಅವನಿಗೆ ತಿಳಿಸಿದ ನಲ್ಲದೆ, ಶ್ರೀರಂಗಪಟ್ಟಣಕ್ಕೆ ಹೋದ ಬಳಿಕ ತಾನು ಟೀಪುವಿನ ಬಳಿ ಯಲ್ಲಿ ಚಾಕರಿಗೆ ನಿಲ್ಲತಕ್ಕವನೆ''ಂಬದನ್ನು ಸಹ ತಿಳಿಸಿದನು. ಅದನ್ನು ಕೇಳಿ ಆ ಕೈದಿಯು:—ಕಾಸೀಮಸಾಹೇಬ, ನೀನು ನನ್ನ ಹಿತವಚನ ವನ್ನು ಲಾಲಿಸುವದಾದರೆ, ನೀನು ಆ ಮೈಸೂರ ಹುಲಿಯ ಚಾಕ ರಿಗೆ ಸರ್ವಥಾ ನಿಲ್ಲಬೇಡ. ನಿನ್ನಂಥ ಸದಯಾಂತಃಕರಣದವನಿಗೆ ಆ ದುರಭಿಮಾನಿಯ ಚಾಕರಿಯು ತಕ್ಕದ್ದಲ್ಲ. ನೀನು ಇನ್ನು ಆತನ ಕೈಯಾಳಾಗಿರದ್ದರಿಂದ, ನೀನು ಇಲ್ಲಿಂದಲೇ ಓಡಿ ಹೋಗಿ ಬೇರೆ ಉದ್ಯೋಗಕ್ಕೆ ಹತ್ತು. ನಮ್ಮ ಇಂಗ್ಲಿಷ ದಂಡಿನಲ್ಲಿ ಹೋದರೆ ನಿನಗೆ ಉತ್ತಮವಾದ ಕೆಲಸವು ದೊರೆಯುವದು. ನೀನು ಹೋಗುವದೇ ಆದರೆ, ನನಗೆ ತಿಳಿಸು. ನಾನು ನಿನಗೆ ಎರಡು ಪತ್ರಗಳನ್ನು ಸಹ ಬರಕೊಡುವೆನು. ಅವುಗಳನ್ನು ನೀನು ಮದ್ರಾಸದಲ್ಲಿಯ ನಮ್ಮ ದಂಡಿನ ಮುಖ್ಯಸ್ಥನಿಗೆ ತಲುಪಿಸಿದರೆ, ನೀನು ಇಚ್ಛಿಸಿದರೆ, ನಿನಗೆ ಅಲ್ಲಿ ಚಲೋ ಚಾಕರಿ ಸಿಗಬಹುದು; ಇಲ್ಲವೆ ಯೋಗ್ಯವಾದ ಬಹುಮಾನವಾದರೂ ದೊರೆಯುವದು. ಈ ಪತ್ರಗಳನ್ನು ತಲುಪಿ ಸಿದರೆ ನಿನ್ನ ಕೆಲಸವಾಗುವದಲ್ಲದೆ, ಅಲ್ಲಿಂದ ಬೇರೆ ದಂಡು ಬಂದು, ನಮ್ಮನ್ನು ಬಂಧಮುಕ್ತಗೊಳಿಸಿದ ಶ್ರೇಯಸ್ಸು ನಿನಗೆ ಪ್ರಾಪ್ತ ವಾಗುವದು; ಹಾಗು ಈಶ್ವರನು ನಿನ್ನ ಕಲ್ಯಾಣವನ್ನು ಮಾಡುವನು.

ಆಗ ಕಾಸೀಮನು ಗಟ್ಟಿಯಾಗಿ:—ಫಿರಂಗೀ, ನಿನ್ನ ಈ ನುಡಿ ಯನ್ನು ಕೇಳಿ ನನಗೆ ಬಹು ಖೇದವೆನಿಸುತ್ತದೆ; ಆದರೆ ನಿಮ್ಮ ಇಂಗ್ಲಿಷ ಜಾತಿಯನ್ನು ನಾನು ಬಹಳವಾಗಿ ದ್ವೇಷಿಸುತ್ತೇನೆಂಬ ದನು. ನೀನು ಚನ್ನಾಗಿ ಲಕ್ಷ್ಯದಲ್ಲಿಡು. ರಣಾಂಗಣದಲ್ಲಿ ಯಾವಾಗ

ನಿಮ್ಮೊಡನೆ ಕೈಗೆ ಕೈ ಹತ್ತಿ ಕಾದುವ ಪ್ರಸಂಗ ಬಂದೀತೋ? ಎಂದು ನಾನು ದಾರೀ ಕಾಯುತ್ತಲಿದ್ದೇನೆ; ನಿಮ್ಮೊಡನೆ ಕಾದುವ ನನ್ನ ತಿಂಡಿಯನ್ನು ತೀರಿಸಿಕೊಳ್ಳುವದಕ್ಕಾಗಿಯೇ ನಾನು ಟೀಪುವಿನಲ್ಲಿ ಚಾಕರಿ ನಿಲ್ಲುತ್ತಿರುವೆನು. ನಾನು ಜಾತಿಯಿಂದ ಮುಸಲ್ಮಾನನು. ನನ್ನ ಬಳಿಯಲ್ಲಿ ಫಿರಂಗಿಯರ ಚಾಕರಿ ಮಾಡುವ ಮಾತನ್ನೆತ್ತಬೇಡ. ನಿನ್ನ ಪತ್ರಗಳನ್ನೇ ಕಳಿಸುವದಾದರೆ, ನಾನು ನಮ್ಮ ಖಾನಸಾಹೇಬರನ್ನು ಕೇಳಿ ಅವುಗಳನ್ನು ಕಳಿಸುವೆನು

"ನಮ್ಮನ್ನು ಯುದ್ಧದ ಒಡಂಬಡಿಕೆಯು ಕರಾರಿನಂತೆ ಕೂಡ ನಡಿಸಿಕೊಳ್ಳಲು ಸಮರ್ಥನಿಲ್ಲದ ನಿಮ್ಮ ಖಾನನು, ನಮ್ಮ ಪತ್ರಗಳನ್ನು ನಮ್ಮವರಿಗೆ ತಲುಪಿಸಲು ಸಮ್ಮತಿಸುವನೇ? ಇದು ಕೇವಲ ಅಸಂಭವದ ಮಾತು" ಎಂದು ಸೆರೆಯಾಳು ತೀರ ದೈನ್ಯವಾಣಿಯಿಂದ ನುಡಿಯಲು, ಅದನ್ನು ಕೇಳಿ ಕಾಸೀಮನಿಗೆ ಬಹಳ ದುಃಖವಾಯಿತು. ಆಗ ಆತನು:- ಶಕ್ಯವಾದರೆ ನಾನೇ ನಿನ್ನ ಪತ್ರಗಳನ್ನು ಸುರಕ್ಷಿತವಾಗಿ ಮುಟ್ಟಿಸುವ ವ್ಯವಸ್ಥೆ ಮಾಡುವೆನು. ಈ ಬಗ್ಗೆ ನೀನು ಕೊಂಚವೂ ಚಿಂತಾಧೀನನಾಗಬೇಡ, ಎಂದು ಹೇಳಿ, ಅಲ್ಲಿಂದ ಬೇರೆ ಕಡೆಗೆ ನಡೆದನು

ಬೆಂಗಳೂರಿಂದ ಹೊರಟ ಐದನೇ ದಿನವೇ ಖಾನನ ದಂಡು ಶ್ರೀರಂಗಪಟ್ಟಣಕ್ಕೆ ಬಂದು ಸೇರಿತು ಅಲ್ಲಿಗೆ ಹೋದ ಕೆಲವು ಗಳಿಗೆಗಳಲ್ಲೇ ಟೀಪುವಿನ ನಾಲ್ಕಾರು ಅನನ್ವಿತ ಕೃತ್ಯಗಳು ಕಾಸೀಮನ ಕಣ್ಣಿಗೆ ಬಿದ್ದವು ಅವುಗಳನ್ನು ಕಂಡು ಆತನ ಮೈ ನಡುಗಿತು. ಆಗ ಟೀಪೂ ಸುಲ್ತಾನನು ತನ್ನ ಕುದುರೆಯ ಮೇಲೆ ಕುಳಿತು ಒಬ್ಬನೇ ದಾರಿ ಹಿಡಿದು ನಡೆಯುತಿರಲು, ಒಂದು ಬೆದರಿದ ಆಳು ಆತನ ಕಡೆಗೆ ಟಕಮಕವಾಗಿ ನೋಡುತ್ತ ನಿಂತಿತು ಅದನ್ನು ನೋಡಿ ಟೀಪುವಿನ ಪಿತ್ತವು ತಲೆಗೇರಿತು! ಅವನು "ಎಲ ನಿನ ಕೊಯ್ಯಲಿ. ನನ್ನ ಕಡೆಗ

ದಿಟ್ಟಿಸಿ ನೋಡುವಷ್ಟು ಸೊಕ್ಕು ನಿನಗೆ ಬಂತೇ? ತಾರಲೆ ಬರ್ಚಿಯನ್ನು'' ಎಂದಂದವನೇ, ತನ್ನ ಕುದುರೆಯನ್ನು ಆದರ ಕಡೆಗೆ ತಿರುಗಿಸಿ ಬೆನ್ನಟ್ಟಿದನು; ಹಾಗು ತುಸ ಹೊತ್ತಿನಲ್ಲಿಯೇ ಆ ಗೋವಿಗೆ ೨-೩ ಸಾರೆ ಬರ್ಚಿಯಿಂದ ತಿವಿದು, ಅದನ್ನು ನೆಲಕ್ಕೆ ಕೆಡವಿದನು. ಶ್ರೀರಂಗನಾಥ ದೇವಾಲಯದ ಹತ್ತಿರವೇ ಈ ಪ್ರಕಾರವು ನಡೆದುದರಿಂದ, ಅಲ್ಲಿ ಜನರು ಕಲೆಯುವದಕ್ಕೆ ವಿಲಂಬವೇ? ಮುಸಲ್ಮಾನೀ ರಾಜ್ಯವಾದುದರಿಂದ ಆಗ ಆ ಪಟ್ಟಣದಲ್ಲಿ ಮುಸಲ್ಮಾನರ ವಸತಿಯೇ ಬಹಳ. ಮುಸುಲರಿಗೆ ಗೋಹತ್ಯೆಯಿಂದ ಏನೆನಿಸಬೇಕಾಗಿದೆ? ಅವರಿಗೆ ದುಃಖವಾಗುವ ಬದಲು ಆನಂದವೇ ಆಯಿತು. ಪ್ರತ್ಯಕ್ಷ ಟೀಪೂ ಸುಲ್ತಾನನೇ ತನ್ನ ಕೈಮುಟ್ಟಿ ಗೋಹತ್ಯೆ ಮಾಡಲುದ್ಯುಕ್ತನಾಗಿರುವಾಗ, ಆ ಪರಮ ಪುಣ್ಯಕರ ಕೆಲಸಕ್ಕೆ ಸಹಾಯನಾಗದ ಮುಸಲ್ಮಾನನು ಉಳಿಯುವದು ಹೇಗೆ? ತುಸ ಹೊತ್ತಿನಲ್ಲಿಯೇ ಆ ಆಕಳ ಸುತ್ತಮುತ್ತು ನೂರಾರು ಜನ ಅಧಃಕೇಶಿಗಳಾದ ಯುವನರು ಕೂಡಿದರು. ಟೀಪುವು ಆ ಆಕಳಿಗೆ ಹಿಮ್ಮೆ ಚನ್ನಾಗಿ ಬರ್ಚಿ ಚುಚ್ಚಬೇಕು. ಅದರಿಂದ ಅದು ದೊಡ್ಡ ದನಿ ತೆಗೆದು ಹಿದರಬೇಕು, ಆದರ ಗಾಯದಿಂದ ''ಚಿಲ್-ಚಿಲ್'' ಎಂದು ನೆತ್ತರವು ಪುಟಿಯಬೇಕು, ಕೆಲ ಹೊತ್ತು ಸುಮ್ಮನಿರಬೇಕು, ಮತ್ತೆ ಟೀಪುವು ಬರ್ಚಿಯಿಂದ ಅದಕ್ಕೆ ಗಾಯ ಮಾಡಬೇಕು, ಮತ್ತೆ ನೆತ್ತರ ಪುಟಿಯಬೇಕು! ಹೀಗೆ ಅನನ್ವಿತ ರೀತಿಯಿಂದ ಆ ಗೋಮಾತೆಯನ್ನು ಆ ಯುವನರು ಕೊಲ್ಲುತ್ತಿದ್ದರು.

ಇಷ್ಟರಲ್ಲಿ ಅದೇ ಪೇಟೆ ಹಿಡಿದು ನಡೆದಿದ್ದ ಹಿಬ್ಬ ಕರ್ಮಠ ಹಾರುವನು, ಇದೇನು ಗದ್ದಲವೆಂದು ಆ ಜನಸಮ್ಮರ್ದದೊಳಗೆ ಸೇರಿದನು. ಆತನು ಇನ್ನೂ ಮಡಿಯಾಗಿರಲಿಲ್ಲ; ಆದರೂ ತನ್ನ ಯಜಮಾನನ ಮನೆಗೆ ನಡೆದಿದ್ದರಿಂದ ಬರಿಯ ಮೈಯಿಂದಿದ್ದು,

ಕೈಯಲ್ಲಿ ಪಂಚಪಾತ್ರೆ, ಉದ್ಧರಣೆ, ಪಂಚೆ ಮುಂತಾದ ಉಪಕರಣ ಗಳನ್ನು ಧರಿಸಿದ್ದನು. ಆ ಭಟ್ಟನನ್ನು ಕಂಡು ಅಲ್ಲಿಯ ಹುಸೇನ ದೀಕ್ಷಿತರಿಗೆ ಬಲು ಮೋಜೆನಿಸಿತು. ಕೂಡಲೆ ಅವರಲ್ಲಿಯ ಕೆಲವರು ಉಳಿದವರನ್ನು ಕುರಿತು:— "ಮಿಂಯಾ, ಏ ಭಟಜೀಕೂ ಜಗಾ ದೇವ, ಮಿಂಯಾ, ಏ ಭಟಜೀಕೂ ಜಗಾ ದೇವ" ಎಂದು ಕುಚೇಷ್ಟೆ ಯಿಂದ ನುಡಿದು, ಆ ಭಟ್ಟನನ್ನು ಆ ಹಿಂಸ್ರಾವಶವಾಗಿದ್ದ ಗೋ-ಮಾತೆಯ ಬಳಿಗೆ ನೂಕಿದರು. ಆ ಗೋವಿನ ಅವಸ್ಥೆಯು ಕಣ್ಣಿಗೆ ಬಿದ್ದ ಕೂಡಲೆ ಆತನು ತನ್ನ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿ ಕೊಂಡು, ದೊಡ್ಡ ದನಿಯಿಂದ:— "ಪ್ರಭೋ, ರಂಗನಾಥಾ! ಈ ಗೋ-ಬ್ರಾಹ್ಮಣರ ಛಲವನ್ನು ನೀನು ಎಷ್ಟೆಂದು ಸಹಿಸುವೆ? ನಾರಾ ಯಣಾ, ನಿನ್ನ ವಚನವನ್ನು ನೀನು ಮರೆತೆಯಾ? ದೇವಾ, ನೀನೆಲ್ಲಿ ಯಾದರೂ ಅಡಗಿಕೊಂಡಿಲ್ಲವಷ್ಟೇ?" ಎಂದು ಅಂದನು.

ಅವನು ಆ ಶಬ್ದಗಳನ್ನು ಬಹು ಗಟ್ಟಿಯಾಗಿ ನುಡಿದುದರಿಂದ, ಆ ಘೋರಕ್ರೀಡೆಯಲ್ಲಿ ರತನಾಗಿದ್ದ ಟೀಪುವಿಗೆ ಕೂಡ ಅವು ಕೇಳಿಸಿ ದವು. ಕೂಡಲೆ ಆತನು "ಕೌನ್, ಬಮ್ಮನ್ ಆಯಾ ಕ್ಯಾ! ಪಕಡೋ ಸಾಲೇಕೂ!!" ಎಂದು ಹುಕುಮು ಮಾಡಿದನು. ಉತ್ತರ ಕ್ಷಣದ ಲ್ಲಿಯೇ ಆ ಹಾರುವನು ಆ ಗೋವಿನ ಬಳಿಗೆ-ಸುಲ್ತಾನನ ಎದುರಿಗೆ-ಹಿಡಿಯಲ್ಪಟ್ಟನು. ಟೀಪುಸುಲ್ತಾನನು ತನ್ನ ಕೈಮುಟ್ಟ ಆತನ ಪಂಚ ಪಾತ್ರೆಯಲ್ಲಿ ಆ ಗೋವಿನ ರಕ್ತವನ್ನು ತುಂಬಿ, ಅದನ್ನು ಆತನ ಬಾಯಿಗೆ ಹತ್ತಿ ಹಿಡಿದನು! ಹರಹರಾ! ಈ ಶಬ್ದಗಳನ್ನು ಬರೆಯು ವಾಗ ಕೂಡ ಮೈಮೇಲೆ ಮುಳ್ಳೇಳುತ್ತವೆ; ಅಂದಮೇಲೆ ಆ ಕೃತಿಯು ಪ್ರತ್ಯಕ್ಷ ನಡೆದಾಗ ಆ ಬಡ ಭಿಕ್ಷುಕನಿಗೇನೆನಿಸಿರಬಹುದೆಂಬದನ್ನು ನಮ್ಮ ಸನಾತನಧರ್ಮಾಭಿಮಾನಿಗಳಾದ ಹಿಂದುಗಳೆ ತರ್ಕಿಸಿಕೊಳ್ಳಲಿ!

ಆ ಬ್ರಾಹ್ಮಣನು ತನ್ನ ತುಟಿ ಹಾಗು ಕಣ್ಣುಗಳನ್ನು ಹತ್ತಿ

ಹಿಡಿದಿದ್ದನು; ಕೂಗಲಿಕ್ಕೆ ಕೂಡ ಅವನಿಗೆ ಅವಕಾಶವಿರಲಿಲ್ಲ. 'ಆ ಪವಿತ್ರ ಗೋಮಾತೆಯ ರಕ್ತವನ್ನು ಆ ಶಿಖಾನಷ್ಟಯವನರು ಬಾಯಿ ತೆರೆದರೆ ಸುರುವುತ್ತಾರೆ! ಪ್ರಾಣ ಹೋದರೂ ಚಿಂತೆಯಿಲ್ಲ; ಬಾಯಿ ಹಾಗು ಕಣ್ಣು ತೆರೆಯಲಿಕ್ಕಿಲ್ಲೆ'ಂದು ಮನಸ್ಸಿನಲ್ಲಿ ನಿಶ್ಚಯಿಸಿ, ಆತನು ಹಾಗೆಯೇ ನಿಂತುಕೊಂಡನು. ಹೀಗೆಯೇ ನಿಂತರೆ ಈತನು ಬಾಯಿ ತೆರೆಯುವದಿಲ್ಲೆಂದು ತಿಳಿದು, ಸುಲ್ತಾನನು ಆತನ ಹೊಂದುಟಿಗೂ ಮುಖಕ್ಕೂ ಆ ರಕ್ತವನ್ನು ತೊಡೆದನು. ಬಳಿಕ ಇಬ್ಬರು-ಮೂವರು ಯವನರು ಸೇರಿ, ಆ ಹಾರುವನ ಬಾಯಿ ತೆರೆದು ಅದರಲ್ಲಿ ಆ ಪಂಚಪಾತ್ರೆಯೊಳಗಿನ ಆ ಪವಿತ್ರ ರಕ್ತವನ್ನು ಸುರುವಿದರು. ಕೆಲವರು ಇನ್ನು ಈತನ ಮುಂಡನ ಮಾಡಿಸಿ, ಈತನಿಗೆ ಮುಸಲ್ಮಾನೀಧರ್ಮದ ದೀಕ್ಷೆ ಕೊಡಿಸಬೇಕೆಂದು ಆತನನ್ನು ಮಸೀದಿಗೆ ಎಳೆದೊಯ್ದರು!

ಟೀಪುವಿನ ಈ ಅತ್ಯಂತ ದುರಾಗ್ರಹದ ವರ್ತನವನ್ನು ಕಂಡು, ಪೂರ್ಣಕಾಸೀಮನಿಗೆ ಬಹು ಖೇದವೆನಿಸಿತು. ಆತನು ಜಾತಿಯಿಂದ ಮುಸಲ್ಮಾನನೇ ಆಗಿದ್ದರೂ, ಅವನು ಸದಯಾಂತಃಕರಣಿಯೂ ಪರಧರ್ಮ ಸಹಿಷ್ಣುವೂ ಆಗಿದ್ದನು. ಆ ಪ್ರಕಾರವನ್ನು ನೋಡಿ ಅವನಿಗೆ ಇಂಗ್ಲಿಷ ಕೈದಿಯು ಹೇಳಿದ ಸಂಗತಿಯು ತಟ್ಟನೆ ನೆನಪಾಯಿತು. ಈ ಕ್ರೂರ ಟೀಪುವು ತನ್ನ ನಿರಪರಾಧಿ ಪ್ರಜೆಗಳನ್ನೇ ಈ ಬಗೆಯಾಗಿ ಪೀಡಿಸುತ್ತಿರುವನೆಂದ ಬಳಿಕ, ವೈರಿಗಳ ಕಡೆಯವರಾದ ಆ ಕೈದಿಗಳನ್ನು ಇವನು ಹೇಗೆ ನಡಿಸಿಕೊಳ್ಳುವನೆಂಬದು ಮೇಲೆಯೇ ಕಾಣಿಸುತ್ತದೆಂದು ಕಾಸೀಮನು ಸುಮ್ಮನಾದನು. ಇನ್ನು ನಾವು ಕಾಸೀಮನ ಇಲ್ಲವೆ ಖಾನ-ಖಾನಮುಳ ಅಥವಾ ಆತನ ಪ್ರಥಮ ಪತ್ನಿಯರ ಸಂಬಂಧದ ಸಂಗತಿಯನ್ನು ವಿವರಿಸುತ್ತ ಕೂಡ್ರದೆ, ಶ್ರೀರಂಗಪಟ್ಟಣದೊಳಗಿನ ಟೀಪು ಸುಲ್ತಾನನ ಹಿಂದಾನೊಂದು ದರ್ಬಾರದ ಸಂಗತಿಯನ್ನು ನಮ್ಮ ವಾಚಕರಿಗೆ ನಿವೇದಿಸುವೆವು.

# ಟೀಪೂಸುಲ್ತಾನನ ದರ್ಬಾರ.



ಕಾಸೀಮನಂಥ ಹಟ್ಟಾ ಸಲಕ್ಷಣ ಪುರುಷನು, ಉತ್ತಮ ಪೋಷಾಕಿನಿಂದ ಸಜ್ಜಾದ ಬಳಿಕ, ಆತನು ಹೆಚ್ಚೇ ಸುಂದರನಾಗಿ ತೋರಹತ್ತಿದ್ದರಲ್ಲಿ ಸೋಜಿಗವೇನು? ಆತನು ಅಂದು ಹಾಗೆ ಸಜ್ಜಾಗಿ ತನ್ನ ಕುದುರೆಯನ್ನು ಹತ್ತಿ ನಡೆದಿರಲು, ಓಣಿಯೊಳಗಿನ ಜನರು ಆತನನ್ನು ಮಿಕಿ ಮಿಕಿ ನೋಡಹತ್ತಿದರು. ಹೆಂಗಳೆಯರಂತೂ ಮಹಡಿಯ ಕಿಟಕಿಗಳೊಳಗಿಂದ ಆತನ ಸುಂದರರೂಪವನ್ನು ನೋಡಿ, ಅದು ಮರೆಯಾಗಲು ಆ ಸುಕುಮಾರನಿಗೆ ದೃಷ್ಟಿಯಾಗಬಾರದೆಂದು ಅವರು ತಮ್ಮ ಗಲ್ಲಗಳಿಗೆ ಬೊಟ್ಟುಗಳನ್ನು ಮುರಿಯುತ್ತಿದ್ದರು! ಕಾಸೀಮನು ಯಾವ ಸ್ಥಳದಲ್ಲಿರುತ್ತಿದ್ದನೋ ಅಲ್ಲಿಂದ, ಮೇಲೆ ಹೇಳಿದಂತೆ ಸಜ್ಜಾಗಿ ಅವನು ಅಬ್ದುಲ್ ರಹಿಮಾನಖಾನನ ಬಿಡಾರಕ್ಕೆ ಸಾಗಿದ್ದನು ಅಂದು ಟೀಪುಸುಲ್ತಾನನ ದೊಡ್ಡ ದರಬಾರವಿತ್ತು; ಮತ್ತು ಅಂದೇ ಕಾಸೀಮನನ್ನು ಟಿಪ್ಪುಸುಲ್ತಾನನಿಗೆ ನಜರು ಮಾಡಬೇಕೆಂದು ಖಾನನು ಬೇತು

ಮಾಡಿಕೊಂಡಿದ್ದನು. ಅದಕ್ಕಾಗಿಯೇ ಕಾಸೀಮನು ಖಾನನ ಸೂಚನೆಯ ಮೇರೆಗೆ ಅಂದು ಅಷ್ಟು ಡೌಲಿನ ಪೋಷಾಕನ್ನು ಧರಿಸಿದ್ದನು. ಖಾನನ ಮನೆಗೆ ಹೋದ ಬಳಿಕ, ಖಾನನು ಹೊರಗೆ ಬರಲು ಅವಕಾಶವಿರಬಹುದೆಂಬದನ್ನು ತಿಳಿದು, ಇನ್ನು ತುಸ ಹೊತ್ತಿಗಾಗಿ ದಿವಾಣಖಾನೆಗೆ ಹೋಗಿ ಕೂಡ್ರುವದಕ್ಕಿಂತ, ಇಲ್ಲಿಯೇ ಅಡ್ಡಾಡಿದರೆ ತೀರಿತೆಂದು ಬಗೆದು, ಅವನು ಅತ್ತಿಂದಿತ್ತ-ಇತ್ತಿಂದತ್ತ ಅಡ್ಡಾಡಲಾರಂಭಿಸಿದನು.

ಇಷ್ಟರಲ್ಲಿ ಎದುರಿಗಿನ ಮಹಾಲಿನ ಮೇಲಂತಸ್ತಿನ ಕಿಟಕಿಯು ಸೂಕ್ಷ್ಮವಾದ ಪರದೆಯ ಮರೆಗೆ ನಿಂತ ಹೆಣ್ಣುಮಕ್ಕಳು ತನ್ನನ್ನೇ ನೋಡುತ್ತಿರುವಂತೆ ಅವನಿಗೆ ಭಾಸವಾಯಿತು. ಹೀಗೆ ಭಾಸವಾದೊಡನೆಯೇ ಅವನ ಮನಶ್ಚಕ್ಷುಗಳ ಮುಂದೆ ಅಮೀನೆಯ ಮೂರುತಿಯು ಚಲಿಸಲಾರಂಭಿಸಿತು. ಆ ಮೂರ್ತಿಯು ಕಾಲ್ಪನಿಕ ಚಿತ್ರದೊಂದಿಗೆ, ಅದು ತನಗೆ ಯಾವ ದಿವಸ ಎಲ್ಲಕ್ಕೊ ಮೊದಲು ಕಣ್ಣಿಗೆ ಬಿದ್ದಿತ್ತೋ-ಆಗಿನಿಂದ ಈವರೆಗಿನ ಎಲ್ಲ ಸಂಗತಿಗಳೂ ಅವನ ಕಣ್ಣಿಗೆ-ಸಿನೇಮಾದೊಳಗಿನ ಚಿತ್ರಪಟದಂತೆ ಹಿಂದರಹಿಂದೊಂದು ಕ್ರಮವಾಗಿ ಕಾಣಹತ್ತಿದವು. ಅಮೀನೆಯ ಸವತಿಯರು ಅವಳ ಕೂಡ ಹೇಗೆ ವರ್ತಿಸುತ್ತಿರಬಹುದು? ಆಕೆಗೆ ಅವರಿಂದ ಪೀಡೆಯಾಗುವದೋ ಹೇಗೆ? ಮುಂತಾದ ಎಷ್ಟೋ ವಿಚಾರಗಳು ಆತನ ಮನಸ್ಸಿನಲ್ಲಿ ಬಂದುದರಿಂದ, ಅವನು ಚಿಂತಾಕ್ರಾಂತನಾದನು. ಇಷ್ಟರಲ್ಲಿ ಖಾನನು "ಓಹೋಹ್ಹೋ! ವಾಹವ್ವಾ! ವಾಹವ್ವಾ!! ಕ್ಯಾ ಅಜಬ ಬಾತಹೈ!" ಎಂದು ಒದರುತ್ತ ಅಲ್ಲಿಗೆ ಬಂದೇ ಬಿಟ್ಟನು. ಅದರಿಂದ ಕಾಸೀಮನ ಮನಸ್ಸು ಅಮೀನೆಯ ವಿಷಯಕವಾದ ವಿಚಾರದಿಂದ ಪರಾವೃತ್ತವಾಯಿತು.

ಖಾನನು ಕಾಸೀಮನ ಹತ್ತರ ಬಂದು ಆತನನ್ನು ದಿಟ್ಟಿಸಿ

ನೋಡಿ:—ವಾಹವ್ವಾ, ವಾಹವ್ವಾ! ಶಾಬಾಸ, ಶಾಬಾಸ! ನಿನ್ನ ಪೋಷಾಕಂತೂ ಒಳ್ಳೇ ಮನೋಹರವಾಗಿದೆ; ಆದರೆ ನೀನು ಕುದುರೆಯನ್ನು ಹೇಗೆ ಹತ್ತುವೆ? ಹತ್ತು ನೋಡೋಣ! ಎಂದನು. ಕೂಡಲೆ ಕಾಸೀಮನು ತನ್ನ ಕುದುರೆಯನ್ನು ಹತ್ತಿ, ಒಂದೆರಡು ಫರ್ಲಾಂಗು ಭರದಿಂದ ಹೋಗಿ ಬಂದ ಬಳಿಕ, ಖಾನನೂ ತನ್ನ ಕುದುರೆಯನ್ನು ಏರಿ ಆತನೊಡನೆ ದರಬಾರಿಗೆ ನಡೆದನು. ಅಲ್ಲಿಂದ ಹೊರಡುವಾಗ ಅವಿಖನೆಯು ಎಲ್ಲಿಯಾದರೂ ಕಾಣುವಳೋ-ಇಲ್ಲವೋ? ಎಂದು ಕಾಸೀಮನು ಆ ಮಹಡಿಯ ಕಿಟಕಿಯ ಕಡೆಗೆ ಒಮ್ಮೆ ಓರೆ ನೋಟದಿಂದ ನೋಡಿದನು. ಅದೇ ಕಾಲಕ್ಕೆ ಆ ಕಿಟಕಿಯ ಪರದೆಯನ್ನು ಸರಿ ಮಾಡುವ ಉದ್ದೇಶದಿಂದ ಒಬ್ಬಳು ಹೊರಗೆ ಮೋರೆ ಮಾಡಿ ಕಾಸೀಮನ ಕಡೆಗೆ ನೋಡಿದಳು. ಆ ಮೂರ್ತಿಯು ಅವಿಖನೆಯದಾಗಿರಲಿಲ್ಲ. ಆಕೆಯು ಕಪ್ಪು ವರ್ಣದವಳಾಗಿದ್ದರೂ, ತೇಜಃಪುಂಜ ಮುಖಕಾಂತಿಯುಳ್ಳವಳೂ ನಡುಹರೆಯದವಳೂ ಆಗಿದ್ದಳು. ಮತ್ತೊಮ್ಮೆ ಅತ್ತ ಇಣಿಕಿ ನೋಡುವಷ್ಟು ಅವಕಾಶ ಕೂಡ ಸಿಗದ್ದರಿಂದ, ಕಾಸೀಮನು ಖಾನನೊಡನೆ ನಿರುಪಾಯದಿಂದ ಹೊರಹೊರಟನು. ಅಂದಿನ ದರ್ಬಾರು ದಯಾರ್-ಇ-ದೌಲತ್ತ ಬಾಗದೊಳಗೆ ಇದ್ದ ಕಾರಣ ಅವರೀರ್ವರೂ ಅತ್ತ ಕಡೆಗೇ ನಡೆದರು.

ಅಲ್ಲಿಯ ಆಮ ದಿವಾಣವೆಂಬ ದರಬಾರ ಗೃಹವನ್ನು ಹೈದರ ಅಲ್ಲಿಯೇ ಕಟ್ಟಿಸಿದ್ದನು. ಶಿಲ್ಪಿಗರ ಕಸಬುಗಳ ನಿದರ್ಶನವು ಒಡೆದು ಕಾಣಿಸಬೇಕೆಂದೇ ಅವನು ಅದನ್ನು ಅಷ್ಟು ಮನೋಹರವಾಗಿ ತಯಾರಿಸಿದ್ದನು. ಅದನ್ನು ನೋಡಲಿಕ್ಕೆ ಹೋದ ಪ್ರತಿಯೊಬ್ಬ ಮನುಷ್ಯನೂ ಈ ಸ್ಥಳಕ್ಕೆ ದಯಾರ್-ಇ-ದೌಲತ್ ಅಂದರೆ "ಸಂಪತ್ತಿನ ಸಾಗರ" ಎಂದಿಟ್ಟ ಹೆಸರು ಚೆನ್ನಾಗಿ ಒಪ್ಪುತ್ತದೆಂದು ಒಡಂಬಡುವನು. ಆ ದಿವಾಣಖಾನೆಯನ್ನು ಹೊರಗೆ ನಿಂತು ಎಷ್ಟು ವರ್ಣಿಸಿ

ದರೂ, ಅದರ ನಿಜವಾದ ಕಲ್ಪನೆಯು ವಾಚಕರ ಮನಸ್ಸಿನ ಮೇಲೆ ಬಿಂಬಿಸಲಾರದು! ಅದೊಂದು ಶ್ರೇಷ್ಠವಾದ ಪ್ರೇಕ್ಷಣೀಯ ಸ್ಥಳ ವಾಗಿರುತ್ತದೆ

ಆ ದಿವಾಣಖಾನೆಯ ಒಳಗೆ ಪ್ರವೇಶಿಸಿದೊಡನೆ ಅಲ್ಲಿಯ ಭವ್ಯವಾದ ಗೋಡೆಗಳ ಮೇಲೆ ಬರೆದ ಚಿತ್ರಗಳು ವಿಲಕ್ಷಣವಾಗಿ ತೋರುತ್ತಿದ್ದವು. ಇಂಗ್ರಜರು ತಮ್ಮ ಕೈಯಲ್ಲಿ ಸಿಕ್ಕಾಗ, ಮುಸಲ್ಮಾನರು ಅವರನ್ನು ಹೇಗೆ ಪೀಡಿಸುವರೆಂಬದು ವ್ಯಕ್ತವಾಗುವಂತೆ ಒಂದು ಚಿತ್ರದಲ್ಲಿ ತೋರಿಸಿತ್ತು. ಇಂಥವೇ ವಿಧ-ವಿಧದ ಚಿತ್ರಗಳು ಅಲ್ಲಿ ಚೆನ್ನಾಗಿ ಚಿತ್ರಿಸಲ್ಪಟ್ಟಿದ್ದವು. ಅವನ್ನು ನೋಡಿ ಕಾಸೀಮನಿಗೆ ನಗೆಯೂ ಬರಲಿಲ್ಲ. ವಿಶೇಷ ಖೇದವೂ ಅನಿಸಲಿಲ್ಲ. ಯಾಕಂದರೆ, ಟೀಪುವಿನ ಅನನ್ವಿತ ಕೃತ್ಯಗಳು, ಅಲ್ಪಮಟ್ಟಿಗಾದರೂ ಅವನಿಗೆ ಈ ಮೊದಲಿನಿಂದಲೇ ಮೈಯುಂಡಂತಾಗಿದ್ದವು.

ದರಬಾರದ ದಿವಾಣಖಾನೆಯ ಒಳಗೆ ಹೋದ ಕೂಡಲೆ ಭಾಲದಾರ-ಚೋಪದಾರರು ಲಲ್‌ಕಾರ ಮಾಡಹತ್ತಿದರು. ಎದುರಿಗೆ ಎತ್ತರವಾದ ಸಿಂಹಾಸನದ ಮೇಲೆ ಕುಳಿತಿದ್ದ ಭವ್ಯವಾದ ಟೀಪೂ ಸುಲ್ತಾನನ ಮೂರ್ತಿಯು ದ್ವಾರಪ್ರದೇಶದಿಂದಲೇ ಕಾಣಿಸಹತ್ತಿತು; ಹಾಗು ಈ ಮೊದಲನೇ ದಿವಸ ಆಕಳನ್ನು ಕೊಂದು, ಹಾರುವನನ್ನು ವಿಟಂಬನೆಗೊಳಿಸಿದವನು ಇವನೇ ಎಂಬದು ಕಾಸೀಮನ ಸ್ಮರಣಕ್ಕೆ ಬಂದಿತು. ಸುಲ್ತಾನನು ಈಗ ಸಾದಾ ಪೋಷಾಕನ್ನು ಧರಿಸಿದ್ದನು. ಅವನು ತೀರ ಸಾದಾ ಪೋಷಾಕು ಧರಿಸಿದ್ದರಿಂದ, ಬರೇ ಪೋಷಾಕಿನ ಮೇಲಿಂದ ಇವನೇ ಟೀಪೂಸುಲ್ತಾನನೆಂಬದು ಹೊಸ ಜನರಿಗೆ ತಿಳಿಯುವಂತಿರಲಿಲ್ಲ. ಸಿಂಹಾಸನದ ಎಡಬಲಕ್ಕೆ ಎರಡು ಶುಲ್ಕ ಮೈಬಣ್ಣದ ಇಂಗ್ಲಿಷ ಹುಡುಗರು ನಿಂತಿದ್ದು, ಅವರು ಟೀಪುವಿನ ಮೇಲೆ ಬಿಳೀ ಚಾಮರಗಳನ್ನು ಬೀಸುತ್ತಿದ್ದರು ಈ ಹುಡುಗರನ್ನು

ತೀರ ಬಾಲ್ಯಾವಸ್ಥೆಯಲ್ಲಿಯೇ ಶತ್ರುಗಳಿಂದ ಹಿಡಿತಂದು, ಅವರಿಗೆ ಮುಸಲ್ಮಾನೀ ಧರ್ಮದ ದೀಕ್ಷೆಯನ್ನು ಕೊಟ್ಟು ಬೆಳೆಸಿದ್ದರು. ಸಿಂಹಾಸನದ ಕೆಳಬದಿಗೆ-ಟೀಪೂಸುಲ್ತಾನನ ಎದುರಿಗೆ-ಅರ್ಧವರ್ತು ಲಾಕಾರದ ಮಂಡಲದಲ್ಲಿ ಆತನ ದಿವಾಣರು, ಸೈನ್ಯಾಧಿಪತಿಗಳು ಮುಂತಾದ ಶ್ರೇಷ್ಠ ಅಧಿಕಾರಿಗಳು ಕುಳಿತಿದ್ದರು.

ಕಾಸೀಮನು ಅಲ್ಲಿಗೆ ಹೋದಾಗ್ಗೆ ಶಿಷ್ಟಾಚಾರದಂತೆ ದರ್ಬಾರದೊಳಗಿನ ಜನರ ಭೇಟಿ-ಪ್ರತಿಭೇಟಿಗಳು ನಡೆದಿದ್ದವು. ಕೆಲವರು ಬಂಗಾರದ ತರತರದ ಒಡವೆಗಳನ್ನೂ, ಕೆಲವರು ನಾನಾ ಬಗೆಯ ರತ್ನಗಳನ್ನೂ, ಬೇರೆ ಕೆಲವರು ಕೆಲವು ಅಪೂರ್ವ ಪದಾರ್ಥಗಳನ್ನೂ ಸುಲ್ತಾನನಿಗೆ ನಜರಾಣೆಯೆಂದು ಒಪ್ಪಿಸುತ್ತಿದ್ದರು. ಈಗಾಗಲೇ ಅಂದು ಬಂದ ನಜರಾಣೆಯ ದೊಡ್ಡ ದೊಡ್ಡ ರಾಶಿಗಳು ಅಲ್ಲಿ ಒತ್ತಟ್ಟಿಗೆ ಶೋಭಿಸುತ್ತಿದ್ದವು. ಇಷ್ಟೆಲ್ಲ ಕಾಸೀಮನ ನಜರಿಗೆ ಬೀಳುತ್ತಿದ್ದರೂ ಆ ದರ್ಬಾರದಲ್ಲಿ ಏನು ಸಂಭಾಷಣ ನಡೆದಿರುವದೆಂಬದು ಮಾತ್ರ ಆತನಿಗೆ ಕೇಳಿಸಲಿಲ್ಲ. ಯಾಕಂದರೆ, ಅಲ್ಲಿಯ ಭಾಲದಾರ-ಚೋಪದಾರರು ಆಗಾಗ್ಗೆ ಒದರುವ 'ಖಾಮೋಷ-ಖಾಮೋಷ' ಎಂಬ ಕಠೋರ ದನಿಯೇ ಭಯಂಕರವಾಗಿತ್ತು. ಅವರು ಇಷ್ಟು ಒದರಿ ಸಭಿಕರನ್ನು ಸ್ತಬ್ಧಗೊಳಿಸಲು ಪ್ರಯತ್ನಿಸುತ್ತಿದ್ದರೂ, ಆ ಸಭೆಯೊಳಗಿನ ಗಲಭೆಯು ಕೊಂಚವೂ ಕಡಿಮೆಯಾಗಲಿಲ್ಲ. ಕಡೆಗೆ ಅಬ್ದುಲ್ ರಹಿಮಾನಖಾನನು ತಾನಾಗಿಯೇ ಕಾಸೀಮನೊಡನೆ ಸುಲ್ತಾನನ ಸಿಂಹಾಸನದ ಸಮೀಪಕ್ಕೆ ಹೋದನು. ಆಗ ಟೀಪುವು ಆತನನ್ನು ನೋಡಿ:—ಬನ್ನಿರಿ, ಖಾನಸಾಹೇಬರೇ, ಇತ್ತ ಬನ್ನಿರಿ; ನೀವು ಬೇಗನೆ ಮರಳಿ ಬಂದುದಕ್ಕಾಗಿ ನಮಗೆ ಬಹಳ ಸಂತೋಷವಾಗಿರುತ್ತದೆ; ಆದರೆ ನೀವು ಇಷ್ಟು ಸೊರಗಿರುವುದೇಕೆ? ನಿಮ್ಮ ದೇಹಕ್ಕೆ ಸ್ವಾಸ್ಥ್ಯವಿದೆಯಷ್ಟೇ? ಓಹೊ! ಅಲ್ಲಾನ ಚಮತ್ಕಾರಗಳು ಬಹು

ವಿಲಕ್ಷಣಗಳಾಗಿವೆ. ನಿನ್ನೆ ರಾತ್ರಿ ನಮಗೆ ಕನಸಿನಲ್ಲಿ ಕಂಡ ದೃಶ್ಯವು ಇಂದು ನಿಜವಾಗಿ ತೋರಿತು. "ನಿನ್ನೆ ರಾತ್ರಿಯ ಕನಸಿನಲ್ಲಿ ನಮಗೊಬ್ಬ ನಮ್ಮ ಹಳೇ ಸೇವಕನು ಭೆಟ್ಟಿಯಾಗುವವನಿದ್ದನು; ಹಾಗು ಆತನೊಡನೆ ಹೊಸಬನಾದ ಒಬ್ಬ ಸೇವಕನೂ ಬರುವವನಿದ್ದನು. ಆ ಹೊಸಬನು ಅಂತಿಂಥವನಲ್ಲ. ಒಳ್ಳೇ ಶೂರನೂ ಸುಂದರನೂ ಆಗಿದ್ದು, ಆತನು ಅತ್ಯಂತ ಜಾಣನೂ ಆಗಿರುವನು"

ಹೀಗೆಂದು ನುಡಿದು, ಸುಲ್ತಾನನು ಗುಡುಗುಡಿಯನ್ನು ಸೇದುತ್ತ ಎಲ್ಲರ ಕಡೆಗೂ ನೋಡಹತ್ತಿದನು. ಕೂಡಲೆ ಸಭಿಕರೆಲ್ಲರೂ ಒಂದೇ ದನಿಯಿಂದ:—ವಾಹವ್ವಾ! ವಾಹವ್ವಾ! ನಮ್ಮ ಸುಲ್ತಾನ ಸಾಹೇಬರಿಗೆ ಬಿದ್ದ ಸ್ವಪ್ನವೆಂದಾದರೂ ಸುಳ್ಳಾದೀತೇ? ಯಾವನೊಬ್ಬ ಹಳೇ ಸೇವಕನು ಭೆಟ್ಟಿಯಾಗುವನೆಂಬ ಸಂಗತಿಯು ನಮ್ಮ ಖಾನಸಾಹೇಬರ ಆಗಮನದಿಂದ ನಿಜವಾಗಿದೆ. ನಮ್ಮ ಸುಲ್ತಾನರು ದೀರ್ಘಾಯುಗಳಾಗಲಿ! ಎಂದು ಹೊಗಳಿದರು.

ಇನ್ನು ಸುಮ್ಮನಿರುವದು ಸರಿಯಲ್ಲೆಂದು ತಿಳಿದು, ಅಬ್ದುಲ್ ರಹಿಮಾನಖಾನನು:— "ಸರಕಾರ, ಈ ಸೇವಕನು ಅಷ್ಟೊಂದು ಸ್ತುತಿಗೆ ಅರ್ಹನಾಗಿರುವದಿಲ್ಲ. ಸುಲ್ತಾನ ಸಾಹೇಬರ ಸ್ವಪ್ನದಂತೆ ನಾನು ಈ ಹೊಸ ಸೇವಕನನ್ನು ಸುಲ್ತಾನಸಾಹೇಬರಿಗೆ ಒಪ್ಪಿಸುತ್ತೇನೆ. ಈತನು ಶೂರನೂ ಧೀರನೂ ಇರುವನಲ್ಲದೆ, ಒಳ್ಳೇ ಜಾಣನೂ ಆಗಿರುತ್ತಾನೆ. ಈತನು ಸರಕಾರದ ಚಾಕರಿಯನ್ನು ಒಳ್ಳೇ ಇಮಾನಿಯಿಂದ ಮಾಡಬಹುದೆಂದು ನನಗನಿಸುತ್ತದೆ. ಈತನ ಸಾಹಸದ ಅನುಭವವನ್ನು ನಾನು ಮನಗಂಡಿರುತ್ತೇನೆ;" ಹೀಗೆಂದು ನುಡಿದು ಅವನು ಕಾಸೀಮನ ಕೈ ಹಿಡಿದು, ಆತನನ್ನು ಸುಲ್ತಾನನ ಎದುರಿಗೆ ತಂದು ನಿಲ್ಲಿಸಿದನು. ಕಾಸೀಮನು ಟೀಪೂ ಸುಲ್ತಾನನಿಗೆ ಮೂರು-ಮೂರು ಸಾರೆ ಕುರ್ನಿಸಾತು ಮಾಡಿ, ಕೈ ಕಟ್ಟಿಕೊಂಡು ನಿಂತನು.

"ವಾಹವಪ್ಪ! ಈತನು ಬಹು ಸುಂದರನಾಗಿರುತ್ತಾನೆ. ಈತನ ಮುಖಲಕ್ಷಣದಿಂದಲೇ ಈತನೊಳ್ಳೆ ಸತ್ಯನಿಷ್ಠನಾಗಿರುವದಾಗಿ ತೋ-ರುತ್ತದೆ. ಈತನ ವಿಶಾಲ ಭಾಲವನ್ನು ನೋಡುತ್ತಿರಲಿಕ್ಕೆ ಈತನು ದೈವಶಾಲಿಯಾಗಿ ಕಾಣುತ್ತಾನೆ." ಹೀಗೆ ನುಡಿದ ಸುಲ್ತಾನನ ಶಬ್ದಗಳನ್ನು ಕೇಳಿ, ಆತನ ಸುತ್ತಮುತ್ತಲಿನ ಜನರು:—ಉಲ್, ಅಹಮ್ಮದಲಿಲ್ಲಾ! ಮನುಷ್ಯನ ಪರೀಕ್ಷೆಯನ್ನು ನಮ್ಮ ಸುಲ್ತಾನಸಾಹೇಬರೇ ಮಾಡಬೇಕು. ಇವರಿಗೆ ಎಲ್ಲ ಸಂಗತಿಗಳ ಜ್ಞಾನವೂ ಆಗುತ್ತದೆ; ಎಂದಂದರು.

ಇಷ್ಟರಲ್ಲಿ ಟೀಪೂಸುಲ್ತಾನನು ಮತ್ತೆ ಅನ್ನುತ್ತಾನೆ:— ನಮಗೊಬ್ಬರಿಗೇ ತಿಳಿಯುವಂಥ ಕೆಲವು ಚಿಹ್ನಗಳು ಈತನ ಮಸ್ತಕದ ಮೇಲಿರುತ್ತವೆ. ಇಂದಿನ ಒಳ್ಳೇ ಗ್ರಹಗಳ ಯೋಗದಲ್ಲಿ ಈತನು ನಮ್ಮ ಹತ್ತರಕ್ಕೆ ಬಂದುದರಿಂದಲೂ, ಇವನು ಸಯ್ಯದ ಮನೆತನದವನಾದುದರಿಂದಲೂ ಇವನಿಂದ ನಮಗೆ ಬಹಳ ಅನುಕೂಲವಾಗುವದು. ಏನೋ, ನಿನ್ನ ಹೆಸರು ಕಾಸೀಮನಲ್ಲವೆ? ಕಾಸೀಮಾ, ನೀನು ನಮ್ಮ ಚಾಕರಿಯನ್ನು ಮಾಡುವೆಯಾ? ಧರ್ಮಕ್ಕಾಗಿ ನಮ್ಮೊಡನೆ ನೀನು ಪ್ರಾಣವನ್ನು ಕೂಡ ಪಣ ಕಟ್ಟಲಿಕ್ಕೆ ಸಿದ್ಧನಿರುವೆಯಾ? ಎಂಬ ಪ್ರಶ್ನೆಗೆ ಕಾಸೀಮನು ಗಂಭೀರತೆಯಿಂದ:—ಹಜರತ್, ತಮ್ಮ ಈ ಸೇವಕನು ಜೀವ ಕೊಡಲಿಕ್ಕೆ ಕೂಡ ಸಿದ್ಧನಾಗಿರುತ್ತಾನೆ. ತಾವು ಈ ಸೇವಕನ ಯೋಗ್ಯತೆಯ ಪರೀಕ್ಷೆಯನ್ನು ಮಾಡಿಯೇ ಚಾಕರಿಗೆ ಇಟ್ಟುಕೊಳ್ಳಬೇಕು.

"ಸರಿ-ಸರಿ. ಪರೀಕ್ಷೆಗೆ ಬಹಳ ದಿನಗಳು ಬೇಕಿಲ್ಲ. ಬೇಗನೆ ಪ್ರಸಂಗ ಬರಬಹುದಾಗಿದೆ." ಎಂದಂದು, ಸುಲ್ತಾನನು ಪಕ್ಕದಲ್ಲಿ ಕುಳಿತಿದ್ದ ಒಬ್ಬ ಮುನಸಿಗೆ:—ಎಲೆ, ಹೀಗೆ ಹುಕುಮು ಬರೆ, ಈತನಿಗೆ ತಿಂಗಳಿಗೆ ಹನ್ನೆರಡು ಹೊನ್ನಿನ ಸಂಬಳ; ಹಾಗು ಒಂದು

ಕುದುರೆಯ ಖರ್ಚು ಕೊಡಬೇಕು. ಯಾಕೋ ಕಾಸೀಮಾ, ನಿನ್ನ ಬಳಿಯಲ್ಲಿ ಕುದುರೆಯಿರುವದಷ್ಟೇ?

"ಜೀ ಹಜರತ್, ಖಾನಸಾಹೇಬರ ಔದಾರ್ಯದ ಮೂಲಕ ನನಗೊಂದು ಕುದುರೆಯು ಸಿಕ್ಕಿರುತ್ತದೆ."

"ಒಳ್ಳೇದು; ಕಾಸೀಮಾ, ನೀನು ಯಾವಾಗಲೂ ನಮ್ಮೊಡನೆ ಇರಬೇಕು ಇದೇ ನಿನ್ನ ಕೆಲಸವು, ತಿಳಿಯಿತೇ. ಇತರ ಸಂಗತಿಗಳನ್ನು ಖಾನಸಾಹೇಬರು ನಿನಗೆ ತಿಳಿಸುವರು. ಇನ್ನು ನೀನು ಹೋಗು" ಎಂದಂದು, ಸುಲ್ತಾನನು ಮತ್ತೆ ಗುಡುಗುಡಿಯ ಕೊಳವೆಯನ್ನು ತಕ್ಕೊಂಡು ಗುಡುಗುಡು ಶಬ್ದ ಮಾಡುತ್ತ ಸೇದಹತ್ತಿದನು.

ಆಗ ಹಬ್ಬು ಮುನಸಿಯು ಸುಲ್ತಾನನಿಗೆ ಮುಜುರೆ ಮಾಡಿ:--ಸರಕಾರ! ಖಾನಸಾಹೇಬರು ಬೆಂಗಳೂರಿಂದ ಕೆಲವು ಇಂಗ್ಲಿಷ-ಕಾಫರ-ಕೈದಿಗಳನ್ನು ತಂದಿರುತ್ತಾರೆ. ಅವರ ವಿಚಾರಣೆ............

ಸುಲ್ತಾನನು—ಅಲ್‌ಬತ್, ಅಲ್‌ಬತ್! ಹೌದು, ನಾವು ಅದನ್ನು ಮರೆತೇ ಬಿಟ್ಟಿದ್ದೆವು. ಎಲೇ, ಎಲ್ಲ ಕಡೆಗೂ ಖಾಮೋಷ ಮಾಡಿರಿ; ಹಾಗು ಆ ಕೈದಿಗಳನ್ನು ಇಲ್ಲಿಗೆ ಕರೆತನ್ನಿರಿ.

ಹೀಗೆ ಟೀಪುವಿನ ಆಜ್ಞೆಯಾದ ಕೂಡಲೆ ಸಭೆಯೊಳಗಿನ ಗದ್ದಲವೆಲ್ಲ ಒಮ್ಮೆಲೆ ಶಾಂತವಾಯಿತು. ಆ ದಿವಾಣಖಾನೆಯ ತೀರ ಕೊನೆಯ ಭಾಗದಲ್ಲಿ ಯಾವ ಮೂರು-ನಾಲ್ಕು ಜನರು ತಮ್ಮ ತಮ್ಮೊಳಗೆ ಗುಜುಗುಜು ಮಾತಾಡುತ್ತಿದ್ದರೋ, ಜೋಪದಾರರ ಲಲಕಾರದಿಂದ ಅವರೂ ಸುಮ್ಮನಾದರು. ಬಳಿಕ ಸುಲ್ತಾನನು ಖಾನನನ್ನು ಕುರಿತು:—ಬೆಂಗಳೂರ ಕಿಲ್ಲೇದಾರನು ಆ ಕೈದಿಗಳ ಬಗ್ಗೆ ಪತ್ರವನ್ನೇನಾದರೂ ಕೊಟ್ಟಿರುವನೋ? ಎಂದು ಪ್ರಶ್ನೆ ಮಾಡಲು, ಖಾನನು ಕೂಡಲೆ ಎದ್ದು ನಿಂತು:—ಹಜರತ್, ಆ ಲಖೋಟಿಯು ನನ್ನ ಬಳಿಯಲ್ಲೇ ಇರುತ್ತದೆ. ಈ ಹೊಸ ಸೇವಕನನ್ನು ಸರಕಾರಕ್ಕೆ ಒಪ್ಪಿ

ಸುವ ಗಡಬಿಡಿಯಲ್ಲಿ ಅದು ನನ್ನಲ್ಲಿಯೇ ಮರೆತು ಉಳಿದಿರುತ್ತದೆ. ಆ ಬಗ್ಗೆ ಕ್ಷಮಿಸಬೇಕು, ಎಂದಂದು ತನ್ನ ಬಕ್ಕಣದೊಳಗಿನ ಬೆಂಗಳೂರ ಕಿಲ್ಲೇದಾರನ ಪತ್ರವನ್ನು ಸುಲ್ತಾನನ ಪಾದದಡಿಯಲ್ಲಿರಿಸಿದನು. ಸುಲ್ತಾನನು ಅದನ್ನು ತಕ್ಕೊಂಡು, ಕೈಮುಟ್ಟಿ ಹಿಡೆದು-ಓದಿ, ತನ್ನ ಮುಖ್ಯ ಮುನಸಿಯನ್ನು ಕುರಿತು:—ವಾ! ಇದರಲ್ಲಂತೂ ಕಿಲ್ಲೇ ದಾರನು ಹಿಬ್ಬ ಕಾಫರನನ್ನು ಬಹಳ ಹೊಗಳಿರುತ್ತಾನೆ. ಆ ಕ್ಯಾಂಪ್ಬ ನ್‌ನು ಬಹು ಜಾಣನೂ, ಚತುರನೂ, ಶೂರನೂ ಆಗಿರುತ್ತಾನೆಂದೂ, ಯುದ್ಧದೊಳಗೆ ಅವನೊಳ್ಳೇ ಧೋರಣೆ ಪುರುಷನಾಗಿರುವನೆಂದೂ ಅನ್ನುತ್ತಾನೆ ಶತ್ರುಗಳನ್ನು ಹೇಗೆ ಹಣ್ಣಿಗೆ ತರಬೇಕೆಂಬ ಯುಕ್ತಿಯು ಆತನಿಗೆ ಚೆನ್ನಾಗಿ ಗೊತ್ತಿದೆಯಂತೆ. ಇಂಥ ಹೇಚು-ಪೇಚುಗಳ ಜ್ಞಾನವು ನಮಗೆ ಇಲ್ಲೇ ಇಲ್ಲವೇನು? ಅಲ್ಲಾನ ಕೃಪೆಯಿಂದ ಆ ಹರಾಮಖೋರ ಇಂಗ್ಲಿಷರಿಗಿಂತಲೂ ನಮಗೆ ಆ ಸಂಗತಿಗಳು ಎಷ್ಟೋ ಚೆನ್ನಾಗಿ ಗೊತ್ತಿವೆ; ಆದರೆ............

ಸುಲ್ತಾನನು ಇನ್ನೂ ಏನೋ ಮಾತಾಡತಕ್ಕವನು; ಅಷ್ಟರಲ್ಲಿ ದರ್ಬಾರದೊಳಗಿನ ಲಾಂಗೂಲಚಾಲನ ವೃತ್ತಿಯ ಹಲ-ಕೆಲವರು:- ವಾಹವ್ವಾ-ವಾಹವ್ವಾ! ಅದನ್ನೇನು ಕೇಳುವದಿದೆ? ನಮ್ಮ ಸುಲ್ತಾನ ಸಾಹೇಬರ ಜ್ಞಾನವು ಅಗಾಧವಾದದ್ದು! ಅವರನ್ನು ಸರಿಗಟ್ಟು ವವರು ಈ ಭೂಮಂಡಲದಲ್ಲಿ ಯಾರೂ ಇಲ್ಲ! ಎಂದು ಕೂಗಿದರು. ಆಗ ಸುಲ್ತಾನನು ಪುನಃ:—ಇನ್ಶಾಅಲ್ಲಾ! ಇಂದಿನ ದಿನವು ಸುದಿನ ವಾಗಿರುತ್ತದೆ ಆದುದರಿಂದ ನಾವು ಇನ್ನೊಮ್ಮೆ ಆ ಕಾಫರರನ್ನು ನಮ್ಮ ಚಾಕರಿ ಮಾಡುವ ಬಗ್ಗೆ ಕೇಳುತ್ತೇವೆ ಅದಕ್ಕೆ ಅವರು ಹಿಪ್ಪುವದಾದರೆ ಅವರಿಗೆ ಜೀವದಾನ ಕೊಡುವೆವು. ಇಲ್ಲದಿದ್ದರೆ ಅವರ ಆಯುಷ್ಯನಕ್ಷತ್ರವು ಹರಿಯಿತೆಂದೇ ತಿಳಿಯಬೇಕು! ಅವರನ್ನು ಆ ಸೈತಾನೀರಾಜ್ಯಕ್ಕೆ ಕಳಿಸಿ ಕೊಡುವೆವು. ಅಲ್ಲಿ ಅವರ ಜಾತಿಯ

ಸಾವಿರಾರು ಜನರು ಪ್ರೇತರೂಪದಿಂದ ಇವರ ದಾರೀ ಕಾಯುತ್ತಿರುವರು ಆ ನಂದೀದುರ್ಗದ ಶಿಖರದ ತುದಿಯಿಂದ ಇವರನ್ನು ದೂಡಿಸಿ ಕೊಲ್ಲಿಸುವ ಹುಕುಮು ಮಾಡುತ್ತೇವೆ. ಅಂದರೇ ಈ ಕಾಫರರಿಗೆ ಬುದ್ಧಿ ಬಂದೀತು!

ವಾಹವ್ವಾ! ವಾಹವ್ವಾ! ಸರಕಾರದ ಈ ಮಾತಿಗೆ ಯಾರು ಅಲ್ಲೆಂದಾರು? ಅವರಿಗೆ ಜೀವದಾನ ಕೊಡುವದು ನ್ಯಾಯುವಾದದ್ದಲ್ಲ ಯಾಕಂದರೆ, ತವರ ಜಾತಿಯು ಮೇಲೆ ಅಲ್ಲಾನ ಶಾಪವೇ ಇರುತ್ತದೆ: ಆದರೂ ನಮ್ಮ ಸುಲ್ತಾನ ಸಾಹೇಬರ ಕ್ಷಮಾಶೀಲ ಗುಣವು ದೊಡ್ಡದಾಗಿರುತ್ತದೆ, ಎಂದು ಆ ಸಭೆಯಲ್ಲಿಯ ಕೆಲವರು ನುಡಿದರು. ಆ ಲಾಂಗೂಚಾಲನವೃತ್ತಿಯ ದರ್ಬಾರೀ ಜನರಿಗೆ ಸುಲ್ತಾನನ ಮಾತಿಗೆ ತಲೆ ಹಾಕುವ ಕೆಲಸದ ವಿನಃ ಬೇರೆ ಕೆಲಸವೇ ಇರಲಿಲ್ಲ.

ಈ ಪ್ರಕಾರ ಆ ದರ್ಬಾರದೊಳಗೆ ಭಾಷಣ ಪ್ರತಿಭಾಷಣಗಳು ನಡೆದಿರಲು, ಒಳಗೆ ಬರುತ್ತಿ ಎವ ಕೈದಿಗಳ ಕಾಲ ಸಪ್ಪಳವೂ, ಅವರೊಡನೆ ಬರುತ್ತಿದ್ದ ಸಿಪಾಯಿಗಳ ಪರಸ್ಪರರ ಮಾತುಗಳೂ ಕೇಳ ಹತ್ತಿದವು; ಹಾಗು ಅಷ್ಟರಲ್ಲಿ ಆ ಕೈದಿಗಳು ದರ್ಬಾರದ ದಿವಾಣಖಾನೆಯ ಬಾಗಿಲ ಬಳಿಗೆ ಸಹ ಬಂದರು. ಕೂಡಲೆ:—ಇವರ ಹಿಪೀಸರ(ಮುಖ್ಯಸ್ಥ)ನನ್ನು ಮಾತ್ರ ಮುಂದೆ ಕರೆತನ್ನಿರಿ ಉಳಿದವರನ್ನು ಹೊರಗೇ ನಿಲ್ಲಿಸಿರಿ, ಎಂದು ಸುಲ್ತಾನನು ಹುಕುಮು ಮಾಡಿದೊಡನೆ, ಉಳಿದವರನ್ನೆಲ್ಲ ಹಿಂದೆ ಸರಿಸಿ, ಮುಖ್ಯಸ್ಥನೊಬ್ಬನಿಗೇ ಮುಂದೆ ಹೋಗಲು ಸಿಪಾಯಿಗಳು ಹೇಳಿದರು. ಆಗ ಓರ್ವ ತರುಣ ಇಂಗ್ರಜನು ಮೆಲ್ಲಗೆ ಹೆಜ್ಜೆಗಳನ್ನಿಕ್ಕುತ್ತ ಸಿಂಹಾಸನದ ಕಡೆಗೆ ನಡೆದನು. ಆತನು ಸಿಂಹಾಸನದ ಹತ್ತರ ಹೋದ ಕೂಡಲೆ ಅಲ್ಲಿಯ ಚೋಪದಾರನು ಸ್ವಾಭಾವಿಕವಾದ ತನ್ನ ಗೊಗ್ಗರ ದನಿಯಿಂದ:— ಎಲೇ

ಕಾಫರ, ಸರಕಾರದ ಚರಣದ ಮೇಲೆ ಅಡ್ಡ ಬೀಳು, ಎಂದು ಆಜ್ಞಾಪಿಸಿದನು. ಆ ಅಪ್ಪಣೆಯನ್ನು ಕೇಳಿ ಆ ಮಾನೀಸ್ವಭಾವದ ಕೈದಿಯು: ನಾನು ನನ್ನ ದೇಶದ ಅರಸನಿಗೆ ಯಾವ ಪ್ರಕಾರ ನಮಸ್ಕಾರ ಮಾಡುವೆನೋ ಅದರಂತೆಯೇ ನಮಿಸುವೆನು, ಎಂದು ಆ ದರ್ಬಾರದೊಳಗಿನ ಪ್ರತಿಯೊಬ್ಬರಿಗೂ ಕೇಳಬರುವ ಹಾಗೆ ಉಚ್ಚಸ್ವರದಿಂದ ನುಡಿದನು; ಹಾಗು ತನ್ನ ಪದ್ಧತಿಯ ಪ್ರಕಾರ ಮುಜುರೆ ಮಾಡಲಿಕ್ಕೆ ಆತನು ತುಸ ಮುಂದಕ್ಕೆ ಹೋದನು ಮಾತ್ರ. ಆತನ ಒಂದು ಕಾಲು ಸಿಂಹಾಸನದ ಬದಿಗೆ ಹಾಸಿದ್ದ ಜಾಜಮಿನ ಮೇಲೆ ಬಿದ್ದಿತು ಕೂಡಲೆ ಅಲ್ಲಿಯ ಚೋಪದಾರನು ಸಂತಾಪಾತಿರೇಕದಿಂದ ಆ ಇಂಗ್ಲಿಷ ಕೈದಿಯ ಕೆನ್ನೆಯ ಮೇಲೊಮ್ಮೆ ಚೆನ್ನಾಗಿ ಬಿಗಿದು:—ಎಲೈ ಕಾಫರ........ಮಗನೇ, ಖಬರದಾರ, ಈ ಜಾಜಮಿನ ಮೇಲೆ ಕಾಲಿಟ್ಟೆಯೆಂದರೆ. ಈಗ ಕಾಲಿಟ್ಟ ತಪ್ಪಿಗಾಗಿ ನೆಲಕ್ಕೆ ಬಿದ್ದು ಸರಕಾರದ ಎದುರಿಗೆ ನಿನ್ನ ಮೂಗು ತಿಕ್ಕು; ಹಾಗು ಸುಲ್ತಾನ ಸಾಹೇಬರ ಕ್ಷಮೆಯನ್ನು ಬೇಡಿಕೋ, ಎಂದು ಅಪ್ಪಣೆ ಮಾಡಿದನು.

ಚೋಪದಾರನು ಹೊಡೆದ ಕೂಡಲೆ ಆ ಕೈದಿಯು ಆತನನ್ನು ಕೆಕ್ಕರಗಣ್ಣಿನಿಂದ ನೋಡುತ್ತ, ತಿರುಗಿ ಹೊಡೆಯಬೇಕೆಂದು ತನ್ನ ಮುಷ್ಟಿಯನ್ನು ಮೇಲಕ್ಕೆತ್ತಿದ್ದನು ಸಹ. ಇಷ್ಟರಲ್ಲಿ ಸುಲ್ತಾನನು ಆತನನ್ನು ತಡೆದು:— ಫಿರಂಗೀ, ಅವನನ್ನು ಹೊಡೆಯಬೇಡ. ಎಲೈ, ಯಾರಿದ್ದೀರತ್ತ ಕಡೆಗೆ? ಈ ಬದಮಾಷ್ ಜೋಪದಾರನನ್ನು ಒದ್ದು ಹೊರಗೆ ಹಾಕಿರಿ; ಹಾಗು ಈತನಿಗೆ ಹತ್ತು ಘಟಕೆಯ ಶಿಕ್ಷೆ ಕೊಡಿರಿ, ಎಂದು ಹುಕುಮು ಮಾಡಿದನು. ಸುಲ್ತಾನನ ಬಾಯಿಂದ ಹೀಗೆ ಹುಕುಮು ಹೊರಡುವದೊಂದೇ ತಡ; ನಾಲ್ಕೈದು ಜನ ಪ್ಯಾದೆಗಳು ಓಡುತ್ತ ಬಂದು ಆ ಚೋಪದಾರನನ್ನು ದರದರನೆ ಎಳೆಯುತ್ತ ಆ ದರ್ಬಾರಗೃಹದಿಂದ ಹೊರಗೊಯ್ದು ಶಿಕ್ಷೆ ಮಾಡಿದರು. ಬಳಿಕ

ಸುಲ್ತಾನನು ಆ ಸಾಹೇಬನಿಗೆ ತನ್ನ ಬಳಿಗೆ ಬರ ಹೇಳಿದನು. "ಈತ ನನ್ನು ತೀರ ಹತ್ತರಕ್ಕೆ ಬರಗೊಡಬಾರದು ಸರಕಾರ!" ಎಂದು ಸಭಿಕರೆಷ್ಟೋ ಜನರು ಸುಲ್ತಾನನಿಗೆ ಸೂಚಿಸಿದರು; ಆದರೆ ಟೀಪೂ ಸುಲ್ತಾನನು ಅವರ ಸೂಚನೆಗೆ ಲಕ್ಷ್ಯಗೊಡದೆ:—ಎಷ್ಟೋ ಹತ್ಯಾರ ಬಂದ ಫಿರಂಗಿಗಳ ಪ್ರಾಣಗಳನ್ನು ಹೀರಿದ ನಾನು, ಈ ಬಿನ್‌ಹತ್ಯಾರಿ ಯಾದ ಒಬ್ಬೊಂಟಿಗನಿಗೆ ಹೆದರಲೆ? ಫಿರಂಗೀ, ಬಾರೋ-ಬಾ, ಇತ್ತ ಮುಂದೆ ಬಾ ಅಂದರೆ ನಿನ್ನೊಡನೆ ನನಗೆ ಮಾತಾಡಲಿಕ್ಕೆ ನೆಟ್ಟಗಾಗುವದು ಕಾಫರ, ನೀನು ಅಂಜಬೇಡ. ನಿನಗೆ ಯಾರಿಂ ದಲೂ ಎಳ್ಳಷ್ಟೂ ತೊಂದರೆಯುಂಟಾಗಲಿಕ್ಕಿಲ್ಲ, ಎಂದಂದನು.

ಆ ಕೈದಿಯು ತುಸ ಮುಂದೆ ಹೋಗಿ, ಆದರದಿಂದಲೂ, ಆಢ್ಯ ತೆಯಿಂದಲೂ ಸಲಾಮು ಮಾಡಿ:— ಸುಲ್ತಾನ ಸಾಹೇಬ, ನಾನು ನಿಮಗೆ ಕೊಂಚವೂ ಅಂಜುವದಿಲ್ಲ. ಹೆದರಿಕೆಯುಂಟಾಗುವಂಥ ಅದಾವ ದುಷ್ಕೃತ್ಯವು ನಿಮ್ಮಿಂದ ನನಗಾಗುವಂತಿದೆ?

"ನನ್ನಿಂದಲ್ಲವೆ? ಒಂದೇ ಒಂದು ಕ್ಷಣದಲ್ಲಿ ನಿನ್ನ ಪ್ರಾಣ ತಕ್ಕೊಂಡೇನು? ಇದಕ್ಕೂ ಮಿಗಿಲಾದ ಮತ್ತಾವ ನನ್ನ ದುಷ್ಟ ಕೆಲಸವನ್ನು ನೀನು ನೋಡಬಯಸುತ್ತೀ" ಎಂದು ಸುಲ್ತಾನನು ಥಟ್ಟನೆ ನುಡಿದನು ಫಿರಂಗಿಯು ಪ್ರಶ್ನೆಯನ್ನು ಕೇಳಿದ ದರ್ಬಾರಿಗಳೆಲ್ಲ ಆತ ನನ್ನು ಬಾಯಿಗೆ ಬಂದಂತೆ ಬೈಯುತ್ತ ಕ್ರೂರದೃಷ್ಟಿಯಿಂದ ನೋ- ಡುತ್ತ ಕುಳಿತಿದ್ದರು. ಆ ಧೀರ ಮತ್ತು ಶೂರ ಇಂಗ್ಲಿಷ ಕೈದಿಯು ತನ್ನ ದೃಷ್ಟಿಯನ್ನು ಆ ಲಾಂಗೂಲಚಾಲನವೃತ್ತಿಯ ಸಭಿಕರ ಕಡೆಗೆ ಒಮ್ಮೆ ತಿರುಗಿಸಿದನು ಮಾತ್ರ. ಆತನ ಆ ಬಿರಿಹೋಟದಿಂದ ಅವರಲ್ಲಿಯ ಬಹು ಜನರು ಗಾಬರಿಗೊಂಡರು. ಎಲ್ಲರ ಮುಖಗಳನ್ನೂ ಒಮ್ಮೆ ನೋಡಿದ ನಂತರ ಆ ಕೈದಿಯು ಗಂಭೀರ ವಾಣಿಯಿಂದ:—ಈ ಮೊದಲು ಸುಲ್ತಾನ ಸಾಹೇಬರಿಗೆ ಹೇಳಿದ ಉತ್ತರವನ್ನು ನಾನು

ಉದ್ಧಟತನದಿಂದ ನುಡಿದಿರುವದಿಲ್ಲ. ಸತ್ಯವಾದ ಸಂಗತಿಯನ್ನೇ ಇಮಾನಪೂರ್ವಕವಾಗಿ ನುಡಿದಿರುತ್ತೇನೆ. ಎಲೈ ಹೇಡಿಗಳಾದ ದರ್ಬಾರಿಗಳೇ, ನನ್ನಿಂದ ನೀವೆಲ್ಲರೂ ಆ ಸತ್ಯನಿಷ್ಠೆಯನ್ನು ಕಲಿತು ಕೊಳ್ಳಿರಿ. ನಾನೊಬ್ಬನೇ ನಿಮ್ಮ ಕೈಯಲ್ಲಿ ಸಿಕ್ಕಿರಲು, ನೀವು ನನಗೆ ಕಂಡ ಕಂಡ ಹಾಗೆ ಚೇಷ್ಟೆ ಮಾಡುವಿರಿ; ಬಾಯಿಗೆ ಬಂದ ಹಾಗೆ ಬೈಯುವಿರಿ. ಈ ಬಗ್ಗೆ ನಿಮಗೆ ಸ್ವಲ್ಪಾದರೂ ನಾಚಿಕೆಯುಂಟಾ ಗುವದಿಲ್ಲವೆ? ಧಿಃಕಾರವಿರಲಿ, ನಿಮ್ಮ ಹೇಡಿ ಬಾಳುವಿಕೆಗೆ! ಎಂದು ಅಂದನು.

ಈ ಪ್ರಕಾರ ನುಡಿಯುವಾಗ ಆ ಕೈದಿಯ ಮುಖಮುದ್ರೆಯು ಹಳ್ಳೇ ಉಗ್ರವಾಗಿ ತೋರುತ್ತಿತ್ತು. ಅವನು ಹಾವಭಾವಯುಕ್ತ ವಾಗಿ ನುಡಿದ ಆ ನುಡಿಗೆ ದರ್ಬಾರಿಗಳಾರೂ ಉತ್ತರವನ್ನೀಯಲಿಲ್ಲ. ಸುಲ್ತಾನನು ಏನು ಅನ್ನುವನೋ ನೋಡಬೇಕೆಂದು, ಆತನು ತನ್ನ ಮೋರೆಯನ್ನು ಸಿಂಹಾಸನದ ಕಡೆಗೆ ಹೊರಳಿಸಿ, ದಿಟ್ಟತನದಿಂದ ಸುಲ್ತಾನನ ಕಡೆಗೆ ನೋಡುತ್ತ ನಿಂತನು. ಆಗ ಸುಲ್ತಾನನು ಕ್ರೋಧ ದಿಂದ:—ಚೂಪ್! ಎಲೈ ಫಿರಂಗೀ, ನಾವು ನಿನ್ನನ್ನು ಇಲ್ಲಿಗೆ ನಿನ್ನ ಈ ಉದ್ಧಟ ನುಡಿಯನ್ನು ಕೇಳಲಿಕ್ಕೆ ಕರೆಯಿಸಿಲ್ಲ. ನಾವು ನಿನ್ನನ್ನು ಪ್ರೀತಿಸುತ್ತೇವೆ; ಸ್ನೇಹಭಾವದಿಂದ ನಿನ್ನೊಡನೆ ನಡಕೊಳ್ಳಬೇಕೆಂದು ಸಂಕಲ್ಪಿಸಿರುತ್ತೇವೆ. ಆದುದರಿಂದ ನಿನಗೆ ನಾಲ್ಕು ಹಿತವಚನಗಳನ್ನು ಹೇಳುವ ಸಲುವಾಗಿ ನಾವು ನಿನ್ನನ್ನು ಇಲ್ಲಿ ಕರೆಸಿರುತ್ತೇವೆ; ತಿಳಿ ಯಿತೇ? ಎಂದು ನುಡಿಯುತ್ತಿರಲಿಕ್ಕೆ, ಒಬ್ಬ ಶ್ವಾನ ಸ್ವಭಾವದ ಮುನಷಿಯು ನಡುವೇ ಬಾಯಿ ಹಾಕಿ:—ಎಲೈ ಕಾಫರ, ನೋಡು, ಸುಲ್ತಾನಸಾಹೇಬರು ಎಷ್ಟು ದಯಾಲುಗಳಿರುವರೆಂಬದನ್ನು? ಅವರ ಭಾಷಣವು ನಿನಗೆ ತಿಳಿಯುತ್ತದೋ ಅಥವಾ ಯಾವನೊಬ್ಬ ದುಭಾ ಷಿಯು ನಿನ್ನ ಸಹಾಯಕ್ಕೆ ಬೇಕೋ? ತಿಳಿಸು, ಎಂದನು.

ಚೂಪ್ ರಹೋ! ಆತನಿಗೆ ನಮ್ಮ ಮಾತು ಚೆನ್ನಾಗಿ ತಿಳಿಯುತ್ತವೆ ತಿಳಿಯದಿದ್ದರೆ ಆತನು ಕೇಳುವನು; ನಿನಗೇತಕ್ಕೆ ಬೇಕು ಆ ಪಂಚಾಯತಿಯು? ಸುಮ್ಮನೆ ಕೂಡ್ರು, ಎಂದು ಸುಲ್ತಾನನು ಆ ಮುನಷಿಯನ್ನು ಸುಮ್ಮನಿರಿಸಿ, ಆ ಕೈದಿಯನ್ನು ಕುರಿತು:—ಎಲೈ ಕ್ಯಾಂಪ್ಬನ್‌ಸಾಹೇಬ, ಇತ್ತ ಕೇಳು. ನಿನ್ನನ್ನು ಇಲ್ಲಿಗೆ ವಾದಿಸುವದಕ್ಕಾಗಿ ಕರೆಸಿಕೊಂಡಿರುವದಿಲ್ಲ. ನೀನು ನಮ್ಮ ಸೆರೆಯಾಳಾಗಿದ್ದರೂ, ನಿನ್ನನ್ನು ಅಂಬಾರಿಯಲ್ಲಿ ಕೂಡ್ರಿಸಿ ಕರೆತಂದು, ಪ್ರತ್ಯಕ್ಷ ನಾವೇ ನಿನ್ನೊಡನೆ ಮಾತಾಡುವದೇತಕ್ಕೆಂದರೆ, ನಮ್ಮ ಕಿಲ್ಲೇದಾರನು ತಿಳಿಸಿದ ಮೇರೆಗೆ ತುರಂಗದಲ್ಲಿ ತೀರ ಬೇಸತ್ತಿರುವದರಿಂದ ನೀನು ನಮ್ಮ ಮಾತನ್ನು ಕೇಳಬಹುದೆಂದು. ಕಾಂಪ್ಬನ್‌ಸಾಹೇಬ, ನೀನು ನಮ್ಮ ಮಾತನ್ನು ಲಾಲಿಸಿ ನಮ್ಮ ಚಾಕರಿಗೆ ನಿಂತುಕೊಂಡರೆ, ನಿನ್ನ ಇಚ್ಛೆಯ ಪ್ರಕಾರ ನಾವು ನಿನ್ನನ್ನು ನಡಿಸಿಕೊಳ್ಳುತ್ತೇವೆ. ನಿನಗೆ ದೊಡ್ಡ ದೊಡ್ಡ ಪದವಿಗಳನ್ನು ಕೊಡುತ್ತೇವೆ ಮಹತ್ವದ ಹಾಗು ಅಧಿಕಾರದ ನೌಕರಿಯ ಮೇಲೆ ನೇಮಿಸುತ್ತೇವೆ; ಮತ್ತು....

"ಸಾಕು-ಸಾಕು! ಸುಮ್ಮನಿರ್ರಿ" ಎಂದು ಆ ಕೈದಿಯು ಗಟ್ಟಿ ದನಿಯಿಂದ ತಿರಸ್ಕಾರಪೂರ್ವಕ ಒದರಲು, ಟಿಪೂಸುಲ್ತಾನನಂಥ ದಿಟ್ಟ ಮೈಸೂರ ಹುಲಿಯು ಕೂಡ ಕ್ಷಣಕಾಲ ಅಂಜಿ, ಆತನನ್ನು ಎವೆಯಿಕ್ಕದೆ ನೋಡಹತ್ತಿದನು. ಆತನಿಗೆ ಆ ಫಿರಂಗಿಯ ವಿಲಕ್ಷಣ ದಿಟ್ಟತನದ ಬಗ್ಗೆ ಆಶ್ಚರ್ಯವುಂಟಾಯಿತು. ಟೀಪೂಸುಲ್ತಾನನು ಹೀಗೆ ಆಶ್ಚರ್ಯಚಕಿತನೇತ್ರದಿಂದ ತನ್ನನ್ನೇ ನೋಡುತ್ತಿರಲಿಕ್ಕೆ ಆ ತರುಣ ಇಂಗ್ಲಿಷನು ಟೀಪುವನ್ನುದ್ದೇಶಿಸಿ:—ಸುಲ್ತಾನಸಾಹೇಬ, ನಾವೂ ನೀವೂ ಸಮನಾದ ಸ್ವಾತಂತ್ರ್ಯಸ್ಥಿತಿಯಲ್ಲಿದ್ದಾಗ ಮಾತ್ರ ನೀವು ಆಡಿದ ಕರಾರಿನಂತೆ ನನ್ನನ್ನು ಚಾಕರಿಗೆ ಕರೆಸಿದ್ದರೆ, ಅದು ನಿಮಗೆ ಶೋಭಿಸುತ್ತಿತ್ತು; ಆದರೆ ನಾನು ಈಗ ಕೇವಲ ನಿಮ್ಮ

ಹಸ್ತಗತನಾಗಿರುವಾಗ, ನೀವು ಎಂದೂ ನಡಿಸದಂಥ ವಚನಗಳನ್ನು ಕೊಟ್ಟು, ನನ್ನನ್ನು ಮೋಹಗೊಳಿಸಲು ಯತ್ನಿಸಿ, ನನ್ನ ಚೇಷ್ಟೆ ಮಾಡುತ್ತಿರುವಿರೇನು? ಎಂದು ಪ್ರಶ್ನೆ ಮಾಡಲು,

ಆ ಕೈದಿಯ ಈ ಕಡೆಯ ವಾಕ್ಯವನ್ನು ಕೇಳಿ ಆತನ ಬಗ್ಗೆ ತುಸ ಆಶೆಯುಂಟಾದುದರಿಂದಲೋ ಏನೋ, ಸುಲ್ತಾನನು ಹಳ್ಳೀ ಆತುರತೆಯಿಂದ:—ಪರಮ ದಯಾಳ ವಾದ ಅಲ್ಲಾ ಹಾಗು ನಮ್ಮ ಧರ್ಮಸ್ಥಾಪಕನಾದ ಮಹಮ್ಮದ ಪೈಂಬರ ಆಶೀರ್ವಾದ ಪಾದ ಸಾಕ್ಷಿಯಾಗಿ ನಾನು ನಿನಗೆ ಹೇಳುವದೇನಂದರೆ: ಈ ಮೊದಲು ನಿನಗೆ ಕೊಟ್ಟಿರುವ ನನ್ನ ಎಲ್ಲ ವಚನಗಳನ್ನೂ ನಾನು ತಪ್ಪದೆ ಪಾಲಿಸುತ್ತೇನೆ. ಹೇಳು ಹಾಗಾದರೆ, ನೀನು ನನ್ನ ಚಾಕರಿ ಮಾಡಲಿಕ್ಕೆ ಸಿದ್ಧನಿರುವೆಯಷ್ಟೆ? ಸಮ್ಮತಿಯನ್ನಿತ್ತ ಕೂಡಲೆ ನಿನಗೆ ಬೇಕಾದಷ್ಟು ಪದವಿಗಳು, ಅಧಿಕಾರ, ಸಂಪತ್ತು, ಹೆಂಗಸರು............

ಸುಲ್ತಾನನು ಮುಂದೆ ನುಡಿಯಬಹುದಾಗಿದ್ದ ಶಬ್ದಗಳನ್ನು ಕೇಳಿಕೊಳ್ಳುವದು ಕೂಡ ಆ ಕೈದಿಗೆ ದುಸ್ತರವಾಯಿತು ಅದರಿಂದ ಅವನು ಹಿಮ್ಮೆಲೆ:—ಟೀಪೂಸಾಹೇಬ, ಈಗ ನಾನು ನಿಮ್ಮ ಕೈಸೇರಿರುವೆನು. ಅಂದಬಳಿಕ ನೀವೇನೆಂದರೂ ನಾನು ಅದನ್ನು ಕೇಳಿಕೊಳ್ಳಲೇ ಬೇಕಾಗಿರುತ್ತದೆ; ಆದರೆ ನಿಮ್ಮಲ್ಲಿ ಸ್ವಲ್ಪಾದರೂ ಮನುಷ್ಯತ್ವವಿದ್ದರೆ ಶಿಪಾಯಿಯೆನಿಸಿಕೊಳ್ಳುವವನಿಗೆ ಯೋಗ್ಯವಾವುದೆಂಬದು ನಿಮಗೆ ಗೊತ್ತಿದ್ದರೆ-ನೀವು ಇಂಥ ಹೀನನುಡಿಗಳನ್ನು ನುಡಿದು, ನನ್ನ ಮನಸ್ಸನ್ನು ನೋಯಿಸಲಿಕ್ಕಿಲ್ಲ. ನೀವು ಸಿಟ್ಟಾಗಬೇಡಿರಿ. ನಾನನ್ನುವದನ್ನು ಶಾಂತಮನಸ್ಕರಾಗಿ ಕೇಳಿಕೊಳ್ಳಿರಿ. ನನ್ನ ಪರಮ ಗೆಳೆಯನಾದ ಮ್ಯಾಂಥ್ಯೂಸನಿಗೆ ನೀವು ವಿಷ ಕೊಟ್ಟು ಕೊಲ್ಲಿಸಿದಿರಿ. ನನ್ನೀ ವಾಕ್ಯವನ್ನು ಕೇಳಿ ಬೆರಗಾದವರಂತೆ ನೀವು ನಟಿಸಬೇಡಿರಿ. ನಿಮ್ಮ ಅಪ್ಪಣೆಯಿಂದಲೆ: ಆತನು ಹಾಗೆ ಕೊಲ್ಲಲ್ಪಟ್ಟಿರುವನೆಂಬದು ನಮಗ

ಚನ್ನಾಗಿ ಗೊತ್ತಿದೆ. ನನ್ನ ಆ ಗೆಳೆಯನಿಗೂ ಈಗ ನನಗೆ ಕೇಳಿದಂ ತೆಯೇ ಕೇಳಿದ್ದಿರಿ; "ನಮ್ಮ ಚಾಕರಿ ಮಾಡು, ಇಲ್ಲದಿದ್ದರೆ ಸಾಯು" ಎಂಬದನ್ನೇ ನೀವು ಆತನಿಗೆ ಹೇಳಿದ್ದಿರಿ. ಅವನು ಹೇಳಿದಂತೆ ಈಗ ನಾನೂ "ಆ ನಿಮ್ಮ ಚಾಕರಿಯನ್ನು ಎಂದೂ ಮಾಡಲಾರೆನು. ಮರ ಣವೇ ನನಗೆ ಇಷ್ಟವಾಗಿದೆ" ಎಂದು ಹೇಳುತ್ತೇನೆ. ನೀವು ನನ್ನ ದೇಶಬಾಂಧವರನ್ನು ಹೇಗೆ ಒಬ್ಬರಹಿಂದೊಬ್ಬರಂತೆ ಕೊಲ್ಲಿಸಿದಿರೋ, ಹಾಗೆಯೇ ನನ್ನನ್ನೂ ಕೊಲ್ಲಿಸಿರಿ ನನ್ನ ದೇಶಬಾಂಧವರಲ್ಲಿ ಯಾರೂ ನಿಮ್ಮ ಚಾಕರಿಯ ಪಾಶಕ್ಕೆ ಒಳಗಾಗಿಲ್ಲ. ಎಲ್ಲರೂ ತಮ್ಮ ದೇಶದ ಕೀರ್ತಿಗಾಗಿ ಸತ್ತಿರುತ್ತಾರೆ. ನಾನೂ ಅಂಥ ಮರಣವನ್ನೇ ಮನಃ ಪೂರ್ವಕವಾಗಿ ಬಯಸುತ್ತೇನೆ. ಸುಲ್ತಾನಸಾಹೇಬ, ನಿಮಗೆ ರಕ್ತ ಪಾತವನ್ನು ನೋಡುವ ಹವ್ಯಾಸವು ಹೆಚ್ಚಾಗಿದೆಯಷ್ಟೇ? ನನಗೆ ಇನ್ನು ಬದುಕುವ ಆಶೆಯಿಲ್ಲ ಯಾವನೊಬ್ಬ ನಿಮ್ಮ ಹಸ್ತಕನಿಗೆ ನನ್ನ ರುಂಡವನ್ನು ದಿಂಡದಿಂದ ಬೇರ್ಪಡಿಸಲು ಹೇಳಿರಿ. ಅಂದರೆ ಈ ಇಂಗ್ಲಿಷ ವೀರರು ಮರಣಕಾಲದಲ್ಲೂ ಕೂಡ ಎಷ್ಟು ದಿಟ್ಟರಿರುತ್ತಾ ರೆಂಬದು ನಿಮ್ಮ ಹೇಡಿ ದರ್ಬಾರಿಗಳ ನಿದರ್ಶನಕ್ಕೆ ಬರಲಿ! ಹೂಂ, ನನ್ನನ್ನು ಕೊಲ್ಲಲು ಹುಕುಮು ಮಾಡಿರಿ, ತಡವೇಕೆ? ನಾನು ನಿಮಗೆ ಕೊಂಚವೂ ಅಂಜುವದಿಲ್ಲ.

ಆ ಕೈದಿಯ ಈ ಉಪಮರ್ದಕಾರಕ ಭಾಷಣವನ್ನು ಕೇಳಿ, ಆ ಸಭಿಕರಲ್ಲಿಯ ಪ್ರತಿಯೊಬ್ಬನೂ ಆತನನ್ನು ಕ್ರೂರದೃಷ್ಟಿಯಿಂದ ನೋಡುತ್ತ:— ಹೊಡೆಯಿರಿ-ಹೊಡೆಯಿರಿ, ಈ ಕಾಫರನ ಮುಸು ಡಿಗೆ........... ಕೊಲ್ಲಿರಿವನನ್ನು. ಬದ್‌ಮಾಷ್! ಹರಾಮಖೋರ!! ತುಂಡರಿಸಿರಿವನನ್ನು" ಎಂದು ಕೂಗಹತ್ತಿದರು. ಕೆಲ-ಕೆಲವರಂತೂ ಕುಳಿತಲ್ಲಿಂದ ಎದ್ದು ತಮ್ಮ ಅಂಗಿಯ ತೋಳುಗಳನ್ನು ಮೇಲಕ್ಕೇರಿ ಸುತ್ತ, ದವಡೆಗಳನ್ನು ಕಚ್ಚುತ್ತ, ಮೀಸೆಗಳನ್ನು ಹುರಿ ಮಾಡುತ್ತ,

ತಮ್ಮ ತಮ್ಮ ಒರೆಗಳಿಂದ ಕತ್ತಿಯನ್ನು ಹಿರಿದು, ಅವನ ಮೇಲೆ ಸಾಗಿ ಹೋಗಲುಪಕ್ರಮಿಸಿದರು ಸಹ. ಆಗ ಸುಲ್ತಾನನು ಅವರನ್ನು ತಡೆದು:— "ಚೂಪ್-ಚೂಪ್" ಎಂದು ಒದರಿ, ಎಲ್ಲರಿಗೂ ಸುಮ್ಮನಿರಲು ಹೇಳಿದನು; ಆದರೆ ಆಗಿನ ಆ ವಿಲಕ್ಷಣ ಗೊಂದಲ ಮಯ ಸ್ಥಿತಿಯಲ್ಲಿ ಆ ಶಬ್ದಗಳು ಯಾರ ಕಿವಿಗೂ ಬಿದ್ದಂತೆ ತೋರಲಿಲ್ಲ. ಯಾಕಂದರೆ, ಆ ಜನರು ಆ ಫಿರಂಗಿಯನ್ನು ಹೊಡೆಯಬೇಕೆಂಬ ತಮ್ಮ ಉದ್ಯೋಗವನ್ನು ಇನ್ನೂ ನಡಿಸಿಯೇ ಇದ್ದರು. ಆಗ ಸುಲ್ತಾನನು ಸಿಂಹಾಸನದಿಂದ ಎದ್ದು ನಿಂತು, ದೊಡ್ಡ ದನಿಯಿಂದ: ಸಭಿಕರೇ, ಎಲ್ಲರೂ ಸುಮ್ಮನೆ ಕುಳಿತುಕೊಳ್ಳಿರಿ. ಗೊಂದಲ ಹಾಕಿದರೆ ನಿಮಗೆ ಅಲ್ಲಾನ ಆಣೆಯಿರುತ್ತದೆ. ಯಾವನಾದರೂ ಈ ನಮ್ಮ ಕಟ್ಟಪ್ಪಣೆಗೆ ವ್ಯತ್ಯಯವನ್ನುಂಟು ಮಾಡಿದರೆ, ಅವನು ನನ್ನ ಪ್ರೀತಿಯ ಸರದಾರನಿರಲಿ, ದಿವಾಣನಿರಲಿ ನಾನು ಯಾರ ಉಜುರನ್ನು ಯತ್ಕಿಂಚಿತ್ತೂ ಇಡದೆ, ಅವನನ್ನು ಒದ್ದು ಹೊರಗೆ ಹಾಕಿಸುವೆನು, ಎಂದು ಆಜ್ಞೆ ಮಾಡಿದನು.

ಸಭಿಕರನ್ನುದ್ದೇಶಿಸಿ ಮೇಲಿನಂತೆ ನುಡಿದು, ಒಳಿಕ ಸುಲ್ತಾನನು ಆ ಕೈದಿಯ ಕಡೆಗೆ ಹೊರಳಿದನು. ಸುಲ್ತಾನನು ತನ್ನ ಬಗ್ಗೆ ಇನ್ನು ಏನು ಆಜ್ಞೆ ಮಾಡುವನೋ ಕೇಳಬೇಕೆಂದು ಆತನು ಒಳ್ಳೇ ಉತ್ಸುಕತೆಯಿಂದ ಟೀಪುವಿನ ಕಡೆಗೆ ಟಕಮಕ ನೋಡುತ್ತ ನಿಂತುಕೊಂಡಿದ್ದನು ಆಗ ಟೀಪುವಿನ ಕಣ್ಣುಗಳಿಂದ ಕಿಡಿಗಳುದುರುತ್ತಿದ್ದು, ಮುಖವು ಕಕ್ಕಾವಿಕ್ಕಿಯಾಗಿತ್ತು "ಮೂರ್ಖಾ, ಮಹಾಮೂರ್ಖನು ನೀನು! ಎಲೈ ಫಿರಂಗೀ, ನಿನಗೆ ಹುಚ್ಚು ಹಿಡಿದಿಲ್ಲವಷ್ಟೇ? ನೀನು ಬಹು ದಿವಸಗಳಿಂದ ನಮ್ಮ ಸೆರೆಯಲ್ಲಿರುವದರಿಂದ, ನಿನ್ನ ಆಪ್ತೇಷ್ಟ ಜನರು ನೀನು ಸತ್ತಿರುವಿಯೆಂದೇ ತಿಳಿದಿರುವರು ಅವರು ಹಾಗೆ ತಿಳಕೊಂಡಿರುವದು ಒಂದು ಒ[illegible]ಯಿಂದ ನಿನಗೆ ಪಥ್ಯಕರವಾಗಿಯೇ

ಪರಿಣಮಿಸಿದೆಯೆಂದು ಹೇಳಬೇಕಾಗುವದು. ನೀನು ಇನ್ನು ಪುನ ರ್ಜನ್ಮವನ್ನು ತಾಳಿದಿಯೆಂದು ಭಾವಿಸಿಕೋ. ನಿನಗೆ ಇನ್ನು ಹೊಸ ಹೊಸ ಚಾಕರಿ, ಹೊಸ ಹೊಸ ಪದವಿಗಳು, ವಿಪುಲವಾದ ಸಂಪತ್ತು ಇವುಗಳೆಲ್ಲ ಲಭಿಸುವವಲ್ಲದೆ, ಜಗತ್ತಿನಲ್ಲಿ ಎಲ್ಲಕ್ಕೂ ಶ್ರೇಷ್ಠ ಹಾಗು ಸತ್ಯವಾದ ಮುಸಲ್ಮಾನೀ ಧರ್ಮವು ನಿನ್ನನ್ನು ಅಂಗೀಕರಿಸುವದು. ತಮ್ಮಾ, ನಿನ್ನಂಥ ಸುದೈವಿಗಳು ವಿರಳರಿಂದೇ ಹೇಳಬಹುದು. ಕ್ಯಾಂ ಪ್ಬನ್‌ಸಾಹೇಬ, ಇತ್ತ, ನೋಡು. ಕೇವಲ ಸಹೋದರನಂತಿರುವ ವನೂ, ನಿನ್ನ ನಿಜವಾದ ಹಿತೈಷಿಯೂ, ನಿನ್ನ ಜೀವದ ಗೆಳೆಯನೂ, ನಿನ್ನಲ್ಲಿ ಸಂಪೂರ್ಣ ನಂಬಿಗೆಯಿಟ್ಟವನೂ, ನಿನಗೆ ದೊಡ್ಡ ದೊಡ್ಡ ಪದವಿ, ದೊಡ್ಡ ದೊಡ್ಡ ಅಧಿಕಾರಗಳನ್ನು ಕೊಡಲು ಹಾತೊರೆಯು ತ್ತಿರುವವನೂ ಆದ ಈ ಟೀಪೂಸುಲ್ತಾನನು ನಿನಗೆ ಮಾತ್ರವೆಷ್ಟು ಉಪದೇಶಿಸುತ್ತಾನೆ. ಇದನ್ನು ನೀನು ಚಿತ್ತವಿಟ್ಟು ಲಾಲಿಸು. ನಿನ್ನನ್ನು ನಾನು ನನ್ನ ದಂಡಿನ ಮುಖ್ಯಸ್ಥನನ್ನಾಗ ಮಾಡುವೆನು. ನನ್ನಷ್ಟೇ ನಿನಗೂ ನನ್ನ ರಾಜ್ಯದಲ್ಲಿ ಅಧಿಕಾರಗಳನ್ನು ಕೊಡುತ್ತೇನೆ. ನೀನು ಹ್ಯಾಗೂ ಒಳ್ಳೇ ಬುದ್ಧಿವಂತನಿರುತ್ತೀ. ಆದುದರಿಂದ ಪ್ರತಿ ಯೊಂದು ರಾಜ್ಯದಾಢಳಿತದಲ್ಲೂ ನಾನು ನಿನ್ನ ಸಲಹೆಯಂತೆ ನಡೆ ಯುತ್ತೇನೆ. ನಿನ್ನ ಮನಸ್ಸಿನ ವಿರುದ್ಧವಾಗಿ ಏನನ್ನೂ ಮಾಡಲಿಕ್ಕಿಲ್ಲ. ನೀನು ಯುದ್ಧಶಾಸ್ತ್ರದಲ್ಲಿ ನುರಿತವನಿರುವಂತೆ, ಅಲ್ಲಾನ ಕೃಪೆ ಯಿಂದ ನಾನೂ ಆ ಕಲೆಯನ್ನು ಚನ್ನಾಗಿ ಬಲ್ಲವನಿರುತ್ತೇನೆ ಯುದ್ಧ ಕಾಲದಲ್ಲಿ ನಾವೀರ್ವರೂ ಒಮ್ಮನಸ್ಸಿನಿಂದ ಕೆಲಸ ಮಾಡೋಣ. ತಮ್ಮಾ, ಕ್ಯಾಂಪ್ಬನ್ ಸಾಹೇಬ, ನೀನು ನಿನ್ನೆದುರಿಗೆ ಬಂದಿರುವ ಈ ಸುಗ್ರಾಸದ ಎಡೆಯನ್ನು ಕಾಲಿನಿಂದೊದೆಯಬೇಡ. ತಮ್ಮಾ, ನೀನೀಗ ನನಗೆ ಏನೊಂದು ಉತ್ತರ ಕೊಡದಿದ್ದರೂ ಚಿಂತೆಯಿಲ್ಲ; ಇನ್ನೂ ಮೂರು ದಿನಗಳ ವರೆಗೆ ಶಾಂತಮನಸ್ಸಿನಿಂದ ನಾನು ಹೇಳುವ

ವಿಚಾರಗಳನ್ನು ಪರ್ಯಾಲೋಚಿಸಿ, ಬಳಿಕ ನನ್ನ ಮಾತಿಗೆ ಒಪ್ಪಿಗೆ ಯನ್ನು ಕೊಡು ಅಲ್ಲಿಯ ವರೆಗೆ ನಿನ್ನ ಊಟ-ಉಪಚಾರಗಳ ವ್ಯವಸ್ಥೆಯನ್ನು ಬಹು ಚನ್ನಾಗಿಡುವಂತೆ ಈ ನಿನ್ನ ಸಹೋದರ ಸಮಾ ನನಾದ ಟೀಪುವು ಆಜ್ಞೆ ಮಾಡುತ್ತಾನೆ" ಎಂದು ಸುಲ್ತಾನನು ಆ ಕೈದಿಗೆ ಹೇಳಿದನು.

ಕೂಡಲೆ ಆ ಕೈದಿಯು:—ಸುಲ್ತಾನಸಾಹೇಬ, ನನಗೆ ನಿಮ್ಮ ಆ ಮೂರು ದಿನಗಳ ಅವಧಿಯ ಅವಶ್ಯಕತೆಯೇ ಇಲ್ಲ. ಮೂರು ದಿನಗಳೇಕೆ, ಮೂರು ವರ್ಷಗಳ ನಂತರ ನೀನು ನನ್ನನ್ನು ಕರೆದು ಕೇಳಿದರೂ, ನಾನು ನಿನಗೆ ಆಗಲೆ ಹೇಳಿದ ಉತ್ತರವನ್ನೇ ಹೇಳತಕ್ಕ ವನು. ನಾನು ನಿನ್ನ ಸವಿಮಾತಿಗೆ ಮರುಳಾಗುವದಿಲ್ಲ; ಬಿರಿನುಡಿಗೆ ಅಂಜುವದಿಲ್ಲ. ನೀನು ನನಗೆ ಕೊಡಬೇಕೆಂದಿದ್ದ ಧನ-ದೌಲತ್ತು ಗಳ ಮೇಲೆ ನಾನು ಉಗುಳುತ್ತೇನೆ. ಮತ್ತು-ಮತ್ತು ಅದನ್ನೇ ಮಾತಾಡುವ ನಿನ್ನ ಅಸಭ್ಯತನಕ್ಕಾಗಿ ನನಗೆ ಬಹಳ ಸಂತಾಪವುಂಟಾ ಗುತ್ತಿರುವದು. ನೀನು ಯಾವ ನನ್ನ ನಿರಪರಾಧಿ ಮಿತ್ರರನ್ನು ಕೊಲ್ಲಿಸಿ ರುವೆಯೋ, ಅವರನ್ನು ಜೀವಂತಗೊಳಿಸಿ ನನ್ನೆದುರಿಗೆ ತಂದು ನಿಲ್ಲಿಸಿ ದಾಗ ಮಾತ್ರ ನಾನು ನಿನ್ನ ಚಾಕರಿಯನ್ನು ಕೈಕೊಳ್ಳುತ್ತೇನೆ. ಇಲ್ಲದಿ ದ್ದರೆ, ನಾನು ನಿನ್ನ ಆಜ್ಞೆಯನ್ನೂ, ಭ್ರಷ್ಟಧರ್ಮವನ್ನೂ ಕಾಲಿನಿಂದ ಒದೆಯುತ್ತೇನೆಂದು ತಿಳಿ; ಎಂದು ಕ್ರೋಧಾವಿಷ್ಟನಾಗಿ ಹೇಳಿದನು.

"ಸುವ್ವರ, ರಂಡಿಕೇ ಅವಲಾದ! ಸೈತಾನಬಾದಕೆ ರಹಿವಾಸೀ! ನೀನು ನನ್ನ ಪವಿತ್ರ ಧರ್ಮವನ್ನು ಕಾಲಿನಿಂದ ಒದೆಯುತ್ತೀಯಾ? ಮಿತ್ರರೇ, ಸಭಿಕರೇ, ಈ ನೀಚನ ವಾಣಿಯನ್ನು ಕೇಳಿಕೊಂಡಿರಷ್ಟೇ; ನಿಮಗೆ ಕಿವಿಗಳಿವೆಯೋ-ಇಲ್ಲವೋ? ಧರ್ಮದ ಬಗ್ಗೆ ಸೇಡು ತೀರಿ ಸಿಕೊಳ್ಳುವದು ನಿಮ್ಮ ಮನಸ್ಸಿನಲ್ಲಿಲ್ಲೇನು? ನಿಮ್ಮ ಖಡ್ಗಗಳು ನಿಮ್ಮ ಬಳಿಯಲ್ಲಿವೆಯೋ? ಅವುಗಳನ್ನು ಹೇಗೆ ಉಪಯೋಗ ಮಾಡ

ಬೇಕೆಂಬದನ್ನು ನೀವು ಅರಿತಿರುವಿರಾ?" ಎಂದು ಸುಲ್ತಾನನು ಕೆಂಪ ಡರಿದ ಮುಖದಿಂದ ಆವಸಾನಗೆಟ್ಟು ನುಡಿದನು

ಸುಲ್ತಾನನು ಅಷ್ಟು ಸಿಟ್ಟಿನಿಂದಲೂ ಆವೇಶದಿಂದಲೂ ತನ್ನ ವಿಷಯುವಾಗಿ ಮಾತಾಡುತ್ತಿದ್ದರೂ, ಆ ಇಂಗ್ಲಿಷ ಕೈದಿಯು ಎಳ್ಳಷ್ಟು ಅಂಜದೆ, ಸ್ತಂಭದಂತೆ ಅಚಲವಾಗಿ ನಿಂತುಕೊಂಡಿದ್ದನು; ತನ್ನ ಮಾತಿಗೆ ಒಬ್ಬನೂ ಉತ್ತರ ಕೊಡದ್ದರಿಂದ, ಟೀಪೂಸುಲ್ತಾನನು ಮತ್ತಷ್ಟು ರೇಗಿಗೆದ್ದು:—"ಎಲೈ ದರ್ಬಾರಿಗಳೇ, ನೀವೆಲ್ಲರೂ ಷಂಡ ರಾದಿರೇನು? ನಿಮ್ಮ ಬಳಿಯಲ್ಲಿ ಶಸ್ತ್ರಗಳಿಲ್ಲವೋ? ಕೈಯಲ್ಲಿ ಬಳೆಗಳ ನ್ನಾದರೂ ಇಟ್ಟುಕೊಳ್ಳಬಾರದೆ?" ಎಂಬ ಶಬ್ದಗಳನ್ನು ಒದರಿ ಉಚ್ಚ ರಿಸಲು, ಒಮ್ಮೆಲೆ ಐವತ್ತು-ಅರವತ್ತು ಜನ ಹಿರಿದಕತ್ತಿಯ ಸಭಿ ಕರು ಆ ಉದ್ಧೃತ ಇಂಗ್ಲಿಷ ಕೈದಿಯನ್ನು ತುಂಡರಿಸಲಿಕ್ಕೆ ಧಾವಿಸಿ ಬಂದರು. ಪ್ರಸಂಗವು ಈ ಮಟ್ಟಿಗೆ ಬಂದರೂ ನಮ್ಮ ಕಾಸೀಮನು ಇತ್ತಟ್ಟಿಗೆ ಸುಮ್ಮನೆ ನಿಂತು ನೋಡುತ್ತಿದ್ದನು ಮಾತ್ರ. ಆ ಜನರು ಆ ಕೈದಿಯ ಮೇಲೆ ಹಾಗೆ ಬಿಚ್ಚುಗತ್ತಿಯಿಂದ ಏರಿ ಬರಹತ್ತಲು, ಆಗ ಮಾತ್ರ ಅವನಿಂದ ಸುಮ್ಮನಿರುವದಾಗಲಿಲ್ಲ; ಯಾಕಂದರೆ, ಕಾಸೀಮನು ಬೆಂಗಳೂರ ಕೋಟೆಯಲ್ಲಿ 'ಪ್ರಸಂಗವೊದಗಿದಾಗ ಶಕ್ಯವಿ ದ್ದಷ್ಟು ನಿನಗೆ ಸಹಾಯ ಮಾಡುವೆನೆ'ಂದು ಯಾವ ಇಂಗ್ಲಿಷ ಕೈದಿಗೆ ಅಭಿವಚನವನ್ನಿತ್ತಿದ್ದನೋ, ಈಗ ಅದೇ ಆ ಕೈದಿಯು ಪ್ರಾಣಕ್ಕೆರ ವಾಗುವ ಪ್ರಸಂಗ ಬಂದಿತ್ತು. ಆ ಕೈದಿಯು ಸುಲ್ತಾನನಿಗೆ ಕೊಟ್ಟ ಉತ್ತರಗಳು ಕೇವಲ ಸ್ವಾಭಿಮಾನದವೇ ವಿನಃ, ಉದ್ಧಟತನದ ಲವಲೇಶವೂ ಅವುಗಳಲ್ಲಿಲ್ಲೆಂದು ಕಾಸೀಮನ ಭಾವನೆಯಾಗಿತ್ತು. ಆದರಿಂದ ಸುಲ್ತಾನನು ರೇಗಿಗೆದ್ದು, ಸಭಿಕರನ್ನುದ್ದೇಶಿಸಿ ನುಡಿದ ವಚನಗಳಿಂದ ಕಾಸೀಮನ ಮನಸ್ಸಿನ ಮೇಲೆ ಇಷ್ಟು ಪರಿಣಾಮ ವಂತೂ ಆಗಲೇ ಇಲ್ಲ ಬಿಚ್ಚುಗತ್ತಿಯನ್ನು ಹಿಡಿದುಕೊಂಡು ಆ ಇಂಗ್ಲಿಷ ಕೈದಿಯ ಮೇಲೆ ಏರಿ ಬರುತ್ತಿದ್ದ ಆ ದರ್ಬಾರಿಗಳನ್ನು

ಆತನು ನೋಡಿದೊಡನೆ, ತಾನೂ ತನ್ನ ಖಡ್ಗವನ್ನು ಹಿರಿದು, ಆ ಕೈದಿಯ ಮುಂದೆ ಆ ದರ್ಬಾರಿಗಳಿಗಭಿಮುಖವಾಗಿ ಬಂದು ನಿಂತು: "ಖಬರದಾರ! ಯಾರಾದರೂ ಈತನ ಕೂದಲಿಗೆ ಧಕ್ಕೆ ಹಚ್ಚಿದರೆ. ನೀವೆಲ್ಲರೂ ಗಂಡುಗಲಿಗಳಾಗಿದ್ದರೆ, ಒಬ್ಬೊಂಟಿಗನಾಗಿ ನಿಮ್ಮ ಕೈಯಲ್ಲಿ ಸಿಕ್ಕಿರುವ ಈ ಅಭಿಪ್ರಾಣಿಯನ್ನು ಸಂಹರಿಸಲು ಇಷ್ಟು ಜನರು ಒಮ್ಮೆಲೆ ಹಾತೊರೆಯುತ್ತಿರಲಿಲ್ಲ. ಯಾವನಾದರೂ ನಿಜವಿದ್ದದ್ದನ್ನು ಹೇಳಿದರೆ ಅಥವಾ ಸ್ವಾಭಿಮಾನವನ್ನು ವ್ಯಕ್ತಪಡಿಸಿದರೆ, ಈ ನಿಮ್ಮ ದರ್ಬಾರದಲ್ಲಿ ಇದೇ ಪಾರಿತೋಷಕವೇನು?" ಎಂದು ಗರ್ಜಿಸಿದನು.

"ಕತ್ತೆ, ಮೂರ್ಖ, ನಿನ್ನೆಯ ಹುಡುಗನು ನೀನು ನೀನು ನನ್ನ ಚಾಕರಿ ಮಾಡಹತ್ತಿದ ಮೊದಲನೇ ಕೆಲಸವು ಇದೇ ಏನು? ಮೊದಲನೇ ಸಾರೆಗೇ ನೀನು ನನ್ನ ಅವಮಾನ ಮಾಡಿ, ನನ್ನ ವಿರುದ್ಧ ಶಸ್ತ್ರವನ್ನೆತ್ತುವ ಪಣತೊಟ್ಟಿದ್ದೆಯೇನು? ಆದರೆ ಮೂರ್ಖ, ನೀನು ಮಾಡಿದ ಈ ಕೃತಿಯು ಒಂದು ಬಗೆಯಿಂದ ನನಗೆ ಪಥ್ಯಕರವಾಗಿಯೇ ಪರಿಣಮಿಸಿತು ನೀನು ಈತನ ಜೀವವುಳಿಸುದುದಕ್ಕಾಗಿ ಈತನು ನಿನ್ನನ್ನು ಕಡೆತನಕ ಕಾಪಳಿಸಬಹುದು. ನಾನು ನನ್ನ ಮೊದಲಿನ ವಿಚಾರವನ್ನು ಈಗ ಬದಲಿಸಿರುವೆನು. ಇನ್ನು ಈತನಿಗೆ ಬೇರೆ ಶಿಕ್ಷೆಯನ್ನೇ ವಿಧಿಸುವೆನು" ಎಂದು ಸುಲ್ತಾನನು ಕಾಸೀಮನಿಗೆ ಹೇಳಿ, ಆ ಇಂಗ್ಲಿಷನನ್ನು ಕುರಿತು:-ಎಲೈ ಪಾಪಿಷ್ಠ ಫಿರಂಗೀ, ಮುಸಲ್ಮಾನರ ಕೈಖಡ್ಗದಿಂದ ನಿನ್ನ ಪ್ರಾಣ ಹೋಗಿದ್ದರೆ, ನೀನು ಎಷ್ಟೋ ಪುನೀತನಾಗುತ್ತಿದ್ದೆ; ಅಲ್ಲದೆ ಶಿಪಾಯಿಗೆ ಯೋಗ್ಯವಾದ ಮರಣವೂ ನಿನಗೆ ಲಭಿಸಿದಂತಾಗುತ್ತಿತ್ತು; ಆದರೆ ನನ್ನ ಮನಸ್ಸಿನಲ್ಲಿ ನಿನ್ನನ್ನು ಹಾಗೆ ಕೊಲ್ಲಿಸುವದಿರುವದಿಲ್ಲ. ನಿನ್ನನ್ನು ಪೀಡಿಸಿ-ಪೀಡಿಸಿ, ನಿನ್ನ ಕೈ-ಕಾಲುಗಳನ್ನು ಕಡಿದು ನಿನಗೇ ತಿನ್ನ ಹಚ್ಚಿ, ಕಡೆಗೆ ಆ ನಂದಿ ದುರ್ಗದ ಶಿಖರದ ಮೇಲಿಂದ ನಿನ್ನನ್ನು ದೂಡಿಸುವ ಘೋರ ಶಾಸನ

ವನ್ನು ಇನ್ನು ನಿನಗೆ ವಿಧಿಸುತ್ತೇನೆ. ಎಲ್ಲೈ ಯಾರಿರುವಿರತ್ತ? ಈತ ನನ್ನು ಇಲ್ಲಿಂದ ಎಳೆದೊಯ್ಯಿರಿ. ಇವನನ್ನು ಯಾವದೊಂದು ಬತ್ತಲೆ ತಟ್ಟುವಿನ ಮೇಲೆ ಕೂಡ್ರಿಸಿ, ಇಲ್ಲವೆ ಕಾಲಿಲೆ ನಡಿಸುತ್ತ ದುರ್ಗಕ್ಕೆ ಒಯ್ಯಿರಿ; ಹಾಗು ನನ್ನ ಅಪ್ಪಣೆಯ ಪ್ರಕಾರ ಈತನ ವ್ಯವಸ್ಥೆ ಇಡಿರಿ. ಈತನ ಅಂತವಾದ ಬಳಿಕ ನನಗೆ ಸುದ್ದೀ ತಿಳಿಸಿರಿ. ಇನ್ನು ತಡ ಮಾಡಬೇಡಿರಿ. ಜಾಫರ ಜಮಾದಾರ, ನೀನೇ ಈ ಕೆಲಸಕ್ಕೆ ಯೋಗ್ಯನು. ಈತನಿಗೆ ಕಿಂಚಿತ್ತೂ ದಯೆ ತೋರಿಸಬೇಡ. ಈತನನ್ನು ಎಷ್ಟು ಹೆಚ್ಚು ಪೀಡಿಸಲು ಶಕ್ಯವಿದೆಯೋ, ಅಷ್ಟು ಹೆಚ್ಚು ಪೀಡಿಸಿ ಕೊಲ್ಲಿರಿ. ಈತನನ್ನು ಕೊಲ್ಲುವದಕ್ಕಿಂತ ಮೊದಲು ಈತನ ಎಲ್ಲ ಸಂಗಡಿಗರನ್ನೂ ಈತನೆದುರಿಗೆ ಸಂಹರಿಸಿರಿ ಎಂದು ನುಡಿದನು.

ಸುಲ್ತಾನನ ಈ ಪ್ರಕಾರದ ಕಠೋರ ಅಜ್ಞೆಯನ್ನು ಕೇಳಿದ ಬಳಿಕ, ಆದಾವ ಸೇವಕನು ಸುಮ್ಮನೆ ಕುಳಿತಾನು? ಅವರು ಆ ಕೈದಿಯನ್ನು ಸುತ್ತುಗಟ್ಟಿ, ಅವನನ್ನು ಎಳೆದೊಯ್ಯಹತ್ತಿದರು. ಆಗ ಆ ಇಂಗ್ಲಿಷ ಕೈದಿಯು ಕಾಸೀಮನನ್ನುದ್ದೇಶಿಸಿ:--ಮಿತ್ರಾ, ನಾನಿನ್ನು ಹೊರಡುವೆನು. ಈ ಭೂಮಂಡಲದಲ್ಲಿ ಇನ್ನು ನನ್ನ-ನಿನ್ನ ಭೆಟ್ಟಿ ಯಾಗುವ ಸಂಭವವಿರದಿದ್ದರೂ, ಜಗದೀಶನ ಖಾಸ ಮನೆಯಲ್ಲಿ ನಾವು ಒಬ್ಬರಿಗೊಬ್ಬರು ಭೆಟ್ಟಿಯಾಗೋಣ. ಈ ವಿಶ್ವದಲ್ಲಿಯ ಎಲ್ಲ ಉತ್ಕೃಷ್ಟ ಮನುಷ್ಯರೂ ಒಮ್ಮಿಲ್ಲೊಮ್ಮೆ ಅಲ್ಲಿಗೆ ಬಂದೇ ಬರುವರು; ಆದರೆ ನಿಮ್ಮ ಈ ನೀಚ ಮೈಸೂರ ಹುಲಿ-ಟೀಪುವಿ-ಗೆ ಮಾತ್ರ ಎಂದೂ ಅಲ್ಲಿಗೆ ಬರಲಿಕ್ಕೆ ಅವಕಾಶ ದೊರೆಯಲಿಕ್ಕಿಲ್ಲ. ಹೊರಡುತ್ತೇನಿನ್ನು ಸಲಾಮು! ಸಲಾಮು! ಎಂದು ಗದ್ಗದ ವಾಣಿಯಿಂದ ನುಡಿದು, ಆ ಶಿಪಾಯಿಗಳ ಕೂಡ ಹೊರಟನು ಆ ನುಡಿಯನ್ನು ಕೇಳಿ ಕಾಸೀಮನಿಗೂ ಕಡು ದುಃಖವೆನಿಸಿದ್ದರಿಂದ ಅವನು: ಕ್ಯಾಂಪ್ಬೆನ್‌ಸಾಹೇಬ, ನಿನಗೆ ಕೊಟ್ಟ ವಚನದಂತೆ ನಾನು ನಡೆದೆ

ನಷ್ಟೇ? ಎಂದು ಪ್ರಶ್ನೆ ಮಾಡಲು, "ಗೆಳೆಯಾ, ನೀನು ನಿನ್ನ ವಚನ ವನ್ನು ಪಾಲಿಸಿರುತ್ತೀ; ಹಾಗು ಅದಕ್ಕಾಗಿ ನೀನು ಇನ್ನು ಮಹಾ ಸಂಕಟಕ್ಕೊಳಗಾಗುವೆ; ಆದರೆ ಪರಮದಯಾಘನನಾದ ಪರಮೇ ಶ್ವರನು ನಿನಗೆ ಕಲ್ಯಾಣವನ್ನುಂಟು ಮಾಡಲಿ!" ಎಂದು ಆ ಇಂಗ್ಲಿ ಷನು ಕಾಸೀಮನನ್ನು ಅಂತಃಕರಣಪೂರ್ವಕವಾಗಿ ಹರಸಿದನು.

ಅಷ್ಟರಲ್ಲಿ ಶಿಪಾಯಿಗಳು ಕ್ಯಾಂಪ್ಬೆಲ್ಲನನ್ನು ಮತ್ತೆ ಮಾತಾಡ ಗೊಡದೆ ಎಳೆದೊಯ್ದರು. ಪ್ರತ್ಯಕ್ಷ ಸುಲ್ತಾನನ ದರ್ಬಾರದಲ್ಲಿ, ಆತನ ಕಣ್ಣೆದುರಿಗೆ, ಆತನ ವಿರುದ್ಧವಾಗಿ ನಡೆದ ಕಾಸೀಮನ ಗತಿ ಯೇನಾಗುವದೆಂಬದನ್ನು ತಿಳಿಯಲಿಕ್ಕೆ ನಮ್ಮ ವಾಚಕರು ಹಾತೊರೆ ಯುತ್ತಿರಬಹುದು. ಅದನ್ನೇ ನಾವೀಗ ಹೇಳುತ್ತೇವೆ. ಕ್ಯಾಂಪ್ಬೆಲ್ ಫಿರಂಗಿಯು ಕಣ್ಮರೆಯಾದ ಕೂಡಲೆ, ಸಭಿಕರ ದೃಷ್ಟಿಯು ಕಾಸೀ ಮನ ಕಡೆಗೆ ಹೊರಳಿತು. ಆಗ ಎಲ್ಲರೂ: "ಈ ತುಂಟನು ಫಿರಂಗಿ ಗಳ ಹೇರನು!" ಎಂದು ಕೂಗಹತ್ತಿದರು. ಆ ನುಡಿಯನ್ನು ಕೇಳಿ, ಕಾಸೀಮನು ಸಿಟ್ಟಿನಿಂದ ಹುಚ್ಚಾದನು. ಆತನ ಮುಖವು ಕೆಂಪಡ ರಿತು. ಇನ್ನು ಅವನು ಆ ಸಭಿಕರಿಗೆ ಏನು ಅನ್ನುತ್ತಿದ್ದನೋ ಅದಾರು ಬಲ್ಲರು? ಆದರೆ ಖಾನನು ಅವನನ್ನು ಮಾತಾಡಗೊಡದೆ ಶಾಂತ ಗೊಳಿಸಿದನು. ಕಾಸೀಮನ ಈ ವರೆಗಿನ ವರ್ತನದಿಂದ ಖಾನನಿಗೆ ಬಹು ವಿಷಾದವೆನಿಸಿತ್ತು. ಖಾನನು ಆತನನ್ನು ಹೊಟ್ಟೆಯ ಮಗ ನಿಗಿಂತ ಹೆಚ್ಚು ಪ್ರೀತಿಸುತ್ತಿದ್ದದರಿಂದಲೇ ಆ ನಿಕರದ ಪ್ರಸಂಗದಲ್ಲಿ ಕೂಡ ಆತನು ಕಾಸೀಮನನ್ನು ವಿಶೇಷವಾಗಿ ಅಲ್ಲಗಳೆಯಲಿಲ್ಲ. ಕಡೆಗೆ ಸುಲ್ತಾನನು ಕಾಸೀಮನನ್ನು ಕುರಿತು:—ದುರ್ದೈವಿಯೇ, ನೀನು ಹೀಗೇಕೆ ವರ್ತಿಸಿದೆಯೆಂಬ ಬಗ್ಗೆ ಯೋಗ್ಯವಾದ ಜವಾಬು ಕೊಡು; ಇಲ್ಲದಿದ್ದರೆ ಈಗಿಂದೀಗಲೇ ನಿನ್ನನ್ನು ಗೋರಿಗೊಳಿಸುವೆನು, ಎಂದು ಗರ್ಜಿಸಲು, ಕಾಸೀಮನು ನಮ್ರತಾಪೂರ್ವಕವಾಗಿ ನಿಜ

ಸಂಗತಿಯನ್ನು ನಿವೇದಿಸಿದನು. ಅದನ್ನು ಕೇಳಿ ಸುಲ್ತಾನನ ಸಿಟ್ಟು ಅಡಗಿತು. ಕೂಡಲೆ ಅವನು:—ಕಾಸೀಮಾ, ನಿನ್ನ ವಿಷಯವಾಗಿ ನನ್ನಲ್ಲಿ ಅಷ್ಟು ಪ್ರೇಮವೇ ಉಂಟಾಗಿರುವದರಿಂದ, ಇಂದು ನೀನು ಪಾರಾದೆ. ಇದೇ ಅಪರಾಧವನ್ನು ಮತ್ತಾವನಾದರೂ ಇಲ್ಲಿ ಮಾಡಿದ್ದರೆ, ಈಗಾಗಲೆ ಆತನ ಗತಿಯು ತತಕ್ಷಿಗಾಗಿ ಹೋಗುತ್ತಿತ್ತು! ಅದಿರಲಿ. ನಿನ್ನ ಇಂದಿನ ಅಪರಾಧದಿಂದ ನೀನು ನಿನ್ನ ಬಡತಿಯನ್ನು ಮಾತ್ರ ಮುಳುಗಿಸಿಕೊಂಡೆ. ಇಷ್ಟೇ ಅಲ್ಲ; ನಿನ್ನ ಈ ಅಪರಾಧಕ್ಕಾಗಿ ನಿನ್ನ ಸಂಬಳದಲ್ಲಿ ಎರಡು ಹೊನ್ನುಗಳನ್ನು ಕಡಿಮೆ ಮಾಡಿರುವೆವು; ಹಾಗು ನಿನ್ನನ್ನು ನಮ್ಮ ಕೃಪಾತಿಗಿಟ್ಟುಕೊಳ್ಳಬೇಕೆಂಬ ನಮ್ಮ ಬೇತನ್ನೂ ರಹಿತ ಪಡಿಸಿರುವೆವು. ಇನ್ನು ಮೇಲೆ ಖಾನಸಾಹೇಬರ ಕಡೆಗೇ ನೀನಿರು. ಇನ್ನು ಮುಂದೆ ಬಹು ಎಚ್ಚರಿಕೆಯಿಂದ ನಡೆ, ಎಂದು ಬಜಾಯಿಸಿ ಕಳಿಸಿಕೊಟ್ಟನು.

ಈ ಪ್ರಕಾರ ಕಾಸೀಮನಿಗೆ ಆಜ್ಞಾಪಿಸಿ, ಸುಲ್ತಾನನು ಮತ್ತೆ ಎಲ್ಲರಿಗೂ ಸುಮ್ಮನಿರಲಿಕ್ಕೆ ತಿಳಿಸಿ, ಆತ್ಮಸ್ತುತಿಪರವಾದ ಹಾಗು ಅದ್ಭುತ ಸ್ವಪ್ನಗಳಿಂದ ಪರಿಪ್ಲುತವಾದ ಭಾಷಣವನ್ನು ಮಾಡಿದನು. ಟೀಪುವು ಹಿಳ್ಳೀ ಶೂರನೂ, ಕ್ರೂರನೂ, ಸಾಹಸಿಯೂ, ಧರ್ಮಾಭಿಮಾನಿಯೂ ಇದ್ದಂತೆ, ಆತ್ಮಸ್ತುತಿಪ್ರಿಯನೂ ಸ್ವಪ್ನಾದಿ ದೈವೀ ಚಮತ್ಕಾರಗಳಿಂದ ದೇವರು ತನ್ನೊಡನೆ ಲೀಲೆಯಾಡುವನೆಂಬ ಹುಚ್ಚ ಭಾವನೆಯುಳ್ಳವನೂ ಆಗಿದ್ದನು. ಬಳಿಕ ಯಾವ ಯಾವ ಸೈನ್ಯಗಳು ಯಾವ ಯಾವ ಪ್ರಾಂತದ ಮೇಲೆ ದಂಡೆತ್ತಿ ಹೋಗಬೇಕೆಂಬ ಬಗ್ಗೆ ಕಟ್ಟಪ್ಪಣೆ ಮಾಡಿದನು. ಇಷ್ಟರಲ್ಲಿ ಹೈದ್ರಾಬಾದದ ನವಾಬನ ಬಳಿಗೆ ಖಾನನಿಗೆ ಹೋಗಿ ಬರಲಿಕ್ಕೆ ಹೇಳಿದ ಸಂಗತಿಯು ನೆನಪಾಗಲು, ಅವನು ಅಂದಿನ ದರ್ಬಾರವನ್ನು ಬರಖಾಸ್ತ ಮಾಡಿಸಿ, ಖಾನನೊಡನೆ ತನ್ನ ಮಂತ್ರಣಾಗಾರಕ್ಕೆ ತೆರಳಿದನು.

# ಹರಬರ್ಟ ಕ್ಯಾಂಪ್ಬೆಲ.

"ನಿಜಾಮ ಅಲ್ಲೀಖಾನನು ನಮ್ಮ ಸರಕಾರಕ್ಕೆ ಕೇವಲ ಅನುಕೂಲನಾಗಿರುವನು. ಸದ್ಯಕ್ಕೆ ಅನಿವಾರ್ಯವೆಂದು ಆತನು ಇಂಗ್ಲಿಷರಿಗೆ ಗುಂಟೂರಪ್ರಾಂತವನ್ನು ಕೊಟ್ಟು ಒಪ್ಪಂದ ಮಾಡಿಕೊಳ್ಳುತ್ತಿದ್ದರೂ, ಆ ಒಡಂಬಡಿಕೆಯು ಮೇರೆಗೆ ನಡಕೊಳ್ಳುವದು ಆತನ ಮನಸ್ಸಿನಲ್ಲಿಲ್ಲ. ತನಗೆ ಯಾರೊಬ್ಬರ ಬೆಂಬಲ ಸಿಕ್ಕರೆ, ಇಂದೇ ತಾನು ಆ ಇಂಗ್ಲಿಷ ಕಾಫರರನ್ನು ಈ ದೇಶದಿಂದ ಹೊಡೆದೋಡಿಸುತ್ತೇನೆಂದು ನಿಜಾಮನು ಅನ್ನುತ್ತಾನೆ. ಬೇರೆಯವರ ಸಹಾಯಕ್ಕಿಂತಲೂ ಆತನು ಸಜಾತೀಯರಾದ ನಮ್ಮ ಸರಕಾರದ ಬೆಂಬಲವನ್ನೇ ಮನಃಪೂರ್ವಕವಾಗಿ ಅಪೇಕ್ಷಿಸುತ್ತಿರುವನು; ಹಾಗು ಅದಕ್ಕಾಗಿಯೇ ಆತನ ಕಡೆಯ ವಕೀಲನು ಕ್ಷಿಪ್ರದಲ್ಲಿಯೇ ಇತ್ತ ಬರುವವನಾಗಿದ್ದಾನೆ" ಎಂದು ಅಬ್ದುಲ್‌ರಹಿಮಾನಖಾನನು ಹೇಳಿದ ಸಂಗತಿಯನ್ನು ಕೇಳಿ, ಟೀಪೂಸುಲ್ತಾನನು ಮಹದಾನಂದ ಮಗ್ನನಾದನು!

ಯಾವನು ತುಂಬಿದ ದರ್ಬಾರದಲ್ಲಿ ಸ್ವಲ್ಪವೂ ಹೆದರದೆ ಶಿಪಾಯಿಗೆ ಯೋಗ್ಯವಾದ ಉತ್ತರವನ್ನು ಟೀಪುವಿಗೆ ಕೊಟ್ಟನೋ, ಆ ಕೈದಿಯು ಇಂಗ್ಲಂಡ ದೇಶದೊಳಗಿನ ದೊಡ್ಡ ಮನೆತನದ ಒಬ್ಬ ಸನ್ಯಾಸ್ಯ ಪಾದ್ರಿ(ಧರ್ಮಾಧಿಕಾರಿ)ಯ ಮಗನಾಗಿದ್ದನು. ಆತನ ಹೆಸರು ಹರಬರ್ಟ ಕ್ಯಾಂಪ್ಬೆಲ. ತನ್ನಂತೆ ತನ್ನ ಮಗನನ್ನೂ ಪಾದ್ರಿಯನ್ನಾಗಮಾಡಬೇಕೆಂದು ಹರ್ಬರ್ಟನ ತಂದೆಯು ಮನಸ್ಸಿನಲ್ಲಿತ್ತು; ಆದರೆ ಹರ್ಬರ್ಟನ ಒಲವು ಅತ್ತ ಕಡೆಗೆ ಇರದ್ದರಿಂದ, ಅವನು ಉಚ್ಚ ತರಗತಿಯ ಶಿಕ್ಷಣವನ್ನು ಮುಗಿಸಿದ ನಂತರ ತಂದೆ-ತಾಯಿಗಳ ಮನಸ್ಸನ್ನೊಲಿಸಿ ದಂಡಿನಲ್ಲಿ ಸೇರುವದಕ್ಕೆ ಸಮ್ಮತಿಯನ್ನು ಪಡೆದನು. ಮಗನ ಈ ಸಾಹಸದ ವಿಚಾರವನ್ನು ತಿಳಿದು, ಆ ಪಾದರಿಯು

ಮೊದ-ಮೊದಲು ಮಗನಿಗೆ ನಾನಾ ವಿಧವಾಗಿ ಬೇಡೆಂದು ಹೇಳಿದನು; ಆದರೆ ಮಗನ ಒಲವೇ ಅತ್ತ ಕಡೆಗಿರುವದೆಂಬದು ಆತನಿಗೆ ತಿಳಿದು ಬರಲು, ಅವನು ತನ್ನ ಮಗನನ್ನು ದಂಡಿನಲ್ಲಿ ಸೇರಿಸಿದನು. ಆ ಪಾದರಿಯು ದೊಡ್ಡ ಮನೆತನದವನೆಂದು ಹಿಂದೆಯೇ ಹೇಳಿರುವದಷ್ಟೇ? ಅದರಿಂದ ಆತನ ಭಿಡೆ ಮುರವತ್ತುಗಳ ಮೂಲಕ ಹರ್ಬರ್ಟ ಕ್ಯಾಂಪ್ಬೆಲ್ಲನಿಗೆ ಆತನ ಯೋಗ್ಯತೆಗೆ ತಕ್ಕ ಚಾಕರಿಯು ದೊರಕಿತು ಅವನು ಇಂಗ್ಲಂಡ ದೇಶದೊಳಗಿನ ಕಾಲಾಳಿನ ಪಥಕದಲ್ಲಿಯೇ ಸೇರಿದನು. ಹರ್ಬರ್ಟ ಕ್ಯಾಂಪ್ಬೆಲ್ಲನು ಬಹಳ ಜಾಣನೂ ಸದ್ಗುಣಿಯೂ ವಿನಯಶೀಲನೂ ಆಗಿದ್ದುದರಿಂದ, ಅವನು ತನ್ನ ಮೇಲಧಿಕಾರಿಗಳಿಗೂ, ಕೈಕೆಳಗಿನವರಿಗೂ ಬಹಳ ಪ್ರಿಯನಾಗಿದ್ದನು.

ಹೀಗೆ ವರ್ಷಾರು ತಿಂಗಳು ಆತನು ತನ್ನ ದೇಶದಲ್ಲಿಯೇ ಚಾಕರಿ ಮಾಡುತ್ತ, ಆಗಾಗ್ಗೆ ಮನೆಯವರಿಗೂ ಪ್ರಿಯ ಜನರಿಗೂ ಭೇಟಿಯಾಗುತ್ತ ಕಾಲಕ್ರಮಿಸುತ್ತಿರಲು, ಆತನಿದ್ದ ಆ ದಂಡಿಗೆ ಹಿಂದುಸ್ತಾನಕ್ಕೆ ತೆರಳಲಿಕ್ಕೆ ಅಪ್ಪಣೆಯಾಯಿತು. ಆಗ ಹಿಂದುಸ್ತಾನದಲ್ಲಿ "ಈಸ್ಟ ಇಂಡಿಯಾ ಕಂಪನಿ"ಯು ವ್ಯಾಪಾರ ಮಾಡುತ್ತಿದ್ದು, ಅದು ಇಲ್ಲಿಯ ಹಲಕೆಲವು ಪ್ರಾಂತಗಳನ್ನು ನಾನಾ ಬಗೆಯಿಂದ ಆಕ್ರಮಿಸಿ, ದಿನೇ ದಿನೇ ತನ್ನ ರಾಜ್ಯದ ವಿಸ್ತಾರವನ್ನು ಬೆಳಿಸಲಾರಂಭಿಸಿದ್ದಿತು ಆ ಸಂಪಾದಿಸಿದ ರಾಜ್ಯವನ್ನು ಸಂರಕ್ಷಿಸಲಿಕ್ಕೂ, ಹೊಸಹೊಸ ಪ್ರಾಂತಗಳನ್ನು ನುಂಗಲಿಕ್ಕೂ ಇಂಗ್ಲಂಡದ ಅರಸರಿಂದ ದಂಡಿನ ಸಹಾಯವನ್ನು ಅಪೇಕ್ಷಿಸುತ್ತಿದ್ದದರಿಂದ. ಕೆಲವೊಂದು ಕರಾರಿನ ಮೂಲಕ ಅವರು ತಮ್ಮ ದಂಡನ್ನು ಕಂಪನಿಯ ಸಹಾಯಕ್ಕೆ ಕೊಡುತ್ತಿದ್ದರು ಹರ್ಬರ್ಟನು ದಂಡಿನಲ್ಲಿ ಸೇರಿದಾಗ ಸಾವಿರಾರು ಮೈಲು ದೂರದಲ್ಲಿರುವ ಹಿಂದುಸ್ತಾನ ದೇಶಕ್ಕೆ ಹೋಗುವ ಪ್ರಸಂಗ ಬಂದೀತೆಂಬದು ಆ ನವತರುಣನಿಗೆ ಹೇಗೆ ಹೊಳೆಯಬೇಕು? ಅಂಥ

ಪ್ರಸಂಗವೇ ಬಂದರೆ, ತನ್ನ ಛಿಡೆ-ಘುುರುವತ್ತುಗಳನ್ನು ಖರ್ಚು ಮಾಡಿ ತನ್ನ ಮಗನನ್ನು ಈ ದಂಡಿನ ಚಾಕರಿಯಿಂದ ಸಹಜವಾಗಿ ಬಿಡಿಸ ಬಹುದೆಂಬ ಭರವಸೆಯಿಂದ ಆತನ ತಂದೆಯಾದರೂ ಆತನಿಗೆ ದಂಡಿ ನಲ್ಲಿ ಸೇರಲು ಅಪ್ಪಣೆಯನ್ನಿತ್ತಿದ್ದನು. ಈಗ ಪ್ರಸಂಗವೇ ಬಂದುದ ರಿಂದ ಆ ಪಾದ್ರಿಯು ತನ್ನ ಮಗನನ್ನು ಬೇರೆ ಪಲಟಣದಲ್ಲಿ ವರ್ಗ ಮಾಡಿಸಲಿಕ್ಕೂ ಇಲ್ಲವೆ ಆತನನ್ನು ಆ ಚಾಕರಿಯಿಂದ ಬಿಡುಗಡೆ ಮಾಡಿಸಲಿಕ್ಕೂ ಹವಣಿಸಿದನು; ಆದರೆ ತಂದೆಯ ಆ ವಿಚಾರವು ಶೂರ ಹಾಗು ರಣೋತ್ಸಾಹಿಯಾದ ಹರ್ಬರ್ಟ ಕ್ಯಾಂಪ್ಬೆಲ್‌ನ ಮನ ಸ್ಸಿಗೆ ಬರಲಿಲ್ಲ. ತಾನು ದಂಡಾಳುವಾಗಿದ್ದು ಪ್ರಸಂಗವೊದಗಿದಾಗ ಸಾಯಲಿಕ್ಕೆ ಅಂಜಿ, ಭೀರುವಿನಂತೆ ಮನೆ ಸೇರುವದು ತಕ್ಕದ್ದಲ್ಲೆಂದು ಆತನು ನಿರ್ಧರಿಸಿದನು; ಹಾಗು ಅದಕ್ಕಾಗಿ ಅವನು ತನ್ನ ತಂದೆ-ತಾಯಿ, ತಾನು ವರಿಸ ಬಯಸಿದ್ದ ಪ್ರಿಯವಧುವಾದ ಆ್ಯಮಿ ಮೊದ ಲಾದವರ ಆಗ್ರಹದ ಕಡೆಗೆ ಲಕ್ಷ್ಯಗೊಡದೆ, ತನ್ನ ದಂಡಿನೊಡನೆ ಹಿಂದುಸ್ಥಾನಕ್ಕೆ ಹೊರಡುವದನ್ನೇ ನಿಶ್ಚಯಿಸಿದನು.

ಕಡೆಗೆ ಹರ್ಬರ್ಟ ಕ್ಯಾಂಪ್ಬೆಲ್‌ನ ದಂಡು ಹೊರಡುವ ದಿನವು ಪ್ರಾಪ್ತವಾಯಿತು. ಪದ್ಧತಿಯ ಮೇರೆಗೆ ದಂಡಿನ ಎಲ್ಲ ಸಿದ್ಧತೆಯೂ ಆಯಿತು. ಹಡಗವು ಹೊರಡುವ ಗಂಟೆ ಕೂಡ ಆಯಿತು. ತಮ್ಮ ಇಷ್ಟ-ಮಿತ್ರರನ್ನು ಕಳಿಸಲಿಕ್ಕೆ ಬಂದಿದ್ದವರಿಗೆ ಹಡಗದಿಂದ ಕೆಳಗಿಳಿ ಯಲು ಸೂಚನೆಯಾಯಿತು. ಆಗ ಆ ವೃದ್ಧ ಪಾದರಿಯು ತನ್ನ ಮಗನ ಕಡೆಗೆ ನೋಡುತ್ತ ಸದ್ಗದಿತಾಂತಃಕರಣದಿಂದ:-ಹರ್ಬರ್ಟ, ಇನ್ನು ನಿನ್ನನ್ನು ಕಾಪಾಡಲಿಕ್ಕೆ ಆ ಜಗದೀಶನೇ ನಿನ್ನನ್ನನುಸರಿಸಲಿ! ನೀನಿನ್ನು ಎಷ್ಟೋ ಸಂಕಟಗಳಿಗೆ ಬಲಿಯಾಗಬೇಕಾದರೂ, ಅವುಗ ಳಿಂದ ಪಾರಾಗಿ ಕಡೆಗೆ ನೀನು ನಮಗೆ ತೀವ್ರವೇ ಭೇಟಿಯಾಗುವ ಭರವಸೆಯು ನನಗಿರುತ್ತದೆ. ನಾನು ದಿನಾಲು ನಿನ್ನ ಕಲ್ಯಾಣವನ್ನು

ಕುರಿತು, ಏಸುವನ್ನು ಪ್ರಾರ್ಥಿಸುವೆನು. ನಿನಗೆ ಎಂಥ ಕಠಿಣಾವಸ್ಥೆಯು ಪ್ರಾಪ್ತವಾದರೂ ನೀನು ನಿನ್ನ ಶೀಲವನ್ನೂ, ದೇಶಾಭಿಮಾನವನ್ನೂ, ಸ್ವಕರ್ತವ್ಯವನ್ನೂ ಬಿಡಬೇಡ. ಇವುಗಳ ರಕ್ಷಣೆಗಾಗಿ ನೀನು ಸತ್ತರೂ ಚಿಂತೆಯಿಲ್ಲ; ಆದರೆ ಶೀಲಭ್ರಷ್ಟನಾಗಿ ದೇಶದ್ರೋಹ ಬಗೆದು, ಕರ್ತವ್ಯಪರಾಙ್ಮುಖನಾಗಿ ಹಿಂದಿರುಗಬೇಡ; ಹಾಗೆ ನೀನು ಬಂದುದೇ ಆದರೆ, ನಾನು ನಿನ್ನ ಮೋರೆಯನ್ನು ಕೂಡ ನೋಡುವದಿಲ್ಲ. ಇನ್ನು ನಾನು ಹೆಚ್ಚು ಹೇಳಲಾರೆನು, ಎಂದಂದವನೇ ಮಗನನ್ನು ಒಮ್ಮೆ ಬಿಗಿಯಾಗಿ ಅಪ್ಪಿಕೊಂಡು, ಹಡಗದಿಂದ ಇಳಿದನು ಮಾತ್ರ ಅಷ್ಟರಲ್ಲಿ ಹಡಗವು ಬಿಟ್ಟಿತು. ಆ ಪಾದರಿಯೂ, ಆತನ ಪತ್ನಿಯೂ, ಹರ್ಬರ್ಟನ ಭಾವೀ ಪತ್ನಿಯಾದ ಆ್ಯಮಿ ಮೊದಲಾದ ಹರ್ಬರ್ಟನ ಪ್ರಿಯ ಜನರೂ ಆ ಹಡಗವು ಕಣ್ಮರೆಯಾಗುವ ವರೆಗೂ ದಂಡೆಯ ಮೇಲೆ ನಿಂತು ನೋಡುತ್ತಿದ್ದರು. ಆ ಸಮುದ್ರಯಾನವು ಕಾಣದಾದ ಕೂಡಲೆ ಉಸಿರ್ಗರೆಯುತ್ತ, ಅವರೆಲ್ಲರೂ ಮನೆಯ ದಾರಿಯನ್ನು ಹಿಡಿದರು.

ನಮ್ಮ ಕಥಾನಕವು ನಡೆದ ಕಾಲಕ್ಕೆ ಈಗಿನಂತೆ ಇಂಗ್ಲಂಡದಿಂದ ಹೊರಟ ಹಡಗವು ೧೭ನೇ ದಿವಸ ಹಿಂದುಸ್ತಾನಕ್ಕೆ ತಪ್ಪದೆ ಬರುವ ರಹದಾರಿಯು ಇರಲಿಲ್ಲ. ಆಗ ಏನಿಲ್ಲೆಂದರೂ ಐದಾರು ತಿಂಗಳ ಅವಧಿಯು ಬೇಕಾಗುತ್ತಿತ್ತು. ಹರ್ಬರ್ಟನ ಹಡಗವು ಇಂಗ್ಲಂಡದಿಂದ ಹೊರಟು ಐದು ತಿಂಗಳು ಕಳೆದ ಮೇಲೆ, ಒಂದು ದಿನ ಅವರಿಗೆ ಹಿಂದುಸ್ತಾನದ ಪಶ್ಚಿಮದಂಡೆಯು ಕಾಣತೊಡಗಿತು. ಐದಾರು ತಿಂಗಳು ಗಟ್ಟಲೆ ಒಂದೇಸವನೆ ನೀರಲ್ಲಿ ವಾಸಿಸಿದ ನಂತರ, ಒಂದು ದಿನ ಭೂಭಾಗವು ಕಣ್ಣಿಗೆ ಬಿದ್ದಾಗ, ಭೂಚರ ಪ್ರಾಣಿಯಾದ ಮನುಷ್ಯನಿಗೆ ಎಷ್ಟು ಆನಂದವಾಗಬಹುದು? ಹಡಗವು ಮುಂಬಯಿ ಬಂದರಕ್ಕೆ ತಲ್ಪಿದ ಬಳಿಕ ಅವರ ದಂಡು ಮದ್ರಾಸಕ್ಕೆ ರವಾನಿಸಲ್ಪಟ್ಟಿತು.

ದಾರಿಯಲ್ಲಿ ಅವರಿಗೆಷ್ಟೋ ಸಣ್ಣ-ಪುಟ್ಟ ಕಾಳಗಗಳನ್ನು ಮಾಡುವ ಪ್ರಸಂಗ ಬಂತು. ಮದ್ರಾಸಕ್ಕೆ ಮುಟ್ಟದ ನಂತರ ತೀವ್ರವೇ ಹೈದರ ಅಲ್ಲಿಯ ಕೂಡ ಇಂಗ್ಲಿಷರ ಕಾಳಗವಾಯಿತು. ಅದರಲ್ಲಿ ಹರ್ಬರ್ಟ ಕ್ಯಾಂಪ್ಬೆಲ್ಲನ ದಂಡೂ ಆಸಕ್ತವಾಗಿತ್ತು. ನಂತರ ಹಿಂದೇ ವರ್ಷ ದಲ್ಲಿ ಹೈದರಅಲ್ಲಿಯು ಮರಣ ಹೊಂದಲು, ಟೀಪೂಸುಲ್ತಾನನು ಪಟ್ಟ ವೇರಿದನು. ಟೀಪುವು ಹಿಳ್ಳೇ ಉತಾವಳಿ ಸ್ವಭಾವದವನಾದ್ದರಿಂದ ತಂದೆಯು ಕರಾರನ್ನು ಮುರಿದು, ಕೂಡಲೆ ಆವನು ಇಂಗ್ಲಿಷರೊಡನೆ ಕಾಲು ಕೆದರಿ ನ್ಯಾಯು ತೆಗೆದನು. ಹುಸೇನಗಡಿ ಎಂಬಲ್ಲಿ ಆತನು ಇಂಗ್ಲಿಷರೊಡನೆ ಮೊದಲನೇ ಸಾರೆ ಕಾದಿದನು. ಆ ಯುದ್ಧದಲ್ಲಿ ಇಂಗ್ಲಿಷರ ಎಷ್ಟೋ ಸೈನಿಕರು ಮಡಿದರು. ಅವರಲ್ಲಿ ಹರ್ಬರ್ಟನ ಜೀವದ ಗೆಳೆಯರಾಗಿದ್ದ ನಾಲ್ವರಲ್ಲಿ ಹಿಬ್ಬನು ಮಡಿದನು; ಇನ್ನೊ ಬ್ಬನು ಗಾಯು ಹೊಂದಿ, ರಜೆ ಪಡೆಕೊಂಡು ಸ್ವದೇಶಕ್ಕೆ ಹೋದನು. ಸತ್ತವನ ಮರಣ ವಾರ್ತೆಯನ್ನು ಹರ್ಬರ್ಟನು ಪತ್ರ ಮುಖಾಂತರ ತವಮ್ಮರಿಗೆ ತಿಳಿಸಿದನು.

ಟೀಪುವು ಪಟ್ಟವೇರಿದಾಗಿನಿಂದ ಆತನು ಹಿಂದಿಲ್ಲೊಂದು ಬಗೆ ಯಾಗಿ ಇಂಗ್ಲಿಷರಿಗೆ ಉಪಟಳವನ್ನು ಕೊಡುತ್ತಲೂ, ಅವರೊಡನೆ ಸಣ್ಣ ದೊಡ್ಡ ಕಾಳಗ ಮಾಡುತ್ತಲೂ ಇದ್ದನು ಮುಂದೆ ಕೆಲ ದಿನ ಗಳಲ್ಲಿ ಹರ್ಬರ್ಟನ ದಂಡು ಬೇದನೂರನ್ನು ಗೆದ್ದು, ಅಲ್ಲಿ ತಳವೂರಿ ನಿಂತಿತು. ಇಷ್ಟರಲ್ಲಿ ಅಬ್ದುಲ್‌ರಹಿಮಾನಖಾನನ ದಂಡಿನ ಜಮಾ ದಾರನಾದ ಜಾಫರನು ತಾನು ಟೀಪುವಿನ ಚಾಕರಿ ಬಿಟ್ಟು, ನಿಮ್ಮ ಲ್ಲಿಯೇ ನೌಕರಿ ಇರುವೆನೆಂದು ಸುಳ್ಳು ಹೇಳಿ, ಆ ದಂಡಿನಲ್ಲಿ ಪ್ರವೇಶಿ ಸಿದನು; ಹಾಗು ಟೀಪುವು ಸಸೈನ್ಯವಾಗಿ ಸಮೀಪದಲ್ಲಿಯೇ ಇದ್ದರೂ ಆತನು ಶ್ರೀರಂಗಪಟ್ಟಣದಲ್ಲಿರುವನೆಂಬ ಬಗ್ಗೆ ಖೊಟ್ಟ ಪತ್ರಗಳನ್ನು ತಂದು ತೋರಿಸಿ, ಆ ಇಂಗ್ಲಿಷ ದಂಡಿನ ಮುಖ್ಯಸ್ಥನನ್ನು ಮೋಸ

ಗೊಳಿಸಿದನು. ಇಂಗ್ಲಿಷರ ದಂಡು ಹೀಗೆ ಅಸಾವಧ ಸ್ಥಿತಿಯಲ್ಲಿರು ವಾಗ ಒಂದು ದಿನ ಬೆಳಗಾಗುವಷ್ಟರಲ್ಲಿ ಟೀಪುವಿನ ದಂಡು ಬಂದು ಅವರನ್ನು ಮುತ್ತಿತು!

ಇಂಗ್ಲಿಷ ದಂಡಿನ ಜನರು ಟೀಪುವಿನ ಜನರಿಗಿಂತ ಕಡಿಮೆಯಿ ದ್ದರು. ಮೇಲಾಗಿ ಅವರು ಆಕಸ್ಮಿಕವಾಗಿ ಟೀಪುವಿನ ಬಲೆಯಲ್ಲಿ ಸಿಕ್ಕಿದ್ದರು. ಆದರಿಂದ ಅವರ ಹೌಹಾರಿತು. ಕೆಲ-ಕೆಲವರಂತೂ ದಾರಿ ಸಿಕ್ಕತ್ತ ಓಡಿ ಹೋಗುವ ಉದ್ಯೋಗ ನಡಿಸಿದರು. ಉಳಿದ ಅಲ್ಪ ಸ್ವಲ್ಪ ಜನರು ಕಾದಿದರು; - ಆದರೆ ಫಲಿತಾಂಶವೇನೂ ಆಗದೆ ಕೆಲವರು ಪ್ರಾಣಕ್ಕೆರವಾದರು. ಉಳಿದ ತುಸ ಜನರು ಟೀಪುವಿನ ಸೆರೆಯಾಳಾಗಿ ನಂದಿದುರ್ಗಕ್ಕೆ ಸಾಗಿಸಲ್ಪಟ್ಟರು. ಸೆರೆ ಸಿಕ್ಕವರಲ್ಲಿ ನಮ್ಮ ಹರ್ಬರ್ಟ ಕ್ಯಾಂಪ್ಸ್ಟನೂ ಆತನ ಸ್ನೇಹಿತನಾದ ಮ್ಯಾಂಥ್ಯೂ ಸನೂ ಪ್ರಮುಖರಾಗಿದ್ದರು.

ಅವರು ಸೆರೆಯಲ್ಲಿ ಸಿಕ್ಕಂದಿನಿಂದ ಟೀಪುವು ಅವರನ್ನು ನಾನಾ ಬಗೆಯಾಗಿ ಪೀಡಿಸಿ, ತನ್ನ ದಂಡಿನ ಚಾಕರಿ ಮಾಡುವ ಸಲುವಾ ಗಿಯೂ, ಮುಸಲ್ಮಾನೀ ಧರ್ಮದ ದೀಕ್ಷೆಯನ್ನು ತಕ್ಕೊಳ್ಳುವ ಸಲು ವಾಗಿಯೂ ಒತ್ತಾಯ ಪಡಿಸುತ್ತಿದ್ದನು; ಆದರೆ ನಿಜವಾದ ದೇಶಾ ಭಿಮಾನಿಗಳಾದ ಆ ಇಂಗ್ಲಿಷರು ಎಷ್ಟು ಪೀಡಿಸಿದರೂ ಆತನ ಮಾತಿಗೆ ಒಪ್ಪದಾದ್ದರಿಂದ, ಟೀಪುವು ಅವರಲ್ಲಿಯ ಒಬ್ಬೊಬ್ಬನನ್ನೇ ನಂದಿ ದುರ್ಗದ ಶಿಖರದ ಮೇಲಿಂದ ದೂಡಿಸಿ ಕೊಲ್ಲಿಸಹತ್ತಿದನು. ಟೀಪುವು ಹರ್ಬರ್ಟ ಕ್ಯಾಂಪ್ಸ್ಟನಿಗೆ ತನ್ನ ದರ್ಬಾರದಲ್ಲಿ ಎಂತೆಂಥ ಆಶೆ ಹಚ್ಚಿ ಆತನನ್ನು ಫಿತೂರ ಮಾಡಿಕೊಳ್ಳಲು ಪ್ರಯತ್ನಿಸಿದನೆಂಬದನ್ನು ನಮ್ಮ ವಾಚಕರು ಹಿಂದಿನ ಪ್ರಕರಣದಿಂದ ತಿಳಿದೇ ಇರುವರು. ಟೀಪುವಿನ ಕೊನೆಯ ಹುಕುಮಿನ ಪ್ರಕಾರ ಜಾಫರನು ಈಗ ಅವನನ್ನು ಪೀಡಿಸ ಲಿಕ್ಕೆ ಟೊಂಕ ಕಟ್ಟಿದ್ದನು.

ಜಾಫರನು ಮಹಾ ನೀಚನೂ, ದ್ರವ್ಯಲೋಭಿಯೂ ಆಗಿದ್ದ ನೆಂಬದನ್ನು ನಮ್ಮ ವಾಚಕರು ಅರಿತೇ ಇರುವರು. ಇಂಗ್ಲಿಷರು ಬೇದನೂರಿಂದ ಹೊರಬೀಳುವಾಗ, ಆ ಮೊದಲು ಅವರು ಸುಲಿದು ಸಂಪಾದಿಸಿದ್ದ ದ್ರವ್ಯವನ್ನು ಯಾವುದೊಂದು ಸ್ಥಳದಲ್ಲಿ ಹೂಟ್ಟಿರ ಬೇಕೆಂದೂ, ಆ ಸಂಗತಿಯು ಹರ್ಬರ್ಟ ಕ್ಯಾಂಪ್ಬೆಲನಿಗೆ ಗೊತ್ತಿರ ಬೇಕೆಂದೂ ಆಗಿನಿಂದಲೂ ಜಾಫರನ ತಿಳವಳಿಕೆಯಾಗಿತ್ತು; ಆದರೆ ಕ್ಯಾಂಪ್ಬೆಲನನ್ನು ರಹಸ್ಯವಾಗಿ ಕಂಡು, ಆ ಬಗ್ಗೆ ಕೇಳಿ ತಿಳಕೊಳ್ಳುವ ಯೋಗವು ಜಾಫರನಿಗೆ ಎಷ್ಟೋ ದಿನಗಳ ವರೆಗೆ ಲಭಿಸಿರಲಿಲ್ಲ. ಹಿಂದಿನ ಪ್ರಕರಣದ ಕೊನೆಗೆ ಟೀಪುವು ಅಪ್ಪಣೆಯಿತ್ತಂತೆ ಕ್ಯಾಂಪ್ಬೆಲ ಮೊದಲಾದವರನ್ನು ಪೀಡಿಸಿ-ಪೀಡಿಸಿ ಕೊಲ್ಲುವ ಕಾಮಗಿರಿಯು ಆ ಜಾಫರನಿಗೇ ಅನಾಯಾಸವಾಗಿ ಲಭಿಸಿದ ಬಳಿಕ ಆತನು ಬಿಡುವನೇ? ಅವನು ಆ ಕೈದಿಗಳನ್ನು ಬಹು ಶೀಘ್ರವಾಗಿ ಸಾಗಿಸಿಕೊಂಡು ನಂದಿ ದುರ್ಗದ ವಧಸ್ಥಾನಕ್ಕೆ ತಂದು ಹಾಕಿದನು. ಅಲ್ಲಿಗೆ ಬಂದ ಬಳಿಕ ಕ್ಯಾಂಪ್ಬೆಲನಿಗೂ ಆತನ ಸಂಗಡಿಗರಿಗೂ ಅನನ್ಯಗತಿಕತೆಯು ಪ್ರಾಪ್ತವಾಯಿತು. ನಾನಾ ಬಗೆಯಿಂದ ಪೀಡಿಸುವ ಕಾರ್ಯವು ಭರದಿಂದ ಸಾಗಿತು. ಮೊದಲೇ ಉಲ್ಹಾಸ, ಇದರಲ್ಲಿ ಫಾಲ್ಗುಣ ಮಾಸವೆಂಬಂತೆ, ಮೊದಲೇ ಜಾಫರ ಜಮಾದಾರನ ಕರುಣಹೃದಯ! ಅದರಲ್ಲಿ ಟೀಪುವಿನ ಸೌಮ್ಯವಾದ ಪ್ರೋತ್ಸಾಹ! ಅಂದಮೇಲೆ ಕೇಳುವದೇನು?

ಜಾಫರನೂ ಕ್ಯಾಂಪ್ಬೆಲನಿಗೆ ಹಲವು ಬಗೆಯ ಆಶೆ ಹಚ್ಚಿ, ಆ ಹೂಳಿಟ್ಟ ದ್ರವ್ಯದ ಬಗ್ಗೆ ಕೇಳಿದನು. ಹೆದರಿಸಿ-ಬೆದರಿಸಿ ಕೇಳಿದನು. ಮನಸೋಕ್ತ ಪೀಡಿಸಿಯೂ ಕೇಳಿದನು. ಆತನು ಯಾವ ರೀತಿಯಿಂದ ಕೇಳಿದರೂ ಆ ಬಗ್ಗೆ ಏನೂ ಗೊತ್ತಿಲ್ಲದ ಆ ಇಂಗ್ಲಿಷ ಕೈದಿಯು ಏನೆಂದು ಹೇಳಬೇಕು? ಹೀಗೆ ಅವನು ಆ ದ್ರವ್ಯದ ಹಂಬಲದಲ್ಲಿ

ನಾಲ್ಕಾರು ದಿನಗಳನ್ನು ಕಳೆದನು. ಆದರೂ ಆ ಬಗ್ಗೆ ಒಂದಿಷ್ಟು ಎಳೆ ಕೂಡ ಹೊರಡಲಿಲ್ಲ. ಆಗ ಜಾಫರನು ರೇಗಿಗೆದ್ದು, ಒಂದು ದಿನ ಆ ಇಂಗ್ಲಿಷ ಕೈದಿಗಳನ್ನೆಲ್ಲ ಬಂದೀಖಾನೆಯಿಂದ ಹೊರಗೆ ತರಲು ಅಪ್ಪಣೆ ಮಾಡಿದನು. ನಂತರ ಅವರೆಲ್ಲರ ರಟ್ಟೆಗೆ ಹಗ್ಗ ಹಚ್ಚಿಸಿ, ಅವರನ್ನು ಆ ಗಿರಿಶಿಖರದ ಕಡೆಗೆ ಸಾಗಿಸಿದನು. ಜಾಫರನು ಸ್ವತಃ ಅಲ್ಲಿಗೆ ಹೋಗಿ ಎಲ್ಲಕ್ಕೂ ಮೊದಲು ಹರ್ಬರ್ಟ ಕ್ಯಾಂಪ್ಬೆಲ್ಲನನ್ನು ಮುಂದೆ ತರಲಿಕ್ಕೆ ಶಿಪಾಯರಿಗೆ ಹೇಳಿದನು. ಆ ಹುಕುಮುನ್ನು ಕೇಳಿ ಕ್ಯಾಂಪ್ಬೆಲ್ಲನ ಅಂತಃಕರಣವು ವಿಲಕ್ಷಣ ಪ್ರೋತ್ಸಾಹ ಹೊಂದಿತು. ಈ ನೀಚ ಜಮಾದಾರನು ಇನ್ನೊಂದು ಕ್ಷಣದಲ್ಲಿ ತನ್ನನ್ನು ದೂಡಲು ಅಪ್ಪಣೆಯಿತ್ತ ಕೂಡಲೆ, ತಾನು ಇಹಲೋಕದೊಳಗಿನ ಈ ಯಮ ಯಾತನೆಗಳಿಂದ ಮುಕ್ತನಾಗಿ, ಶಾಶ್ವತವಾದ ಕ್ರೈಸ್ತಲೋಕಕ್ಕೆ ತೆರಳುವೆನೆಂಬ ಆನಂದವು ಆತನಲ್ಲಿ ನೆಲೆಗೊಂಡಿತು. ಕ್ಯಾಂಪ್ಬನ್ನನು ಅಲ್ಲಿಗೆ ಒಯ್ಯಲ್ಪಟ್ಟ ಕೂಡಲೆ, ಆ ನೀಚ ಜಾಫರನು:—ಕ್ಯಾಂಪ್ಬೆಲ್ಲ ಸಾಹೇಬ, ಯಮಸದನಕ್ಕೆ ಹೊರಡಲು ಸಿದ್ಧರಾಗಿರುವಿರಷ್ಟೇ? ಎಂದು ನಗೆ ಮೊಗದಿಂದ ಪ್ರಶ್ನೆ ಮಾಡಲು, "ಹೂಂ, ದೂಡಿಸು ನನ್ನನ್ನು ಮೊದಲು. ವ್ಯರ್ಥವಾದ ಸಂಭಾಷಣದಲ್ಲಿ ವೇಳೆಗಳೆಯು ಬೇಡ"ಎಂದು ಕ್ಯಾಂಪ್ಬೆಲ್ಲನು ಆವೇಶಪೂರ್ವಕವಾಗಿ ನುಡಿದನು.

"ಛೇ-ಛೇ! ಅಷ್ಟು ಅವಸರವು ಕೆಲಸದ್ದಲ್ಲ. ಸುಲ್ತಾನಸಾಹೇಬರ ಆಜ್ಞೆಯ ಪ್ರಕಾರ ಎಲ್ಲ ಶಿಷ್ಟಾಚಾರಗಳೂ ತೀರಲಿ. ನಿನಗೆ ಕಡೆಯ ಸಾರೆ ಕೇಳುತ್ತೇನೆ, ನೀನು ನಮ್ಮ ಸರಕಾರದ ಚಾಕರಿ ಮಾಡಲು ಸಿದ್ಧನಿರುವಿಯಾ? ಒಪ್ಪಿಗೆಯಿದ್ದರೆ ಜೀವದಿಂದ ಪಾರಾಗಿ ಸುಖವನ್ನನುಭವಿಸು; ಇಲ್ಲದಿದ್ದರೆ ಈ ಕೆಳಗಿನ ನರಕದಲ್ಲಿ ಬಿದ್ದು, ಅಧೋಗತಿಯನ್ನು ಹೊಂದು ಹೇಳು ಬೇಗನೆ........"ಎಂದು ಜಾಫರನು ಪ್ರಶ್ನೆ ಮಾಡಿದನು. ಅದಕ್ಕೆ ಕ್ಯಾಂಪ್ಬೆಲ್ಲನು:— ಹೇಳಬೇಕಾ

ದುದನ್ನೆಲ್ಲ ನಿಮ್ಮ ಸುಲ್ತಾನನಿಗೆ ನಾನು ಹೇಳಿಯೇ ಬಂದಿರುತ್ತೇನೆ; ನಿನ್ನಂಥ ಯಃಕಶ್ಚಿತನ ಮುಂದೆ ಮತ್ತೆ ಮತ್ತೆ ಹೇಳಲಿಚ್ಛಿಸುವದಿಲ್ಲ, ಎಂದು ಸ್ಪಷ್ಟವಾಗಿ ಹೇಳಲು, "ಹೀಗಲ್ಲವೆ? ಭಡವೇ, ನಿನಗೆ 'ಕ್ಯಾಂಪ್ಬೆಲ್ ಸಾಹೇಬ' ಎಂದು ಸಂಬೋಧಿಸಿದ್ದರ ಪರಿಣಾಮವೇ ಇದಾಗಿರಬಹುದಾಗಿದೆ ಮಾದಿಗರ ದೇವರಿಗೆ........ಪೆಟ್ಟು ಎಂಬಂತೆ, ನಿಮ್ಮ ನೀಚ ಕಾಫರ ಜಾತಿಗೆ ಬಹುಮಾನ ಕೊಡತಕ್ಕದ್ದೇ ಅಲ್ಲ, ಇರಲಿ ಶಿಪಾಯಿ, ಈತನನ್ನು ಇಂದು ಕೊಲ್ಲುವದು ಬೇಡ. ಈತನನ್ನಿನ್ನೂ ಹಿಂಡಿಹಿ ಕೊಲ್ಲೋಣವಂತೆ. ಇವನನ್ನು ಹಿಂದಕ್ಕೆ ಹಿಯ್ಯಿರಿ. ಆಗೋ, ಈತನ ಜೀವದ ಗೆಳೆಯನಾದ ಆ ಹುಡುಗ ಕಾಫರನನ್ನು ಇತ್ತ ಕರೆತನ್ನಿರಿ, ಎಂದು ಆಜ್ಞೆ ಮಾಡಿದ ಮೇರೆಗೆ ಶಿಪಾಯಿಗಳು ಕ್ಯಾಂಪ್ಬೆಲ್ನನ್ನು ಹಿಂದೆ ಸರಿಸಿ, ಆ ಇಪ್ಪತ್ತು ವಯಸ್ಸಿನ ಮತ್ತೊಬ್ಬ ಪೋರನನ್ನು ಮುಂದೆ ತಂದರು. ಜಾಫರನು ಆತನಿಗೂ ಕ್ಯಾಪ್ಬೆಲ್ನಂತೆಯೇ ಪ್ರಶ್ನೆ ಮಾಡಿದನು. ಆ ಯುವಕನೂ ಕೂಡ ಕ್ಯಾಂಪ್ಬೆಲ್ನಂತೆಯೇ ಜಾಫರನಿಗೆ ಜವಾಬು ಕೊಟ್ಟನು. ಕೂಡಲೆ ಆತನನ್ನು ಆ ಗಿರಿಶಿಖರದಿಂದ ದೂಡುವ ಆಜ್ಞೆಯಿತ್ತನು. ಕ್ಷಣದಲ್ಲಿ ಆತನ ದೇಹವು ಆಳವಾದ ಆ ಕಂದಕದಲ್ಲಿ ದುಮುಕಿದ ಪ್ರತಿಧ್ವನಿಯು ಅಲ್ಲಿ ನಿಂತವರೆಲ್ಲರಿಗೂ ಕೇಳಿಸಿತು! ಆಗ ಜಾಫರನು ಹರ್ಬರ್ಟನನ್ನು ಪುನಃ ಆ ಶಿಖರದ ತುದಿಗೆ ತರಲು ಸೂಚಿಸಿದ ಮೇರೆಗೆ ಶಿಪಾಯಿಗಳು ಆತನನ್ನು ತಂದರು. ಕೂಡಲೆ ಜಾಫರನು ತನ್ನ ಕೈಮುಟ್ಟಿ ಆತನನ್ನು ಆ ಶಿಖರದ ತುದಿಯ ಮೇಲೆ ನಿಲ್ಲಿಸಿ, ಆತನಿಗೆ:— ಕೆಳಗೆ ಇಣಕಿ ಹಾಕಿ ನಿನ್ನ ಮಿತ್ರನ ಗತಿಯೇನಾಗಿದೆ ನೋಡು, ಎಂದು ತಿಳಿಸಿದನು. ಹರ್ಬರ್ಟನು ನಿರುಪಾಯನಾಗಿ ಹಿಮ್ಮೆ ಅತ್ತ ನೋಡಿದನು. ಈ ಮೊದಲು ಏನಿಲ್ಲೆಂದರೂ ನಾಲ್ಕೈದು ನೂರು ಜನ ಇಂಗ್ರೇಜರನ್ನು ಅಲ್ಲಿಂದ ಕೆಳಗೆ ದೂಡಿಸಿದ್ದರಿಂದ, ಅವರ ಪ್ರೇತಗಳೆಲ್ಲ ಆ ಕೆಳಗಿನ

ದರಿಯಲ್ಲಿ ಬಿದ್ದಿದ್ದು, ನರಿ-ನಾಯಿಗಳಿಗೂ ಹದ್ದು-ಕಾಗೆಗಳಿಗೂ ಅಲ್ಲಿ ಮಹಾ ಸಮಾರಾಧನೆಯುಂಟಾದಂತಾಗಿತ್ತು! ಆ ದೃಶ್ಯವು ಕಣ್ಣಿಗೆ ಬಿದ್ದ ಕೂಡಲೆ ಕ್ಯಾಂಪ್ಬೆಲ್ಲನಿಗೆ ಬವಳಿ ಬಂದಿತು. ಆ ಅವಸ್ಥೆಯಲ್ಲಿಯೇ ಆತನು ಅಲ್ಲಿಂದ ದರಿಯಲ್ಲಿ ಬೀಳತಕ್ಕವನು; ಆದರೆ ಆತನ ದೈವ ಬಲದಿಂದಲೋ ಏನೋ, ಜಾಫರ ಜಮಾದಾರನು ಆತನನ್ನು ಬೀಳಗೊಡಲಿಲ್ಲ. ಆ ಮೂರ್ಛಾವಸ್ಥೆಯಲ್ಲಿಯೇ ಆತನನ್ನು ಕಾರಾಗೃಹಕ್ಕೆ ತಂದು, ಚೇತನೆ ಬರುವ ಬಗ್ಗೆ ಉಪಚಾರ ಮಾಡಿಸಿದನು.

ಕ್ಯಾಂಪ್ಬೆಲ್ಲನನ್ನು ಕೊಲ್ಲಿಸದೆ, ಮತ್ತೆ ಉಪಚರಿಸಲಿಕ್ಕೆ ಜಾಫರನಲ್ಲಿ ಮನೆ ಮಾಡಿಕೊಂಡಿದ್ದ ಧನಪಿಶಾಚಿಯ ಚೇಷ್ಟೆಯೇ ಹೊರತು, ಬೇರೊಂದು ಕಾರಣವಿರಲಿಲ್ಲ. ಕ್ಯಾಂಪ್ಬೆಲ್ಲನಿಂದ ತನಗೆ ಆ ಬೇದನೂರ ದ್ರವ್ಯವು ಲಭಿಸಿದರೆ, ತಾನು ಇವನನ್ನು ಕೊಲ್ಲಿಸದೆ ಬಿಟ್ಟು ಬಿಡಬೇಕೆಂದೂ, ಆ ನಿಧಿಯನ್ನು ತೆಕ್ಕೊಂಡು ತಾನು ಬೇರೊಂದು ಕಡೆಗೆ ಹೋಗಿ, ಒಳ್ಳೇ ಸುಖದಿಂದಿರಬೇಕೆಂದೂ ಆ ನೀಚನ ಹವಣಿಕೆಯಾಗಿದ್ದಿತು. ಎಷ್ಟೋ ಹೊತ್ತು ಉಪಚರಿಸಿದ ಬಳಿಕ ಕ್ಯಾಂಪ್ಬೆಲ್ಲನು ತುಸ ಹುಷಾರಾದನು; ಆದರೆ ಮೊದಲೇ ಅನ್ನ-ನೀರುಗಳಿಲ್ಲದೆ ಕೇವಲ ನಿಶ್ಶಕ್ತನಾಗಿದ್ದ ಅವನು, ಮತ್ತೆ ಈ ಭಯಂಕರ ಮನೋವ್ಯಥೆಯಿಂದ ಹೈರಾಣಾದ್ದರಿಂದ, ಅವನ ಶಕ್ತಿಪಾತವೇ ಆದಂತಾಗಿತ್ತು. ಆದರಿಂದ ಎಷ್ಟು ಉಪಚರಿಸಿದರೂ ಎದ್ದು ಕೂಡ್ರುವ ಶಕ್ತಿ ಕೂಡ ಆತನಿಗೆ ಉಂಟಾಗಲಿಲ್ಲ. ಆಗ ಜಾಫರನು: ಮೈಗಳ್ಳತನದಿಂದಲೇ ಆಗಲಿ, ಹೇಗೆಯೇ ಆಗಲಿ ಇಲ್ಲಿ ಇವನು ನನ್ನ ಮನಸ್ಸಿನಂತೆ ನಡೆಯಲಾರನು. ಒಂದು ಡೋಲಿಯನ್ನು ತಂದು ಅದರಲ್ಲಿ ಇವನನ್ನು ಹಾಕಿಕೊಂಡು ದೊಡ್ಡಬಳ್ಳಾಪುರಕ್ಕೆ ನಡೆಯಿರಿ. ಅಲ್ಲಿ ಇವನಿಗೆ ಮಾಡತಕ್ಕದ್ದನ್ನು ಮಾಡೋಣವಂತೆ, ಎಂದು ಆಜ್ಞೆ ಮಾಡಿದನು.

ಹರ್ಬರ್ಟ ಕ್ಯಾಂಪ್ಬೆಲ್ಲನಿಗೆ ಭಯಂಕರ ಜ್ವರ ಬಂದಿದ್ದು, ಆತನು ತೀರ ಹೈರಾಣಾಗಿದ್ದನು. ಹೆಚ್ಚು-ಕಡಿಮೆಯಾಗಿ ಆತನು ಮೈಮೇಲೆ ಎಚ್ಚರಿಲ್ಲದಂತೆ ಬಿದ್ದುಕೊಂಡಿದ್ದನೆಂದರೂ ಸಲ್ಲಬಹುದು; ಆದರೆ ಜಾಫರನ ಆಳುಗಳಿಗೆ ಅದಗದೇನು ಮಹತ್ವವು? ಅವರು ಒಂದು ಹರಕು-ಮುರುಕಾದ ಡೋಲಿಯಲ್ಲಿ ಆತನ ದೇಹವನ್ನು ಚೆಲ್ಲಿಕೊಂಡು, ದೊಡ್ಡಬಳ್ಳಾಪುರದ ಮಾರ್ಗ ಹಿಡಿದು ನಡೆದಿದ್ದರು. ಜಾಫರನ ಆಜ್ಞೆಯ ಮೇರೆಗೆ ಅವರೊಡನೆ ಮತ್ತೊಬ್ಬ ಇಂಗ್ಲಿಷ ಕೈದಿಯೂ ನಡೆದಿದ್ದನು.

ಜಾಫರನು ಆ ನಂದಿದುರ್ಗದಲ್ಲಿಯ ಮಿಕ್ಕ ಎಲ್ಲ ಕೈದಿಗಳನ್ನು ಅಂದೇ ಆ ಗಿರಿಶಿಖರದಿಂದ ದೂಡಿಸಿ-ದೂಡಿಸಿ ಕೊಲ್ಲಿಸಿದನು; ಹಾಗು ತಾನೂ ದೊಡ್ಡಬಳ್ಳಾಪುರದ ಮಾರ್ಗವನ್ನು ಹಿಡಿದನು. ದೊಡ್ಡ ಬಳ್ಳಾಪುರವನ್ನು ಸೇರಿದ ಬಳಿಕ, ಸರಾಸರಿ ಏಳನೇ ದಿವಸ ರಾತ್ರಿಯಲ್ಲಿ ಶುಭ್ರವಾದ ಚಂದ್ರಪ್ರಕಾಶವು ಬಿದ್ದ ಕಾಲಕ್ಕೆ ಕ್ಯಾಂಪ್ಬೆಲ್ಲನಿಗೆ ಚನ್ನಾಗಿ ದೇಹಭಾನವುಂಟಾಯಿತು. ಆಗ ಆತನು ಸುತ್ತಲೂ ನೋಡಿದನು ಮಾತ್ರ. ಎದ್ದೇಳುವ ಶಕ್ತಿಯು ಅವನಿಗಿರಲಿಲ್ಲ. ಇನ್ನು ಈತನು ಬದುಕುವದಿಲ್ಲೆಂದು ತಿಳಿದಿದ್ದ ಆ ಜಾಫರ ಜಮಾದಾರನು ಆತನ ಡೋಲಿಯನ್ನು ಒಂದು ಹಾಳು ಅಶ್ವತ್ಥ ಕಟ್ಟೆಯ ಮೇಲೆ ಇರಿಸಿದ್ದನು. ಕ್ಯಾಂಪ್ಬೆಲ್ಲನು ಕಣ್ಣು ತೆರೆದು ನೋಡಿದಾಗ ಸುತ್ತಲೂ ವಿಚಿತ್ರಕರವಾದ ನೋಟವು ಆತನ ದೃಷ್ಟಿಗೆ ಬಿತ್ತು. ಸುತ್ತಲೂ ಮಣ್ಣಗೋಡೆಯ ಎಷ್ಟೋ ಮನೆಗಳಿದ್ದು, ತಾನು ಒಂದು ಅಶ್ವತ್ಥ ವೃಕ್ಷದ ಕೆಳಗೆ ಬಿದ್ದುಕೊಂಡಿದ್ದನು. ಸಮೀಪದಲ್ಲಿಯೇ ಮುಸಲ್ಮಾನರ ಒಂದು ಗೋರಿಯಿದ್ದು, ಅದರ ಪಕ್ಕದಲ್ಲಿ ಚಿಕ್ಕದೊಂದು ಮಸೀದೆಯಿತ್ತು; ಆ ಮಸೀದೆಯು ತೆಂಗು, ಬಾಳೆ ಮುಂತಾದ ವೃಕ್ಷಗಳಿಂದ ಆವರಿಸಿತ್ತು. ತಾನು ಈಗ ಎಲ್ಲಿರುವೆನೆಂಬದನ್ನು ಕುರಿತು

ಕ್ಯಾಂಪ್ಬೆಲ್ಲನು ಮನಸ್ಸಿನಲ್ಲಿಯೇ ಆಲೋಚಿಸುತ್ತ ಬಿದ್ದುಕೊಂಡಿರಲು, ಆತನ ಬಳಿಗೆ ಇಬ್ಬರು ಗೃಹಸ್ಥರು ಬಂದರು. ಬಂದವರಲ್ಲಿ ಒಬ್ಬನು ವೃದ್ಧನಾದ ಫಕೀರನಾಗಿದ್ದು, ಇನ್ನೊಬ್ಬನು ನಡುಹರೆಯದ ಹುರಿ ಕಟ್ಟಿನ ಶರೀರದ ಸರದಾರನಾಗಿದ್ದನು. ಆ ಇಬ್ಬರೂ ತಮ್ಮ ತಮ್ಮೊಳಗೆ ಏನೇನೋ ಮಾತಾಡುತ್ತಿದ್ದರು ಅವರ ಭಾಷಣದೊಳಗಿನ ಕೆಲ ಭಾಗವು ಹರ್ಬರ್ಟನಿಗೆ ಹೀಗೆ ಕೇಳಿಸಿತು:—

"ಈತನ ಇಹಲೋಕ ಯಾತ್ರೆಯು ಬಹುಮಟ್ಟಿಗೆ ಪೂರೈಸಿದಂತೆಯೇ ಆಗಿರುತ್ತದೆ ಇಂಥ ವಿಲಕ್ಷಣ ಸ್ಥಿತಿಯಲ್ಲಿ ಈತನಿನ್ನೇನು ಬದುಕುತ್ತಾನೆ? ಆಗ ನಾವಿವನನ್ನು ನೋಡಿದಾಗಲೇ ಈತನು ಕಂಠಗತಪ್ರಾಣನಾಗಿದ್ದನು ಜಾಫರಸಾಹೇಬನು ಈತನ ಸಂಗಡಿಗನನ್ನು ಕಳಿಸಿ, ಕಪಣಿ ಮುಂತಾದ ಶ್ರವದ ಸಾಹಿತ್ಯಗಳನ್ನು ಕೂಡ ಈತನಿಗಾಗಿ ತರಿಸಿರುತ್ತಾನೆ"ಎಂದು ಆ ಹರೆಯದವನು ನುಡಿಯಲು,

"ನೀವು ಏನೇ ಅನ್ನಿರಿ, ಈತನು ಬದಕುವ ಆಶೆಯು ನನಗಿನ್ನೂ ಇದೆ. ನಾನು ಈತನಿಗೆ ಯಾವ ಔಷಧಿಯನ್ನು ಕುಡಿಸಿದೆನೋ, ಅದು ತನ್ನ ಗುಣವನ್ನು ಎಂದೂ ತೋರಿಸದಿರಲಾರದು. ಈತನಂಥ ಎಷ್ಟೋ ಆಸನ್ನಮರಣ ರೋಗಿಗಳಿಗೆ ನಾನದನ್ನು ಕೊಟ್ಟು ಅನುಭವ ಪಡೆದಿರುತ್ತೇನೆ. ಆ ನನ್ನ ಔಷಧವನ್ನು ಸೇವಿಸಿದವನೊಬ್ಬನೂ ಸತ್ತಿಲ್ಲ. ಈತನು ಒಮ್ಮೆ ಎಚ್ಚತ್ತನೆಂದರೆ, ಮುಂದೆ ಈತನಿಗೆ ಯಾತರ ಹೆದರಿಕೆಯೂ ಇರುವದಿಲ್ಲ"ಎಂದು ಆ ವೃದ್ಧ ಫಕೀರನು ಅಂದನು.

ಈ ಭಾಷಣವು ಕಿವಿಗೆ ಬಿದ್ದ ಕೂಡಲೆ ತಾನೂ ಅವರೊಡನೆ ಮಾತಾಡಬೇಕೆಂದು ಹರ್ಬರ್ಟನು ಹೆಚ್ಚಾಗಿ ಪ್ರಯತ್ನಿಸಿದನು; ಆದರೆ ಕೇವಲ ತುಟಿಗಳ ಅಲ್ಲಾಡುವಿಕೆಯು ವಿನಃ ಆಗ ಆತನ ಬಾ-ಯಿಂದ ಶಬ್ದಗಳೇ ಹೊರಡಲಿಲ್ಲ. ಅಷ್ಟರಲ್ಲಿ ಆ ಫಕೀರನು ಆತನೆಡೆಗೆ

ಬಂದು, ಆತನ ಕೈ-ಕಾಲು-ಎದೆಗಳನ್ನು ಹಿಡಿದು ನೋಡಿದನು. ಅಲ್ಲಿ ತುಸ ಜೀವರೊಡೆದಂತೆ ಭಾಸವಾಯಿತು. ಆತನು ಹರ್ಬರ್ಟನ ಜೀವ ರೊರಿಸಹತ್ತಲು, ಹರ್ಬರ್ಟನು ಕಣ್ಣು ತೆರೆದು ತನ್ನ ಕಡೆಗೇ ನೋಡು ತ್ತಿರುವದು ಆ ಫಕೀರನ ದೃಷ್ಟಿಗೆ ಬಿತ್ತು. ಆತನ ದೃಷ್ಟಿಯೊಳಗೆ ಜಗತ್ತಿನೊಳಗಿನ ಕೃತಜ್ಞತಾ ಭಾವವೆಲ್ಲ ಒಟ್ಟುಗೂಡಿರುವಂತೆ ಆ ಫಕೀರನಿಗೆ ಕಂಡಿತು. ಆದರಿಂದ ಫಕೀರನು ಹಿಗ್ಗೀ ಆನಂದದಿಂದ: ಯಾ ಅಲ್ಲಾ! ಯಾ ರಹೀಮು! ಎಲೈ ಫಿರಂಗೀ, ಜಗದೀಶನ ಉಪ ಕಾರವನ್ನು ನೆನೆ. ನೀನು ಎಳೆಂಟು ದಿನಗಳಿಂದ ಈ ಮಸೀದೆಯ ಪಕ್ಕದಲ್ಲೀ ಬಿದ್ದುಕೊಂಡಿರುವೆ. ಇಷ್ಟು ದಿವಸ ನೀನು ಬದುಕುತ್ತೀ ಎಂಬದು ಯಾರಿಗೂ ಖಾತ್ರಿಯಿರಲಿಲ್ಲ, ಎಂದಂದು, ಅವರೀರ್ವರೂ ಹರ್ಬರ್ಟನ ಬಳಿಯಲ್ಲಿ ತುಸ ಹೊತ್ತು ಕುಳಿತರು. ಈ ಫಕೀರನ ದಯೆಯಿಂದಲೇ ತಾನು ಉಳಿದಿರುವೆನೆಂಬದು ಆಗ ಆತನಿಗೆ ಗೊತ್ತಾ ಯಿತು. ಬಳಿಕ ಅವರೀರ್ವರೂ ಅಲ್ಲಿಂದ ಹೊರಟು ಹೋದರು. ಅಷ್ಟರಲ್ಲಿ ಮತ್ತೊಬ್ಬನು ಅಲ್ಲಿಗೆ ಓಡುತ್ತ ಬಂದನು. ಅವನನ್ನು ನೋಡಿದ ಕೂಡಲೆ ಆತನು ತನ್ನ ಜಾತಿಯವನೇ ಎಂಬದು ಹರ್ಬ ರ್ಟನಿಗೆ ಗೊತ್ತಾಯಿತು. ಅವರು ಪರಸ್ಪರರನ್ನು ನೋಡಿ ಆನಂದ ಮಗ್ನರಾದರು. ಆ ಸಂಗಡಿಗನು ಕ್ಯಾಂಪ್ಬೆಲನಿಗೆ ನಂದಿದುರ್ಗವ ಬಿಟ್ಟು ಹೊರಟಂದಿನಿಂದ ಇಂದಿನ ವರೆಗಿನ ಎಲ್ಲ ಸಂಗತಿಯನ್ನೂ ತಿಳಿಸಿದನು. ನಂತರ ಅವನು ಹರ್ಬರ್ಟನನ್ನು ಎತ್ತಿಕೊಂಡೊಯ್ದು ಆ ಮಸೀದೆಯಲ್ಲಿ ಮಲಗಿಸಿದನು.

ಮುಂದೆ ಕೆಲ ದಿನಗಳಲ್ಲಿ ಹರ್ಬರ್ಟನ ಪ್ರಕೃತಿಗೆ ಸಂಪೂರ್ಣ ವಾಗಿ ಸ್ವಾಸ್ಥ್ಯವುಂಟಾಯಿತು. ಆಗ ಆತನು ತನ್ನ ದಂಡಿನ ಮಿಕ್ಕ ಕೈದಿಗಳೆಲ್ಲಿರುವರೆಂದು ಕೇಳಿದನು; ಆದರೆ ಆ ಸಂಗಡಿಗನು ಆ ಪ್ರಶ್ನೆಯ ಉತ್ತರವನ್ನು ಎಷ್ಟೋ ದಿವಸಗಳ ವರೆಗೆ ಕೊಡಲೇ ಇಲ್ಲ.

ಬಳಿಕ ಕೆಲ ದಿನಗಳ ತರುವಾಯ ಜಾಫರನು ಮಾಡಿಸಿದ ಅಂದಿನ ಆ ಅಂತಕನ ಕೋಲಾಹಲವನ್ನು ಇವನಿಗೆ ವಿಶದವಾಗಿ ತಿಳಿಸಿದನು.

ಹೀಗೆ ಹರ್ಬರ್ಟ್‌ಕ್ಯಾಂಪ್ಬೆಲ್‌ನ ದೇಹಸ್ವಾಸ್ಥ್ಯವು ಸುಧಾರಿಸ ಲಿಕ್ಕೆ ಎರಡು-ಮೂರು ವಾರಗಳು ಕಳೆದ ನಂತರ ಒಂದು ದಿನ ಬೆಳಿಗ್ಗೆ ಆ ಫಕೀರನೂ ಜಾಫರನೂ ಆತನ ಬಳಿಗೆ ಬಂದರು. ಜಾಫರನು ಟೀಪೂಸುಲ್ತಾನನಿಂದ ಬಂದ ಒಂದು ಹುಕುಮನ್ನು ಕ್ಯಾಂಪ್ಬೆಲ್‌ನಿಗೆ ತೋರಿಸಿ:—ಎಲೈ ಫಿರಂಗೀ, ಸುಲ್ತಾನಸಾಹೇಬರು ನಿನ್ನನ್ನು ಕೊಯಿ ಮತ್ತೂರ ಜಿಲ್ಲೆಯೊಳಗಿನ ಆ ಕಡೆಯ ಗುಡ್ಡಗಾಡು ಪ್ರದೇಶದೊಳ ಗಿನ ಕಿಲ್ಲೆಯಲ್ಲಿಡಲು ತಿಳಿಸಿದ್ದಾರೆ. ಒಂದುವೇಳೆ ನೀನು ನನಗೆ ಆ ಬೇದನೂರ ದ್ರವ್ಯವನ್ನು ತೋರಿಸಿ ಕೊಟ್ಟರೆ, ಇನ್ನೂ ಕೆಲವು ದಿವಸ ನಿನ್ನನ್ನು ಇಲ್ಲಿಯೇ ಇರಗೊಡುತ್ತೇನೆ, ಎನ್ನಲು, ಕ್ಯಾಂಪ್ಬೆಲ್‌ನು ಆ ದ್ರವ್ಯದ ಬಗ್ಗೆ ಮೊದಲಿನಂತೆಯೇ ತಿಳಿಸಿದನು. ಕೂಡಲೆ ಜಾಫ ರನು ಅಲ್ಲಿಂದ ಅವನನ್ನು ಹೊರಡಿಸಿದನು. ಆ ಫಕೀರನು ಇನ್ನು ಕೆಲ ದಿನ ಬಿಟ್ಟು ಈತನನ್ನು ಒಯ್ಯಬಹುದೆಂದು ಎಷ್ಟು ಒತ್ತಾಯ ಪೂರ್ವಕವಾಗಿ ಹೇಳಿದರೂ, ಆ ನೀಚ ಜಾಫರನು ಕೇಳಲಿಲ್ಲ.

ಹೊರಡುವ ಸಮಯದಲ್ಲಿ ಹರ್ಬರ್ಟ್‌ಕ್ಯಾಂಪ್ಬೆಲ್‌ನು ಆ ಫಕೀ ರನನ್ನುದ್ದೇಶಿಸಿ:—ಫಕೀರಜೀ, ನಾನಿನ್ನು ಹೊರಡುವೆನು. ತಾವು ನನ್ನ ಮೇಲೆ ಮಾಡಿದ ಉಪಕಾರದ ಋಣವನ್ನು ನಾನಂತೂ ಈ ಜನ್ಮದಲ್ಲಿ ತೀರಿಸುವ ಹಾಗಿಲ್ಲ. ಸಾಯುವವರೆಗೂ ಪ್ರತಿನಿತ್ಯ ನಿಮ್ಮ ಉಪಕಾರವನ್ನು ತಪ್ಪದೆ ಸ್ಮರಿಸುತ್ತಿರುವೆನೆಂಬದನ್ನು ಮಾತ್ರ ನಿಶ್ಚಯ ಪೂರ್ವಕವಾಗಿ ನಿಮಗೆ ತಿಳಿಸಬಲ್ಲೆನು. ನಮ್ಮ ಜಾತಿಯು ಉಪ ಕಾರಗೇಡಿಯೆಂದು ನಿಮ್ಮ ಜನರು ನಮ್ಮನ್ನು ಸದಾ ಬಯ್ಯುತ್ತಿರು ತ್ತಾರೆ; ಆದರೆ ದ್ವೇಷ ಹಾಗು ದುರಭಿಮಾನದಿಂದ ನುಡಿಯುವ ಅವರ ಮಾತಿಗೆ ಯಾವ ಯೋಗ್ಯ ಮನುಷ್ಯನು ಮಹತ್ವಕೊಟ್ಟಾನು?

ಯಾವ ಜಗದೀಶನ ದಯೆಯಿಂದ ಇಂಥ ಪ್ರಾಣಾಂತ್ಯಸ್ಥಿತಿಯಿಂದಲೂ ನಾನು ಬದುಕಿರುವೆನೋ, ಅದೇ ಆ ದಯಾಘನನ ಕೃಪೆಯಿಂದ ನನ್ನ ನಿಮ್ಮ ಭೆಟ್ಟಿಯು ಮತ್ತೆ ಆಗಲಿಕ್ಕಿಲ್ಲೆಂದು ಆದಾರು ಹೇಳಬೇಕು? ಎಂದು ನುಡಿಯುತ್ತಿರಲು, ಆತನ ಕಂಠವು ದುಃಖದಿಂದ ಹಿತ್ತರಿಸಿತು. ಆಗ ಫಕೀರನಿಗೂ ಬಹು ಕೆಡಕೆನಿಸಿತು. ಅವನು ಆತನನ್ನು ಬಿಗಿಯಾಗಿ ಅಪ್ಪಿಕೊಂಡು:—ತಮ್ಮಾ, ಸುಲ್ತಾನನು ಬಹು ದೂರದಲ್ಲಿರುವನು. ಆದರಿಂದ ನನ್ನ ಉಪಾಯವಿಲ್ಲದಾಗಿದೆ. ಅಲ್ಲಾನು ನಿನ್ನ ಕಲ್ಯಾಣ ಮಾಡಲಿ! ಎಂದು ಹರಸಿದನು.

ಕ್ಯಾಂಪ್ಟನನು ಜಾಫರನೊಡನೆ ತುಸು ದಾರಿ ಕ್ರಮಿಸಲು, ಜಾಫರನ ಆಜ್ಞೆಯ ಮೇರೆಗೆ ಅವನ ಸ್ನೇಹಿತನು ಹಿಂಗಡಿಸಲ್ಪಟ್ಟನು. ನಂತರ ಕ್ಯಾಂಪ್ಟನನೊಬ್ಬನೇ ಹಳಹಳಿಸುತ್ತ ಸಾಗಿದನು. ಅವರು ಬೆಂಗಳೂರ-ಮದ್ದೂರುಗಳನ್ನು ದಾಟಿ ಮೈಸೂರ ಸಮೀಪಕ್ಕೆ ಬರಲು, ಟೀಪುವಿನ ಬೇರೊಂದು ಹುಕುಮಿನ ಪ್ರಕಾರ ಜಾಫರನು ಮತ್ತೆ ಎಲ್ಲಿಯೋ ಹೋಗಬೇಕಾಯಿತು. ಕ್ಯಾಂಪ್ಟನನು ಕೆಲ ದಿನಗಳ ತರುವಾಯ ನಿರ್ದಿಷ್ಟವಾದ ಕೋಟೆಯಲ್ಲಿ ಸೆರೆಯಲ್ಲಿಡಿಸಲ್ಪಟ್ಟರೂ, ಆಗ ಅವನ ಹಿಂದೆ ಜಾಫರ ಜಮಾದಾರನ ಕಟಿಕಟಿಯು ಮಾತ್ರ ಇರದ್ದರಿಂದ, ಅವನು ಇದ್ದ ಸ್ಥಿತಿಯಲ್ಲಿಯೇ ಸುಖದಿಂದಿದ್ದನು.

—O—

## ಕಾಸೀಮನ ಅಭ್ಯುದಯ.

ಕಾಸೀಮನು ಮೊದಲನೇ ದಿನವೇ ದರ್ಬಾರದಲ್ಲಿ ಕ್ಯಾಂಪ್ಟನ್ನನ ಪಕ್ಷ ವಹಿಸಿ, ತನ್ನ ಅವಮಾನ ಮಾಡಿದನೆಂಬ ಸಿಟ್ಟಿನಿಂದ ಟೀಪೂ ಸುಲ್ತಾನನು ಅವನ ಪಗಾರದಲ್ಲಿ ತುಸ ಹಿಂಬಡತಿಯನ್ನು ಮಾಡಿದ್ದರೂ, ಕಾಸೀಮನನ್ನು ನೋಡಿದಾಗಿನಿಂದ “ಈತನಿಂದಲೇ ನನಗೆ ಹೆಚ್ಚು ಮಾನ-ಮರ್ಯಾದೆಗಳು ಪ್ರಾಪ್ತವಾಗುವವೆ”ಂದು ಅವನ

ಮನೋದೇವತೆಯು ಅವನಿಗೆ ಆಗಾಗ್ಗೆ ಸೂಚಿಸುತ್ತಿತ್ತು; ಆದರೂ ಕಾಸೀಮನಿಗೆ ಕೃತಕರ್ಮದ ಬಗ್ಗೆ ಪಶ್ಚಾತ್ತಾಪವಾಗಲೆಂದು ಆತನನ್ನು ಕೆಲ ದಿನಗಳ ವರೆಗೆ ಖಾನನ ಕಡೆಗೇ ಬಿಟ್ಟಿದ್ದನು. ಖಾನನು ಆತನಿಗೆ ಸಮಯೋಚಿತವಾದ ಹಿತೋಕ್ತಿಗಳನ್ನು ಹೇಳಿ, ಅವನನ್ನು ಬಡತಿಗೆ ಲಾಯಖನನ್ನಾಗ ಮಾಡಿದನು. ಕಾಸೀಮನು ತನ್ನನ್ನು ಬಿಟ್ಟಗಲುವದು ಖಾನನ ಮನಸ್ಸಿನಲ್ಲಿರಲೇ ಇಲ್ಲ; ಆದರೆ ಒಂದು ವಿಶೇಷ ಸಂಗತಿಯ ಮೂಲಕ ಕಾಸೀಮನನ್ನು ಅಗಲುವ ಪ್ರಸಂಗವು ಖಾನನಿಗೆ ಪ್ರಾಪ್ತವಾಯಿತು.

ನಿಜಾಮನೊಡನೆ ಒಪ್ಪಂಬವಾದರೆ, ತಾವೀರ್ವರೂ ಕೂಡಿ ಆ ಇಂಗ್ಲಿಷ ಕಾಫರರನ್ನು ಈ ದೇಶದಿಂದ ಹೊರಗೆ ಹಾಕಲಿಕ್ಕೆ ಅನುಕೂಲವಾಗುವದೆಂದು ಟೀಪುವು ಮನಸ್ಸಿನಲ್ಲಿ ಹವಣಿಸುತ್ತಿದ್ದನು. ನಿಜಾಮನಿಗೂ ಅದೇ ಬೇಕಾಗಿದೆಯೆಂಬದು ಖಾನನು ತಂದ ಸುದ್ದಿಯಿಂದ ಅವನಿಗೆ ಗೊತ್ತಾಗಿತ್ತು; ಮತ್ತು ಆದಕ್ಕಾಗಿ ನಿಜಾಮನ ವಕೀಲನೂ ತಮ್ಮ ಕಡೆಗೆ ಬರುವವನಿದ್ದಾನೆಂದೂ ಖಾನನು ಹೇಳಿದ್ದನು; ಆದರೆ ಆ ಮಾತಿಗೆ ಸರಾಸರಿ ಎರಡು ತಿಂಗಳಾಗುತ್ತ ಬಂದವು. ಆದರೂ ನಿಜಾಮನ ಕಡೆಯ ವಕೀಲನ ಸುದ್ದಿಯೇ ಹತ್ತಲಿಲ್ಲ ಆದರಿಂದ ತನ್ನ ಕಡೆಯ ಯಾವನೊಬ್ಬ ಜಾಣ, ಆದರೆ ಧೂರ್ತನಾದ ವಕೀಲನನ್ನು ಕಳಿಸಿ, ಅಲ್ಲಿಣ ಸಮಾಚಾರವನ್ನು ತಿಳಕೊಳ್ಳಬೇಕೆಂದು ಸುಲ್ತಾನನು ನಿರ್ಧರಿಸಿದನು. ನಿಜಾಮನ ಸಹಾಯವನ್ನು ಆತನು ಮನಃಪೂರ್ವಕವಾಗಿ ಬಯಸುತ್ತಿದ್ದರೂ ದುರಭಿಮಾನಿಯಾದ ಅವನು, ತಾನಾಗಿ ತನ್ನ ವಕೀಲನನ್ನು ನಿಜಾಮನ ಕಡೆಗೆ ಕಳಿಸಿ ಕೊಟ್ಟು ಸಹಾಯವನ್ನು ಯಾಚಿಸುವಂತಿರಲಿಲ್ಲ. ತನ್ನ ಕಡೆಯವನು ಸುಳುವಿಲ್ಲದಂತೆ ಅಲ್ಲಿಗೆ ಹೋಗಿ, ಅವರ ಕಡೆಯ ವಕೀಲನೇ ತಮ್ಮ ಸಹಾಯ ಕೇಳಲಿಕ್ಕೆ ಬರುವ ಪ್ರಸಂಗವನ್ನುಂಟು ಮಾಡ

ಬೇಕೆಂಬದು ಆತನ ಮನಸ್ಸಿನ ಉದ್ದೇಶವಾಗಿತ್ತು. ಇದರಿಂದಲೇ ಆ ಸೂಕ್ಷ್ಮ ಕೆಲಸಕ್ಕೆ ಯಾರನ್ನು ನಿಯಮಿಸಬೇಕೆಂಬ ಬಗ್ಗೆ ಅವನು ಯೋಚಿಸತೊಡಗಿದನು.

ಟೀಪೂಸುಲ್ತಾನನು ಕಾಸೀಮನನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದನೆಂಬದನ್ನು ಹಿಂದೆಯೇ ತಿಳಿಸಿದೆ; ಮತ್ತು ಆತನ ಮನಸ್ಸಿನಲ್ಲಿ ಅವನನ್ನು ಬೇಗ ಬೇಗನೆ ಊರ್ಜಿತದೆಸೆಗೆ ಏರಿಸುವದೂ ಇತ್ತು. ನಿಜಾಮನ ಕಡೆಯ ಆ ಸೂಕ್ಷ್ಮ ಕೆಲಸ ಮಾಡಲಿಕ್ಕೆ ಈ ಕಾಸೀಮನೇ ತಕ್ಕವನೆಂದು ಆತನು ನಿಶ್ಚಯಿಸಿದನು. ಕಾಸೀಮನು ಎಂಥ ಜಾಣನೂ ಧೋರಣೀಪುರುಷನೂ ಆಗಿದ್ದರೂ, ಆತನಲ್ಲಿಯ ಆ ಗುಣಗಳ ಅನುಭವವು ಸುಲ್ತಾನನಿಗಿರಲಿಲ್ಲ. ಕಾಸೀಮನು ನಿಜಾಮನ ರಾಜ್ಯದವನೆಂಬದೊಂದೇ ಬಾಹ್ಯಕಾರಣದಿಂದಲೂ, ಆತನ ವಿಷಯದ ತನ್ನ ಅಂತರಂಗದ ನಿಕಟ ಪ್ರೇಮದಿಂದಲೂ ಟೀಪೂಸುಲ್ತಾನನು ಆತನನ್ನು ಆ ಕಾಮಗಿರಿಯ ಮೇಲೆ ನಿಯಮಿಸಿ ಕಳಿಸಿದನು. ಸುಲ್ತಾನನ ಅಪ್ಪಣೆಯಾದ ಕೂಡಲೆ ಕಾಸೀಮನು ತಕ್ಕ ಲವಾಜಮಿನೊಡನೆ ಹೈದರಾಬಾದಕ್ಕೆ ನಡೆದನು. ದಾರಿಯಲ್ಲಿ ಅವನು ತನ್ನ ತಾಯಿಯನ್ನು ಕಂಡು, ಅಲ್ಲಿ ಹಿಂದೆರಡು ದಿನ ಇದ್ದು, ಮುಂದೆ ಹೈದರಾಬಾದಿಗೆ ಹೋದನು. ಹೈದರಾಬಾದಿಗೆ ಹೋದ ಬಳಿಕ ಅಲ್ಲಿಯ ಪ್ರಮುಖ ಜನರ ಗೊತ್ತು-ಗುರಿ ಮಾಡಿಕೊಳ್ಳುವದಕ್ಕೇ ತುಸ ವಿಲಂಬವಾಯಿತು. ಕಾಸೀಮನ ಮಿಷ್ಟ ಭಾಷಣ, ಸುಂದರ ರೂಪ, ಸೌಜನ್ಯಯುಕ್ತ ನಡಾವಳಿ ಇವುಗಳ ಮೂಲಕ ಅವನನ್ನು ಕಂಡ ಪ್ರತಿಯೊಬ್ಬ ಅಮೀರ-ಉಮರಾವರೂ ಆತನನ್ನು ಪ್ರೀತಿಸಿ, ಅವನಿಗೆ ತಕ್ಕ ಸಹಾಯವನ್ನು ಮಾಡುತ್ತಿದ್ದರು. ಆದರಿಂದ ಅವನಿಗೆ ಬೇಕಾಗಿದ್ದ ಎಲ್ಲ ಸಂಗತಿಗಳು ಸಹಜವಾಗಿ ತಿಳಿಯಹತ್ತಿದವು. ತುಸ ದಿನಗಳಲ್ಲಿಯೇ ಆತನು ಯಾವ ಸಂಗತಿಯನ್ನು ತಿಳಕೊಳ್ಳಲು ಬಂದಿದ್ದನೋ,

ಅದೂ ಅವನಿಗೆ ಗೊತ್ತಾಯಿತು.

ಇಲ್ಲಿಯ ವಕೀಲನು ಇಂದು ನಿಶ್ಚಯವಾಗಿ ಟೀಪೂಸುಲ್ತಾನನ ಕಡೆಗೆ ಹೊರಡುವನೆಂದು ಒಂದು ದಿನ ಅಲ್ಲಿ ಸುದ್ದಿ ಹೊರಟರೆ, ಮರುದಿನವೇ ಅದಕ್ಕೆ ತೀರ ವಿರುದ್ಧವಾದ ಸುದ್ದಿಗಳು ಏಳುತ್ತಿದ್ದವು. ಹೀಗಾಗಲಿಕ್ಕೆ ಅತಿ ಚಂಚಲ ಮನಸ್ಸಿನ ನಿಜಾಮನೇ ಕಾರಣನಾಗುತ್ತಿದ್ದನು. ಅವನು ಬೆಳಿಗ್ಗೆ ಒಂದು ಪ್ರಕಾರದ ಬೇತು ಮಾಡಿದರೆ, ಮಧ್ಯಾಹ್ನದಲ್ಲಿ ಅದಕ್ಕೆ ವಿಪರೀತವಾಗಿಯೇ ಬೇತು ಮಾಡುತ್ತಿದ್ದನು. ಅದರಿಂದ ಆ ಹೈದರಾಬಾದ ರಾಜಧಾನಿಯಲ್ಲಿ ಇಂದೊಂದು, ನಾಳೆಯೊಂದು, ನಾಡದೊಂದು ಹೀಗೆ ನಾನಾ ಬೇತುಗಳಾಗುತ್ತಿದ್ದವು. ಕಡೆಗೆ "ಟೀಪುವಿನ ಬಳಿಗೆ ಇಂಥ ದಿವಸ ಇಲ್ಲಿಯ ವಕೀಲನು ಖಾತ್ರಿಯಿಂದ ಹೊರಡುವದು ನಿಶ್ಚಯವಾಗಿದೆ" ಎಂಬ ವಿಶ್ವಾಸಾರ್ಹವಾದ ಸುದ್ದಿಯು ಕಾಸೀಮನಿಗೆ ತಿಳಿಯಿತು. ಆಗ ಆತನು ಮತ್ತೆ ಕೆಲವು ದಿವಸ ಅಲ್ಲಿಯೇ ನಿಂತು, ಅಲ್ಲಿಂದ ಹೊರಡುವ ಆ ಅಲ್ಲಿರೇಝಾಖಾನನೆಂಬ ವಕೀಲನನ್ನೇ ಏಕಾಂತದಲ್ಲಿ ಕಂಡು, ಖಾತ್ರಿ ಮಾಡಿಕೊಂಡು, ಪಟ್ಟಣಕ್ಕೆ ಹಿಂದಿರುಗಿದನು. ಮರಳಿ ಬರುವಾಗಲೂ ಅವನು ತನ್ನ ತಾಯಿಗೆ ಭೆಟ್ಟಿಯಾಗಿ ಆಕೆಯ ಆಶೀರ್ವಾದವನ್ನು ಪಡೆದೇ ಬಂದನು.

ಅಲ್ಲಿರೇಝಾಖಾನನು ಯಾವ ಉದ್ದಿಶ್ಯವಾಗಿ ಟೀಪುವಿನ ಕಡೆಗೆ ಬರುತ್ತಿರುವನೆಂಬದನ್ನು ಕಾಸೀಮನು ಅವನ ಮುಖದಿಂದಲೇ ಕೇಳಿ ತಿಳಿದಿದ್ದನಾದ್ದರಿಂದ, ಅವನು ಶ್ರೀರಂಗಪಟ್ಟಣಕ್ಕೆ ಬಂದು, ಸುಲ್ತಾನನಿಗೆ ಹೈದರಾಬಾದದಲ್ಲಿಯ ಎಲ್ಲ ಸಂಗತಿಯನ್ನು ಸವಿಸ್ತರವಾಗಿ ತಿಳಿಸಿದನು. ಅದನ್ನೆಲ್ಲ ಕೇಳಿ ಸುಲ್ತಾನನಿಗೆ ಪರಮಾನಂದವಾಗಲು, ಅವನು ಕಾಸೀಮನನ್ನು ಮನಸೋಕ್ತ ಹೊಗಳಿದನು; ಹಾಗು ಕಾಸೀಮನು ತಂದ ಸುದ್ದಿಯನ್ನೇ ಆಧಾರವಾಗಿಟ್ಟುಕೊಂಡು, ತನ್ನ ಮನಸ್ಸಿನಲ್ಲಿ ನಾನಾ ಬೇತುಗಳನ್ನು ಮಾಡಿದನು. ಆಗ ಕೊಯಿ

ಮತ್ತೂರ ಕಡೆಯ ನಾಯರ ಜಾತಿಯ ಜನರು ದಂಗೆಯನ್ನೆಬ್ಬಿಸಿದ್ದರು. ಅದನ್ನು ಮುರಿದು ಶಾಂತತೆಗೊಳಿಸುವದಕ್ಕಾಗಿ, ಅತ್ತ ದೊಡ್ಡ ದೊಡ್ಡ ಪಲಟಣಗಳನ್ನು ಕಳಿಸಿದನು. ಕಾಸೀಮನನ್ನೂ ಹಿಂದು ದಂಡಿನ ಮುಖ್ಯನನ್ನು ಸೇನಾಪತಿಯನ್ನಾಗಿ ನೇಮಿಸಿ ಅತ್ತ ಕಡೆಗೇ ರವಾನಿಸಿದನು. ಕೆಲ ದಿನಗಳಲ್ಲಿಯೇ ಟೀಪುವಿನ ಸೈನಿಕರು ಆ ಬಂಡು ಮುರಿದು, ಬಂಡುಗಾರರಾದ ಎರಡುಸಾವಿರ ಜನ ನಾಯರರನ್ನು ಸೆರೆ ಹಿಡಿದರು. ಸುಲ್ತಾನನು ಅವರಿಗೆ ಮರಣದ ಹೆದರಿಕೆ ತೋರಿಸಿ, ಅವರೆಲ್ಲರನ್ನು ಮುಸಲ್ಮಾನೀ ಮತಕ್ಕೆ ಸೇರಿಸಿಕೊಂಡನು. ಧರ್ಮಸಂರಕ್ಷಣಕ್ಕಾಗಿಯೇ ತಾನು ರಾಜ್ಯವನ್ನಾಳುವದೆಂದು ಸುಲ್ತಾನನು ಅನ್ನುತ್ತಿದ್ದನು; ಆದರೆ ಪರಧರ್ಮದ ವಿಷಯವಾಗಿ ಆತನಲ್ಲಿ ಸ್ವಲ್ಪವಾದರೂ ಸಹಿಷ್ಣುತೆಯಿರಲಿಲ್ಲ ನಾನಾ ಬಗೆಯ ಆಮಿಷ ತೋರಿಸಿ ಅನ್ಯ ಧರ್ಮೀಯರ ಜಾತಿ ಕೆಡಿಸಿ ಬಿಡುತ್ತಿದ್ದನು. ಅಸಮ್ಮತಿ ಪಡುವವರ ಮನೆ-ಮಾರುಗಳನ್ನು ಸುಟ್ಟು, ದೇವರು-ದಿಂಡರುಗಳನ್ನು ಒಡೆದು ಬಳಿಕ ಅವರನ್ನು ತನ್ನ ಧರ್ಮದಲ್ಲಿ ಸೇರಿಸಿಕೊಳ್ಳುತ್ತಿದ್ದನು. ಇದಕ್ಕೆ ಬಿಕ್ಕ ಹಾಕದ ಧರ್ಮನಿಷ್ಠರನ್ನು ಕಾಡುಮೃಗಗಳನ್ನು ಬೇಟೆಯಾಡಿ ಕೊಲ್ಲುವಂತೆ ಕೊಲ್ಲುತ್ತಿದ್ದನು!! ಅಸ್ತು.

ಈ ಬಗೆಯಾಗಿ ಟೀಪುವಿನ ದಂಡು ವಿಜಯಶ್ರೀಯನ್ನು ಹೊಂದಿ ಹಿಂದಿರುಗಲು, ಸುಲ್ತಾನನು ಅದನ್ನು ಕೊಯಿಮತ್ತೂರ ಕಡೆಗೆ ಸಾಗಿಸಿದನು. ಅತ್ತ ಆತನ ಮಗನು ಕನ್ನಾನರದ ರಾಜನನ್ನು ಗೆದ್ದು ಅವನ ಮಗಳನ್ನು ಲಗ್ನವಾದನು. ಇಷ್ಟರಲ್ಲಿ ಆ ವರ್ಷದ ಮೊಹರಮ್ಮದ ಹಬ್ಬವೂ ಪ್ರಾಪ್ತವಾಯಿತು. ಮೊದಲೇ ವಿಜಯಶ್ರೀಯನ್ನು ಹೊಂದಿದ ಟೀಪುವಿನ ದಂಡಾಳುಗಳು! ಅದರಲ್ಲಿ ಬಂದ ಮೊಹರಮ್ಮದಂಥ ದೊಡ್ಡ ಹಬ್ಬ! ಅಂದಬಳಿಕ ಕೇಳುವದೇನು? ನೋಡಿದತ್ತೆಲ್ಲ ಖುಸಿ-ಮೋಜುಗಳೇ ಕಾಣಹತ್ತಿದವು. ಆಗಿನಿಂದಲೇ ಟೀಪುವಿನ

ರಾಜ್ಯದಲ್ಲಿ ಪ್ರತಿ ಶುಕ್ರವಾರ ಐದು ಸಾರೆ ನೌಬತ್ತನ್ನು ಬಾರಿಸುವ ಜಾಹೀರನಾಮೆಯೂ ಹೊರಟಿತಂತೆ

ಮುಂದೆ ತುಸ ದಿನಗಳಲ್ಲಿಯೇ ಬಹು ದಿನಗಳಿಂದ "ಬರುತ್ತಾನೆ-ಬರುತ್ತಾನೆ"ಂದು ಗರ್ಜಿಸುತ್ತಿದ್ದ ನಿಜಾಮುನ ಕಡೆಯು ವಕೀಲನು ಶ್ರೀರಂಗಪಟ್ಟಣಕ್ಕೆ ಹಿಮ್ಮೆ ಬಂದನು. ಆತನ ಆತಿಥ್ಯಕ್ಕಾಗಿ ಟೀಪುವು ಕಾಸೀಮುನನ್ನೇ ಯೋಜಿಸಿದನು. ಆ ವಕೀಲನ ಸನ್ಮಾನಕ್ಕಾಗಿ ಮುಂದೆ ಒಂದು ದಿನ ಒಂದು ದೊಡ್ಡ ದರ್ಬಾರನ್ನು ಕೂಡಿಸಿದನು. ಆ ಸಭೆಯಲ್ಲಿ ನಿಜಾಮುನ ಕಡೆಯ ವಕೀಲನು ತಾನು ತಂದ ವಜರಾಣೆಗಳನ್ನೂ ಪತ್ರವನ್ನೂ ಸುಲ್ತಾನನಿಗೆ ಒಪ್ಪಿಸಿದನು. ಆ ಪತ್ರವು ಗುಪ್ತವಿದ್ದದರಿಂದ, ಅದನ್ನು ದರ್ಬಾರದಲ್ಲಿ ಓದುವಂತಿರಲಿಲ್ಲ. ಆದರೂ ಆ ಪತ್ರದ ಸಂಗತಿಯು ಸಜಾತೀಯರಾದ ಆ ಇಬ್ಬರು ಅರಸರ ಐಕ್ಯದ ಸಂಬಂಧದ್ದೇ ಆಗಿರುವದೆಂದು ಎಲ್ಲ ದರ್ಬಾರಿಗಳಿಗೂ ಗೊತ್ತಿತ್ತಾದ್ದರಿಂದ, ಅಂದಿನ ದರ್ಬಾರದಲ್ಲಿ ಎಲ್ಲರೂ ಸಂತೋಷದಿಂದಿದ್ದರು. ಸುಲ್ತಾನನು ಆ ದಿನ ರಾತ್ರಿ ತನ್ನ ಕೆಲ ಜನ ಮುತ್ಸದ್ದಿಗಳನ್ನು ಕರೆಸಿಕೊಂಡು, ನಿಜಾಮುನ ಕೂಡ ಯಾವ ಕರಾರುಗಳ ಮೂಲಕ ಒಡಂಬಡಿಕೆ ಮಾಡಿಕೊಳ್ಳಬೇಕೆಂಬ ಬಗ್ಗೆ ಆಲೋಚಿಸಿದನು. ನಿಜಾಮುನ ಮಗಳೊಡನೆ ಲಗ್ನವಾಗುವದು ಬಹು ದಿನಗಳಿಂದಲೂ ಸುಲ್ತಾನನ ಮನಸ್ಸಿನಲ್ಲಿತ್ತು. ಆ ಮಾತನ್ನು ನಿಜಾಮುನಿಗೆ ತಿಳಿಸುವದಕ್ಕೆ ಇಂದಿನ ವರೆಗೆ ಆತನಿಗೆ ಸಂಧಿಯೇ ದೊರೆತಿರಲಿಲ್ಲ ಇಂಗ್ಲಿಷರ ಉಪಟಳಕ್ಕೆ ಅಂಜಿ ನಿಜಾಮುನು ತನ್ನೊಡನೆ ಒಡಂಬಡಿಕೆ ಮಾಡಿಕೊಳ್ಳಲು ಹವಣಿಸುತ್ತಿರುವ ಈ ಅಪೂರ್ವಯೋಗದಲ್ಲಿಯೇ "ನೀನು ನಿನ್ನ ಮಗಳನ್ನು ನನಗೆ ಕೊಟ್ಟರೆ, ನಾನು ನಿನಗೆ ನೆರವಾಗುವೆನು ಎಂದು ಹೇಳಬೇಕೆ"ಂದು ಆತನು ನಿರ್ಧರಿಸಿದನು.

ಆಗ ಸುಲ್ತಾನನ ಕಡೆಯ ಜಾಣ ಮುತ್ಸದ್ದಿಗಳು:—"ಈ

ಕರಾರು ಈಗಿನ ಪ್ರಸಂಗದಲ್ಲಿ ತಕ್ಕದ್ದಲ್ಲ. ಮೊದಲು ನಿಜಾಮನಿಗೆ ಅಲ್ಪ-ಸ್ವಲ್ಪ ಸಹಾಯ ಮಾಡಿ, ಆತನನ್ನೊಲಿಸಿಕೊಳ್ಳಬೇಕು. ನಂತರ ಈ ಮಾತು ತೆಗೆಯಬಹುದು'' ಎಂದು ಸುಲ್ತಾನನಿಗೆ ವಿನಯಪೂರ್ವ ಪೂರ್ವಕವಾಗಿ ತಿಳಿಸಿದರು; ಆದರೆ ದುರಾಗ್ರಹಿಯಾದ ಅವನು ಅವರ ಮಾತನ್ನು ಕೇಳುವನೇ? ಮರುದಿವಸ ಆತನು ನಿಜಾಮನ ಕಡೆಯ ವಕೀಲನಾದ ರೇಝಾಖಾನನನ್ನು ಅರಮನೆಗೆ ಕರೆಸಿಕೊಂಡು, ಆತ ನಿಗೆ ತನ್ನ ಆ ಕರಾರನ್ನು ತಿಳಿಸಿದನು. ಆ ವಕೀಲನಾದರೂ ಅಂತಿಂ ಥವನಿದ್ದಿಲ್ಲ. "ಮೊನ್ನೆಯ ವರೆಗೆ ಪೂರ್ಣಯ್ಯನ ಮನೆಯ ದನ ಕಾಯುತ್ತಿದ್ದ ನೀನು, ಇಂದು ಎಲ್ಲಿಯೋ ನಾಲ್ಕು ಪ್ರಾಂತಗಳನ್ನು ಸುಲಿದು ಸುಲ್ತಾನನಾದ ಮಾತ್ರಕ್ಕೆ, ನಿಜಾಮನ ಮಗಳನ್ನು ಕೇಳು ವಷ್ಟು ಧೈರ್ಯವು ನಿನಗೆ ಬಂದಿತೇ? ನಿನ್ನಂಥ ಕ್ಷುದ್ರ ಹಾಗು ಅಹಂ ಕಾರಿಯ ಬಳಿಗೆ ನಮ್ಮ ನವಾಬರು ತಮ್ಮ ವಕೀಲನನ್ನು ಕಳಿಸಿದ್ದೇ ತಪ್ಪಾಗಿದೆಂ''ದು ಕಣ್ಣಿಗೆ ಅಂಜನ ಹಚ್ಚುವಂಥ ಉತ್ತರ ಹೇಳಿ ಹೊ- ರಟು ಹೋದನು. ತನ್ನ ವಕೀಲನ ಮುಖಾಂತರ ಟೀಪುವಿನ ಕರಾ ರನ್ನು ಕೇಳಿ, ನಿಜಾಮನು ಅಂದಿನಿಂದಲೂ ಟೀಪುವನ್ನು ನೀಂಲ್ಲಿ ನೋಡಹತ್ತಿದನು! ಆದರಿಂದ ಮುಂದೆ ಕೆಲ ದಿನಗಳ ಮೇಲೆ ಟೀಪುವು ತಾನಾಗಿ ಕಳಿಸಿದ ವಕೀಲನಿಗೆ ನಿಜಾಮನು ಭೆಟ್ಟಿ ಕೂಡ ಕೊಡದೆ, ಅವನನ್ನು ಬಂದ ದಾರಿಯಿಂದ ಹಿಂದಕ್ಕಟ್ಟಿಸಿ ಬಿಟ್ಟನು.

ಅದೇ ಕಾಲಕ್ಕೆ ಅಂದರೆ ಇ. ಸ. ೧೭೬೮ರಲ್ಲಿ ನಿಜಾಮನು ಇಂಗ್ಲಿಷರೊಡನೆ ಮತ್ತೊಮ್ಮೆ ಒಪ್ಪಂದ ಮಾಡಿಕೊಂಡನು. ಅದರಲ್ಲಿ ಇಂಗ್ಲಿಷರು ಟೀಪುವಿನ ಮೇಲೆ ದಾಳಿ ಮಾಡಿದಾಗ, ನಿಜಾಮನು ಅವರಿಗೆ ನೆರವಾಗಬೇಕೆಂಬದೊಂದು ಕಲಮು ಇತ್ತು. ಆ ಸಂಗ ತಿಯು ಹೈದರಾಬಾದಿಗೆ ಹೋಗಿದ್ದ ಟೀಪುವಿನ ಕಡೆಯ ವಕೀಲನಿಗೆ ತಿಳಿಯಲು, ಆತನು ಅದನ್ನು ಟೀಪುವಿಗೆ ಹೇಳಿದನು. ಅದನ್ನು ಕೇಳಿ

ಅವನು ಅಂತರಂಗದಲ್ಲಿ ಬಹಳ ಸಂತಪ್ತನಾದನು; ಆದರೆ ಹೊರಗೆ ಮಾತ್ರ ಅದು ತೋರಿಸುವಂತಿರಲಿಲ್ಲ. ಆದರಿಂದ ಅವನು:--ಏನೂ ಅಡ್ಡಿಯಿಲ್ಲ. ಅವನು ನನ್ನ ಮೇಲೆ ಸಾಗಿ ಬಂದಾದರೂ ಬರಲಿ; ಷಂಡನಂತೆ ಅಂತಃಪುರದ ಬೀಬಿಗಳ ನೆಳಲಲ್ಲಿ ವಾಸಿಸುವಂಥ ಆ ಮಾದರಚೋದನಿಗೆ ನನ್ನ ಪರಾಕ್ರಮದ ಕಲ್ಪನೆಯಾದರೂ ಬಂದೀತು! ಅಂಥ ಆ ಹೇಡಿಯ ಸಹಾಯವು ನಮಗೆ ಬೇಕೇತಕ್ಕೆ? ಯಾ ಅಲ್ಲಾ, ಕರೀಮ, ನಿನ್ನ ಕೃಪೆಯು ನನ್ನ ಮೇಲಿರುತ್ತದೆ. ಆದುದರಿಂದ ನನ್ನ ಕೈಯಿಂದಲೇ ಆ ಹೇಡಿ ನಿಜಾಮನ ಹಾಗು ಆ ವಿಶ್ವಾಸಘಾತುಕ ಫಿರಂಗಿಗಳ ನಾಶವು ನಿಶ್ಚಯವಾಗಿ ಆಗುವದು. ಇದಕ್ಕೆ ಅನುಮಾನವಿಲ್ಲ, ಎಂದು ನುಡಿಯಲು, ಆತನ "ಹೌದಪ್ಪಾವರೂ" ಎಂದು ನುಡಿಯುವ ಸಭಿಕರು ಅದಕ್ಕೇ 'ರೀ' ಎಳೆದರು.

ನಿಜಾಮನ ಬೇತನ್ನು ಕೇಳಿ ಟೀಪುವಿನ ಸೈನಿಕರೂ ಆತನ ಬಗ್ಗೆ ತ್ವೇಷಗೊಂಡಿದ್ದರು. "ಶುಕ್ಲಾತಿಷ್ಠತಿ ಯಸ್ಯಾನ್ನಂ। ತಸ್ಯಬುದ್ಧಿಃ ಪ್ರವರ್ತತೆ" ಎಂಬಂತೆ, ಆತನ ಪದರಿನಲ್ಲಿದ್ದ ಆ ಸೈನಿಕರೂ ಆತನಂತೆ ದುರಭಿಮಾನಿಗಳಾಗಿದ್ದರು. ಆದರಿಂದ ಆಗ ಹೈದರಾಬಾದದ ಗಡಿಗೆ ಹೋಗಿ ಕಾದಬೇಕೆಂದು ಟೀಪುವು ಹುಕುಮು ಮಾಡಿದ್ದರೂ ಅವರು ಹಿಂದು-ಮುಂದೆ ನೋಡದೆ ಹೋಗುತ್ತಿದ್ದರು; ಆದರೆ ಆಗ ಟೀಪುವಿನ ಬೇತು ಬೇರೆಯೇ ಆಗಿತ್ತು. ನಿಜಾಮನ ಮೇಲೆ ಮೊದಲು ಸಾಗಿ ಹೋಗುವದಕ್ಕಿಂತ, ತನ್ನ ತಂದೆಯು ಒಂದೆರಡು ಸಾರೆ ಸಾಗಿ ಹೋದರೂ ಕೈ ಸೇರದಿದ್ದ ತ್ರಾವಣಕೋರದ ಮೇಲೆ ದಾಳಿ ಇಡಬೇಕೆಂಬದು ಅವನ ಮನಸ್ಸಿನಲ್ಲಿ ಬಹಳ ದಿವಸದಿಂದಿತ್ತು. ಈಗ ಆತನು ಆ ತ್ರಾವಣಕೋರದ ಮೇಲೆ ಸಾಗಿ ಹೋಗಲಿಕ್ಕೆ ಒಂದು ಆಗಂತುಕ ಕಾರಣವೂ ಉಂಟಾಗಿತ್ತು. ಅದೇನಂದರೆ, ಟೀಪುವಿನ ಉಪಟಳಕ್ಕೆ ಬೇಸತ್ತಿದ್ದ ಕೊಯಿಮತ್ತೂರ ಪ್ರಾಂತದೊಳಗಿನ ಕೆಲ ಜನ ನಾಯ

ರರು ತ್ರಾವಣಕೋರದ ಆಶ್ರಯಕ್ಕೆ ಹೋಗಿದ್ದರು. ಆಗ ಟೀಪುವು ತ್ರಾವಣಕೋರಿಗೆ ತನ್ನ ವಕೀಲನನ್ನು ಕಳಿಸಿ, ನಮ್ಮ ನಾಯರ ಜನರನ್ನು ನಮ್ಮ ವಶಕ್ಕೆ ಒಪ್ಪಿಸಿರಿ; ಇಲ್ಲವೆ ನಮ್ಮೊಡನೆ ಕಾದಲಿಕ್ಕೆ ಸಿದ್ಧರಾಗಿರಿ, ಎಂದು ಕೇಳಿದನು. ಅಲ್ಲಿಯ ಅರಸನು ಶರಣಾಗತರಾದ ಆ ನಾಯರ ಜನರನ್ನು ತನ್ನ ರಾಜ್ಯದಿಂದ ಹೊರಗೆ ಹಾಕದ್ದರಿಂದ, ಟೀಪುವು ಅವನ ಮೇಲೆ ದಂಡೆತ್ತಿ ಹೋಗುವದನ್ನೇ ನಿಶ್ಚಯಿಸಿದನು.

ಮನುಷ್ಯನ ಅಭ್ಯುದಯದ ಕಾಲವಿತ್ತೆಂದರೆ, ಯಾವ ಬಗೆಯಿಂದ ಅವನಿಗೆ ಊರ್ಜಿತದೆಸೆಯು ಪ್ರಾಪ್ತವಾದೀತೆಂಬದನ್ನು ಹೇಳಲಿಕ್ಕಾಗಲಿ ಊಹಿಸಲಿಕ್ಕಾಗಲಿ ಶಕ್ಯವಿರುವದಿಲ್ಲ ನಮ್ಮ ನರವೀರ ಕಾಸೀಮನ ಅಭ್ಯುದಯದ ಸಂಗತಿಯಾದರೂ ಹಾಗೆಯೇ ಇದ್ದಿತು. ಅವನನ್ನು ನೋಡಿದಾಗಿನಿಂದಲೂ ಸುಲ್ತಾನನು ಆತನನ್ನೆಷ್ಟು ಪ್ರೀತಿಸುತ್ತಿದ್ದನೆಂಬದು ನಮ್ಮ ವಾಚಕರಿಗೆ ಗೊತ್ತೇ ಇದೆ. ಹೇಗಾದರೂ ಮಾಡಿ ಕಾಸೀಮನನ್ನು ತನ್ನ ಕೈನಾತಿಗೇ ಇಟ್ಟುಕೊಳ್ಳಬೇಕೆಂಬದು ಅವನ ಮನಸ್ಸಿನಲ್ಲಿತ್ತು; ಆದರೆ ಕ್ಯಾಂಪ್ಬೆಲ್ಲನನ್ನು ಮೇಲುಗಟ್ಟಿ, ತುಂಬಿದ ಸಭೆಯಲ್ಲಿ ಕಾಸೀಮನು ತನ್ನ ಅವಮಾನ ಮಾಡಿದ್ದಕ್ಕಾಗಿ, ಸುಲ್ತಾನನು ಆತನನ್ನು ಕೆಲ ದಿನ ಹಿಂಬಡತಿ ಮಾಡಿ ಖಾನನ ಕಡೆಗೆ ಕಳಿಸಿದ್ದನು ಇಷ್ಟು ಬೇಗನೆ ಅವನನ್ನು ಮೇಲಕ್ಕೇರಿಸಿದರೆ ಸುಪರಿಣಾಮವಾಗಲಿಕ್ಕಿಲ್ಲೆಂದೂ, ಒಂದುವೇಳೆ ಆತನಿಗೆ ಗರ್ವವುಂಟಾದೀತೆಂದೂ ಬಗೆದು ಸುಲ್ತಾನನು ಕೆಲ ದಿನ ಸುಮ್ಮನಿದ್ದನು.

ಒಂದು ದಿನ ಅಬ್ದುಲ್‌ರಹಿಮಾನಖಾನ ಮತ್ತು ಟೀಪೂಸುಲ್ತಾನ ಇವರು ಮಾತಾಡುತ್ತ ಕುಳಿತಿರಲು, ಅವರ ಭಾಷಣದಲ್ಲಿ ಬೇಟೆಯ ವಿಷಯವು ಹೊರಟಿತು. ಆಗ ತಮ್ಮ ದಂಡಿನೊಳಗಿನ ಇಂತಿಂಥ ಜನರು ಚೆನ್ನಾಗಿ ಗುರಿ ಹೊಡೆಯುವವರಿದ್ದಾರೆಂದು ಸುಲ್ತಾನನು ಅನ್ನಲು, ಖಾನನು:— ಜೀ ಹಜರತ್, ನಮ್ಮ ಕಾಸೀಮನಂಥ ಗುರಿ

ಹೊಡೆಯುವವನನ್ನು ನಾನಿದು ವರೆಗೂ ನೋಡಿರುವದಿಲ್ಲೆಂದು ನುಡಿದನು. ಅದನ್ನು ಕೇಳಿ, ಅವನ ಪರೀಕ್ಷೆಯನ್ನೇ ಮಾಡಬೇಕೆಂದು ಸುಲ್ತಾನನು ಮನಸ್ಸಿನಲ್ಲಿ ನಿಶ್ಚಯಿಸಿದನು. ಕುಸ್ತಿಯಲ್ಲಿ ಕಾಸೀಮನಂಥ ನಿಪುಣನು ಅನ್ಯರಿಲ್ಲೆಂಬದು ಈ ಮೊದಲೇ ಟೀಪುವಿನ ಮನವರಿಕೆಯಾಗಿತ್ತು. ಸರಮಸ್ತಖಾನನೆಂಬ ಸುಲ್ತಾನನ ಖಾಸ ತಾಲೀಮಖಾನೆಯ ಪ್ರಸಿದ್ಧ ಪೈಲವಾನನನ್ನು ಹಾ, ಹಾ ಅನ್ನುವಷ್ಟರಲ್ಲಿಯೇ ಕಾಸೀಮನು ಇಳೆಗೊರಗಿಸಿದ್ದನು! ಅಂದಿನಿಂದ ಕಾಸೀಮನ ಬಗ್ಗೆ ಟೀಪುವಿನ ಜೀವವು ಮತ್ತಿಷ್ಟು ಆಕರ್ಷಿಸಲ್ಪಟ್ಟಿತು. ಬೇಟೆಯಲ್ಲಿಯೂ ಕಾಸೀಮನು ನುರಿತವನೆಂಬದನ್ನು ಕೇಳಿ ಅವನಿಗೆ ಇನ್ನಿಷ್ಟು ಆನಂದವಾಯಿತು. ಸುಲ್ತಾನನೂ ಉತ್ತಮ ಬೇಟೆಗಾರನಿದ್ದನು. ಅಂದಮೇಲೆ ಕೇಳುವದೇನು? ಕುಸ ದಿನಗಳಲ್ಲಿಯೇ ಸುಲ್ತಾನನು ಬೇಟೆಗೆ ಹೊರಡುವದನ್ನು ನಿಶ್ಚಯಿಸುವ ಸಲುವಾಗಿ ದರ್ಬಾರವನ್ನು ಕೂಡಿಸಿದನು. ಆ ದರ್ಬಾರದಲ್ಲಿ ನಿಜವಾದ ಆಯೇಷಾಪ್ರೇಮಿಗಳಿಗಾದ ಹಿಗ್ಗನ್ನು ವರ್ಣಿಸಲಸದಳವು!

ಶ್ರೀರಂಗಪಟ್ಟಣದಿಂದ ಬೇಟೆಯಾಡುವ ಕಾನನವು ವಿಶೇಷ ದೂರದಲ್ಲಿರಲಿಲ್ಲ; ಒಂದೆರಡು ಹರದಾರಿಗಳಲ್ಲಿಯೇ ದಟ್ಟವಾದ ಅಡವಿಯಿತ್ತು; ಮತ್ತು ಆ ಅಡವಿಯಲ್ಲಿ ಬಗೆಬಗೆಯ ಕಾಡುಮೃಗಗಳು ಸ್ವೇಚ್ಛೆಯಿಂದ ಸಂಚರಿಸುತ್ತಿದ್ದವು. ಸುಲ್ತಾನನ ಪದರಿನಲ್ಲಿ ಬೇಟೆಗಾರರು ನೂರಾರು ಜನರಿದ್ದದರಿಂದ, ಅವರು ಸಂಭ್ರಮದಿಂದ ಊದುತ್ತ-ಬಾರಿಸುತ್ತ ಪಟ್ಟಣದಿಂದ ಬೇಟೆಗೆ ಹೊರಟಾಗ, ಆ ನೋಟವು ನೋಡತಕ್ಕಂಥಾದ್ದಿರುತ್ತಿತ್ತು! ಅಡವಿಗೆ ತಲುಪುತ್ತಲೆ ಬೇಟೆಗಳನ್ನೆಬ್ಬಿಸಲಿಕ್ಕೆಂದು ಮಾಡುವ ಬಗೆಬಗೆಯ ಪ್ರಯತ್ನಗಳಿಂದ ಒಬ್ಬರ ಮಾತು ಮತ್ತೊಬ್ಬರಿಗೆ ಕೇಳಿಸುತ್ತಿರಲಿಲ್ಲ ಸಹ. ಈ ಪ್ರಕಾರವಾದ ಲವಾಜಮಿನಿಂದ ಒಂದು ದಿನ ಟೀಪುವು ಬೇಟೆಗೆ ಸಾಗಿರಲು,

ಅವನ ಜನರಿಗೆ ಮೊದಮೊದಲು ಒಂದೂ ದೊಡ್ಡ ಮೃಗವು ಕಾಣಿಸಿ ಕೊಳ್ಳಲಿಲ್ಲ. ಒಂದೆರಡು ಸಣ್ಣ-ಪುಟ್ಟ ಕಾಡಹಂದಿಗಳೂ, ಕೆಲವು ಚಿಗರೆಗಳೂ ಒಂದು ಕಡೆಯಿಂದ ಇನ್ನೊಂದು ಕಡೆಗೆ ಓಡಿ ಹೋದ ವಿಷ್ಟೇ. ಎಷ್ಟೋ ಹೊತ್ತಿನ ವರೆಗೆ ಅಡವಿಯನ್ನು ಕಲಕಿದರೂ, ಒಂದೂ ಬೇಟೆಯು ದೃಷ್ಟಿಗೋಚರವಾಗಲಿಲ್ಲ. ಆದರಿಂದ ಅಂದು ನಿರಾಶರಾಗಿ ಮರಳಿ ಹೋಗಬೇಕಾಗುವದೋ-ಏನೋ ಎಂಬ ವಿಚಾರ ದಲ್ಲಿಎಲ್ಲರೂ ಮಗ್ನರಾದರು. ಇಷ್ಟರಲ್ಲಿ ಹೊಳೆಯ ದಂಡೆಯೊಳಗಿನ ಒಂದು ಗಹ್ವರದಿಂದ ಎರಡು ಕರಡಿಗಳು ಹೊರಬೀಳುತ್ತಿರುವದನ್ನು ಅವರು ಕಂಡರು ಆ ಮೇಲೆ ಕೇಳುವದೇನು? ಎಲ್ಲರೂ ಆ ಕರಡಿ ಗಳ ಮೇಲೆ ಮುಗಿಬಿದ್ದರು. ಅವೂ ರೇಗಿಗೆದ್ದವು. ಅವುಗಳಲ್ಲಿಯ ಒಂದು ಹೆಣ್ಣು ಕರಡಿಯು ಆರೆಂಟು ಜನರಿಗೆ ಗಾಯ ಮಾಡಿ, ಕಡೆಗೆ ಪ್ರಾಣ ಬಿಟ್ಟಿತು! ಬೇಟೆಗಾರರು ಆ ಅಡವಿಯಲ್ಲಿ ಮತ್ತೂ ಒಳ ಸೇರಿದರು. ಜನರು ಹೊಕ್ಕರೆ ಕಾಣದಷ್ಟು ಎತ್ತರವಾಗಿ ಹುಲ್ಲು ಬೆಳೆದ ಅಡವಿಯು ಅವರಿಗೆ ಹತ್ತಿತು. ಅಂಥಲ್ಲಿಯೇ ಕಾಡುಮೃಗ ಗಳು ಹೆಚ್ಚಾಗಿರುವದು ಸಹಜವು. ಆದರಿಂದ ಎಲ್ಲರೂ ಆ ದಟ್ಟಡವಿ ಯನ್ನು ಒಮ್ಮೆಲೆ ನುಗ್ಗಬೇಕೆಂದು ಸುಲ್ತಾನನು ಹುಕುಮು ಮಾಡಿ ದನು. ಕೂಡಲೆ ನಾ ಮುಂದೆ-ನಾ ಮುಂದೆ ಎಂದು ಎಲ್ಲರೂ ಓಡಹ ತ್ತಿದರು. ಅವರ ಗೊಂದಲವನ್ನು ಕೇಳಿ ಸುಲ್ತಾನನು ಕೆಲ ಜನರನ್ನು ಹೆಸರುಗೊಂಡು ಕರೆದು, ಇಂತಿಂಥವರೇ ನಮ್ಮೊಡನೆ ಮುಂದೆ ಸಾಗಿರಿ; ಉಳಿದವರೆಲ್ಲರೂ ನಮ್ಮ ಹಿಂದಿನಿಂದ ಬರ್ರಿ, ಎಂದು ಗಟ್ಟಿಯಾಗಿ ಒದರಿ ಹೇಳಿದನು. ಆತನು ಸಂಗಡ ಕರೆದಿದ್ದ ಜನರಲ್ಲಿ ನಮ್ಮ ಕಾಸೀ ಮನೇ ಮೊದಲನೆಯವನಾಗಿದ್ದನು. ಆಗ ಸುಲ್ತಾನನು ಕಾಸೀಮ ನನ್ನು ಕುರಿತು:—ಕಾಸೀಮಾ, ನೀನು ಚನ್ನಾಗಿ ಗುರಿ ಹೊಡೆಯು ತ್ತೀಯೆಂದು ಖಾನಸಾಹೇಬರು ನನಗೆ ತಿಳಿಸಿದ್ದಾರೆ. ನಿನ್ನ ನಿಶಾನಿ

ಬಾಜಿಯನ್ನು ಕಣ್ಣುಮುಟ್ಟ ನೋಡುವ ಸಲುವಾಗಿಯೇ ನಾನು ಇಂದು ಈ ಬೇಟೆಯ ಬೇತನ್ನು ಮಾಡಿರುತ್ತೇನೆ. ಇಂದು ತೋರಿಸು, ನನಗೆ ನಿನ್ನ ಗುರಿಹೊಡೆಯುವ ಕೌಶಲ್ಯವೆಷ್ಟಿದೆಯೆಂಬದನ್ನು; ಎಂದಂದನು.

ಆ ಜನರು ಆ ದಟ್ಟವಾದ ಹುಲ್ಲೊಳಗೆ ೫೦-೬೦ ಹೆಜ್ಜೆ ಹೋಗಿರಬಹುದೋ-ಇಲ್ಲವೋ ಇಷ್ಟರಲ್ಲಿ ಟೀಪುವು ಹತ್ತಿದ್ದ ಆನೆಯು ಚಮತ್ಕಾರಿಕ ದನಿಯಿಂದ ಊದರಿತು. ಬೇಟೆಯ ಮೃಗಗಳು ಸಮೀಪದಲ್ಲೇ ಇರುವವೆಂದು ಸೂಚಿಸುತ್ತಿದೆಯೋ-ಏನೋ ಎಂಬಂತೆ, ಅದರ ಆ ಶಬ್ದವನ್ನು ಕೇಳಿದವರಿಗೆ ಅನಿಸುತ್ತಿತ್ತು. ಆಗ ಟೀಪುವು ಆ ಆನೆಗೆ:—ಶಾಬಾಸ! ಹೈದರ; ನಡೆ ಮುಂದಕ್ಕೆ, ಎಂದಂದನು ಕೂಡಲೆ ಆ ಆನೆಯು ಉತ್ಸುರದಿಂದ ಸಾಗಹತ್ತಿತು. ಇಷ್ಟರಲ್ಲಿ ಹಿಂದಿನವನು ಗುಂಡು ಹೊಡೆದುದರಿಂದ, ಆ ಗುಂಡು 'ಸೂಂ' ಎಂದು ಸಪ್ಪಳ ಮಾಡುತ್ತ ಟೀಪುವಿನ ಪಕ್ಕದಲ್ಲಿ ಹಾದು ಹೋಯಿತು. ಕೂಡಲೆ ಎರಡು ದೊಡ್ಡ ಹುಲಿಗಳು ಓಡುತ್ತೋಡುತ್ತ ಟೀಪುವಿನ ಬಳಿಗೆ ಬಂದವು. ಅದರಲ್ಲೊಂದು ಕೆರಳಿದ ಹೆಣ್ಣುಲಿಯು ಅತ್ತಿತ್ತ ನೋಡಿ, ಬಾಲವನ್ನೊಮ್ಮೆ ನೆಲಕ್ಕಪ್ಪಳಿಸಿ, ಇನ್ನು ಅದು ಯಾವನೊಬ್ಬನ ಕುತ್ತಿಗೆಗೆ ಜಿಗಿಯುತಕ್ಕದ್ದಿತ್ತು; ಎರಡನೆಯ ಹುಲಿಯು ಆ ಬೇಟೆಗಾರರಿಗೆ ಅಂಜಿ ಓಡಿ ಹೋಗುವ ಸಾಹಸ ನಡಿಸಿತ್ತು. ಅಷ್ಟರಲ್ಲಿ ಮತ್ತೊಬ್ಬನ ಗುಂಡು ಬಂದು ಆ ಎರಡನೇ ಹುಲಿಯ ಕಾಲಿಗೆ ತಾಕಿತು ಕೂಡಲೆ ಆ ಹುಲಿಯು ಓಡಿ ಹೋಗುವದನ್ನು ಬಿಟ್ಟು, ಅವರ ಮೇಲೆ ಏರಿ ಬರಹತ್ತಿತು. ಅದು ಅಲ್ಲಿ ನೆರೆದಿದ್ದ ಬೇಟೆಗಾರರ ಎಲ್ಲ ಆನೆಗಳನ್ನು ಮಿಕಿ-ಮಿಕಿ ನೋಡಿ, ಕಡೆಗೊಂದು ಆನೆಯ ಸೊಂಡಿಯ ಮೇಲೆ ಜಿಗಿಯಿತು ಆಗ ಕೇಳುವದೇನು? ಆ ಹುಲಿಯ ಮೇಲೆ ಬೇರೆ ಬೇರೆ ಕಡೆಗಳಿಂದ ಗುಂಡುಗಳ ಮಳೆಯೇ ಸುರಿಯಹತ್ತಿತು! ಕಡೆಗೆ ಆ ಹುಲಿಯು ಹೆದರಿ ಮತ್ತೆ ಓಡಿಹೋಗಲು ಸಿದ್ಧ

ವಾಯಿತು. ಅದನ್ನು ಬೆನ್ನಟ್ಟಲು ಆ ಬೇಟೆಗಾರರ ತಂಡಗಳು ಕಿಕ್ಕಿರಿ
ದವು. ಕಾಸೀಮನೂ ಆ ಹುಲಿಯನ್ನು ಬೆನ್ನಟ್ಟತಕ್ಕವನೇ; ಆದರೆ
ಇಷ್ಟರಲ್ಲಿ ಆತನ ದೃಷ್ಟಿಯು ಸುಲ್ತಾನನ ಕಡೆಗೆ ಹೊರಳಿತು ಸುಲ್ತಾ
ನನು ಮೊದಲೇ ಕೆರಳಿದ್ದ ಆ ಇನ್ನೊಂದು ಹುಲಿಗೆ ಗುಂಡು ಹಾಕಿ
ದ್ದನು. ಆ ಗುಂಡು ಅದಕ್ಕೆ ಬಡಿಯಲಿಲ್ಲ. ಅದರಿಂದ ಆ ಹುಲಿಯು
ಮತ್ತಿಷ್ಟು ಕೆರಳಿ, ಟೀಪುವಿನ ಆನೆಯಾದ ಹೈದರನ ಸೊಂಡೆಯ ಮೇಲೆ
ಜಿಗಿಯಿತು. ಆ ಆನೆಯು ಅದನ್ನೊಮ್ಮೆ ಎತ್ತಿ ಒಗೆಯಿತು. ಆದರೂ
ಆ ಹುಲಿಯು ಹಿಳ್ಳೀ ಕಸುವಿನಿಂದ ಮತ್ತೆ ಹೈದರನ ಕಾಲಿಗೆ ಸುತ್ತು
ವರೆಯಿತು. ಸುಲ್ತಾನನು ಅದಕ್ಕೆ ಗುಂಡು ಹಾಕಬೇಕೆಂದು ಕೈ-
ಯಲ್ಲಿ ಬಂದೂಕು ಹಿಡಿದಿದ್ದನು; ಆದರೆ ಹೈದರಆನೆಯು ಆ ಹುಲಿಯ
ಕಾಟವನ್ನು ತಾಳಲಾರದೆ ಥೈ-ಥೈ ಎಂದು ಕುಣಿಯಹತ್ತಿದ್ದರಿಂದಲೂ,
ಸುಲ್ತಾನನು ಹೈದರನ ಮೇಲೆ ಅಂಬಾರಿಯಲ್ಲಿ ಕುಳಿತಿದ್ದರಿಂದಲೂ
ಅವನಿಂದ ಆ ಹುಲಿಗೆ ಗುಂಡು ಹಾಕುವದಕ್ಕೆ ಸಾಧ್ಯವಿರಲಿಲ್ಲ. ಅದ
ನ್ನೆಲ್ಲ ನೋಡಿ ಕಾಸೀಮನು ತನ್ನ ಬಂದೂಕನ್ನು ಆ ಹುಲಿಯ ಮೇಲೆ
ಗುರಿಯಿಟ್ಟನು. ಇಷ್ಟರಲ್ಲಿ ತನ್ನ ಜೀವಕ್ಕಿಂತಲೂ ಕೀರ್ತಿಗೆ ಹೆಚ್ಚು
ಮಹತ್ವ ಕೊಟ್ಟಿರುವ ಇನ್ನೊಬ್ಬ ಸಾಹಸಿಗನಾದ ಬೇಟೆಗಾರನು
ತನ್ನ ಆನೆಯಿಂದ ಟಣ್ಣನೆ ನೆಲಕ್ಕೆ ಜಿಗಿದು, ಓಡುತ್ತ ಬಂದು ತನ್ನ
ಕೈಗತ್ತಿಯಿಂದ ಆ ಹುಲಿಯ ಮೈಮೇಲೆ ಪೆಟ್ಟು ಹಾಕಿದನು. ಆಗ
ಆ ಹುಲಿಯು ಹೈದರನ ಕಾಲುಗಳನ್ನು ಬಿಟ್ಟುಕೊಟ್ಟು, ಕೆಂಪಡರಿದ
ಕಣ್ಣುಗಳಿಂದ ಆ ಆಗಂತುಕನನ್ನು ನೋಡಿ, ಅವನ ಮೇಲೆಯೇ ಜಿಗಿ
ಯಿತು. ಕ್ಷಣಾರ್ಧದಲ್ಲಿ ಆ ಹುಲಿಯು ಆ ಮಾನವನ ಕುತ್ತಿಗೆಯ
ನೆತ್ತರವನ್ನು ಹೀರಿ, ಅವನನ್ನು ಇಳೆಗೊರಗಿಸಿ, ಮತ್ತೆ ಹೈದರನ
ಕಾಲಿಗೇ ಗಂಟು ಬಿತ್ತು. ಅದು ಇನ್ನು ಹೈದರನ ಹೃದಯಕ್ಕೆ ತನ್ನ
ಪಂಜರದಿಂದ ಹೊಡೆಯುವದರಲ್ಲಿತ್ತು. ಅಷ್ಟರಲ್ಲಿ ಕಾಸೀಮನ ಗುಂಡು

ಬಂದು ಅದರ ಮರ್ಮಸ್ಥಳಕ್ಕೆ ಬಡೆಯಿತು. ಅದರಿಂದ ಆ ಹುಲಿಯು ನಿಷ್ಪ್ರಾಣವಾಗಿ ನೆಲಕ್ಕೆ ಬಿತ್ತು. ಕೂಡಲೆ ಹೈದರಆನೆಯು ಅದನ್ನು ಕಚಪಚ ತುಳಿಯಲಾರಂಭಿಸಿತು. ಎಷ್ಟು ತುಳಿದರೂ ಆ ಮೂಕ ಪ್ರಾಣಿಗೆ ಸಮಾಧಾನವಾಗಲಿಲ್ಲ. ಕಡೆಗೆ ಟೀಪುವು ಹಿಳ್ಳೀ ಜಾಣ ತನದಿಂದ ಅದನ್ನು ಸಮಾಧಾನ ಪಡಿಸಿದನು.

ಕಾಸೀಮನ ಆಗಿನ ಆ ಕೌಶಲ್ಯವನ್ನು ಕಂಡು, ಟೀಪುವಿಗೆ ಪರಮಾನಂದವಾಯಿತು. ಅದರಿಂದ ಆತನ ಕುತ್ತಿಗೆಯ ಶಿರಗಳು ಉಬ್ಬಿ ಬಂದವು. ಬಾಯಿಂದ ಶಬ್ದಗಳೇ ಹೊರಡದಾದವು. ಕೆಲ ಹೊತ್ತಿನ ಮೇಲೆ ಅವನು:—"ಕಾಸೀಮಾ, ನೀನು ಇಂದು ನನ್ನ ಬಳಿಯಲ್ಲಿರದಿದ್ದರೆ, ನನ್ನ ಪ್ರೀತಿಯ ಈ ಹೈದರನು ನಿಜಧಾಮಕ್ಕೆ ತೆರಳುತ್ತಿತ್ತು. ಇಷ್ಟೇ ಅಲ್ಲ; ನನ್ನ ಗತಿಯೇನಾಗುತ್ತಿತ್ತೋ ಯಾರು ಬಲ್ಲರು? ಎಂದು ಆಡಿ ತೋರಿಸಿದನು.

ಮತ್ತೆ ಎಷ್ಟೋ ಹೊತ್ತು ಬೇಟೆಯ ಸಮಾರಂಭವು ನಡೆ ಯಿತು. ಕಾಸೀಮನ ಕರ್ತೃತ್ವಶಕ್ತಿಯು ಅಂದು ನಾಲ್ಕಾರು ಪ್ರಸಂ ಗಗಳಲ್ಲಿ ಸುಲ್ತಾನನಿಗೆ ಚೆನ್ನಾಗಿ ಕಂಡು ಬಂದಿತು. ಹಿಂದು ಅಡ ವಿಯ ಆನೆಯನ್ನು ಕಾಸೀಮನು ಕೊಂದನು; ಆದರೆ ಅದೇ ಮಂ ಹಾಕಿದ್ದ ಹಿಂದು ಆನೆಯನ್ನು ಗುಂಡು ಹಾಕೆಂದು ಸುಲ್ತಾನನು ಕಟ್ಟಪ್ಪಣೆ ಮಾಡಿದರೂ, ಭೂತದಯಾಪ್ರೇರಿತನಾದ ಆತನು ಅದಕ್ಕೆ ಬಡಿಯದಂತೆ ಗುಂಡು ಹಾರಿಸಿ, ಅದನ್ನು ಅಲ್ಲಿಂದ ಓಡಿಸಿಬಿಟ್ಟನು. ಸುಲ್ತಾನನ ಕ್ರೂರತನದ ವಿಷಯವಾಗಿ ಅವನಿಗೆ ಬಲು ಕೆಡಕೆನಿಸು ತ್ತಿತ್ತು; ಆದರೆ ಅವನನ್ನು ಸುಧಾರಿಸುವದು ಶಕ್ಯವಿರದ್ದರಿಂದ, ಕಾಸೀಮನು ತನ್ನ ಮನಸ್ಸಿನಲ್ಲಿಯೇ ಹಳಹಳಿಸುತ್ತಿದ್ದನು. ಅವರೆ ಲ್ಲರೂ ಅಂದಿನ ಬೇಟೆಯನ್ನು ತೀರಿಸಿಕೊಂಡು, ತಮ್ಮ ಭಾವಣೆಯನ್ನು ಪ್ರವೇಶಿಸುತ್ತಿದ್ದರು. ಇಷ್ಟರಲ್ಲಿ ಹಿಂದು ಮದವೇರಿದ ಆನೆಯು ಆ

ಭಾವಣಿಯಲ್ಲಿ ಓಡುತ್ತ ಬಂತು. ಆದರಿಂದ ಎಲ್ಲರ ಹೌಹಾರಿತು. ಅಷ್ಟರಲ್ಲಿ ಕೆಲ ಜನ ಬೋಯಿಗಳಿಂದ ಹೊರಲ್ಪಟ್ಟ ಒಂದು ಮೇಣೆಯು ಆ ಭಾವಣಿಯ ಪಕ್ಕದಲ್ಲಿ ನಡೆದಿತ್ತು. ಆ ಮೇಣೆಯು ಅಬ್ದುಲ್‌ರಹಿಮಾನಖಾನನ ಹೆಂಡತಿಯಾದ ಅಮೀನೆಯದೇ ಎಂಬದು ಕಾಸೀಮನಿಗೆ ತಟ್ಟನೆ ಹೊಳೆಯಿತು. ಮೇಣೆಯೊಡನೆ ಗಂಡಸರಾರೂ ಇರದ್ದನ್ನು ಕಂಡು ಅವನಿಗೆ ಆಶ್ಚರ್ಯವೆನಿಸಿತು. ಕೂಡಲೆ ಆತನು ಅಲ್ಲಿಗೆ ಹೋಗಿ, 'ಈ ಮೇಣೆಯ ಕೂಡ ಗಂಡಸರಾರೂ ಇಲ್ಲವೇಕೆ?' ಎಂದು ಪ್ರಶ್ನೆ ಮಾಡಿದನು. ಬೋಯಿಗಳು ಅವನಿಗಿನ್ನೇನೋ ಉತ್ತರವನ್ನು ಹೇಳತಕ್ಕವರು; ಇಷ್ಟರಲ್ಲಿ ಆ ಕೊಬ್ಬಿದ ಆನೆಯು ಅತ್ತ ಕಡೆಗೇ ಬರಹತ್ತಿತು. ಆಗ ಬೋಯಿಗಳು ಮೇಣೆಯನ್ನು ಸಮೀಪದಲ್ಲಿಯ ಸಂದಿಗೊಯ್ಯುವ ಸಾಹಸ ನಡೆಸಿದರು; ಆದರೆ ಬೋಯಿಗಳೆಲ್ಲರೂ ಕೊಬ್ಬಿದ ಆ ಆನೆಗೆ ಹೆದರಿದ್ದರಿಂದ, ಅವರ ಕೈಕಾಲುಗಳು ನಡುಗಹತ್ತಿದವು. ಅದರಿಂದ ಆ ಮೇಣೆಯು ಆಗ ಅವರಿಂದ ಎತ್ತದಾಯಿತು. ಕಾಸೀಮನು ಮದವೇರಿದ ಆ ಆನೆಯ ಮಾವುತನನ್ನು ಒದರಿ, ಅದನ್ನು ಬೇರೆ ಕಡೆಗೆ ತಿರುಗಿಸಲು ಹೇಳಿದನು; ಆದರೆ ಆ ಆನೆಯು ತೀರ ತಾಳಗೆಟ್ಟಿತ್ತಾದ್ದರಿಂದ, ಆ ಮಾವುತನಿಂದ ಹಾಗೆ ಮಾಡುವದಾಗಲಿಲ್ಲ. ಆನೆಯು ಭರದಿಂದ ಸಮೀಪಿಸಿದ ಕೂಡಲೆ ಕಾಸೀಮನು ತನ್ನ ಒರೆಯೊಳಗಿನ ಕತ್ತಿಯನ್ನು ಹಿರಿದು, ಅದರ ಸೊಂಡಿಗೆ ಬಲವಾದ ಪೆಟ್ಟು ಹಾಕಿದನು. ಕೂಡಲೆ ಆನೆಯ ಮದ ಇಳಿದು, ಅದು 'ಚಿರ್-ಚಿರ್' ಎಂದು ಶಬ್ದ ಮಾಡುತ್ತ ಹಿಂದಿರುಗಿ ಹೋಯಿತು! ಇತ್ತ ಬೋಯಿಗಳು ಆನೆಯ ಆ ಶಬ್ದವನ್ನು ಕೇಳಿ ಅರ್ಧಮಾರ್ಧ ಎತ್ತಿದ್ದ ಮೇಣೆಯನ್ನು ನೆಲಕ್ಕೆ ಒಗೆದು ಬಿಟ್ಟರು! ಒಳಗಿದ್ದ ಖಾನಸಾಹೇಬಳೂ ಗಾಬರಿಯಿಂದ ಚೀರಿ ಮೈ ಮರೆದಳು!!

ಕೂಡಲೆ ಕಾಸೀಮನು ಆ ಪಲ್ಲಕ್ಕಿಯನ್ನು ಸಾವರಿಸಿ ಹಿಡಿದನು.

ಪಡದೆಗಳನ್ನು ಓರೆ ಮಾಡಿ ಒಳಗೆ ಯಾರಿರುವರೆಂಬದನ್ನು ನೋಡ
ಬೇಕೋ-ನೋಡಬಾರದೋ ಎಂಬ ಬಗ್ಗೆ ಆತನು ಕ್ಷಣಕಾಲ ಮನ
ದಲ್ಲಿಯೇ ಆಲೋಚಿಸಿ, ಕಡೆಗೆ ಒಳಗೆ ಹಣಿಕಿ ಹಾಕಿದನು. ಒಳಗಿದ್ದ
ಖಾನಮುಳು ಸ್ಮೃತಿತಪ್ಪಿ ಬಿದ್ದಿರುವಳೆಂಬದು ಅವನಿಗೆ ತಿಳಿಯಿತು.
ಕಣ್ಣಿಗೆ ನೀರು ಹಚ್ಚಬೇಕೆಂದರೆ, ಸಮೀಪದಲ್ಲೆಲ್ಲೂ ನೀರು ಕಾಣಿಸ
ಲಿಲ್ಲ ಆಗ ಅವನು ತನ್ನ ಮುಂಡಾಸವನ್ನು ಬಿಚ್ಚಿ, ಅದರ ಸೆರಗಿ
ನಿಂದ ಅವಳಿಗೆ ಗಾಳಿ ಬೀಸತೊಡಗಿದನು. ಎಷ್ಟೋ ಹೊತ್ತು
ಗಾಳಿ ಬೀಸಿದರೂ ಅವಳಿಗೆ ಎಚ್ಚರವುಂಟಾಗಲಿಲ್ಲ. ಕಡೆಗೆ ಅವನು
ಅವಳ ಕಿವಿಯ ಹತ್ತಿರ ಹೋಗಿ ಏನೇನೋ ಅಂದನು. ಅಲ್ಪಾವಕಾಶ
ದಲ್ಲಿಯೇ ಅವಳು ಚೇತನಗೊಂಡಳು. ಅವಳು ತನ್ನ ಸೆರಗನ್ನೂ
ಬುರುಕೆಯನ್ನೂ ಸಾವರಿಸಿಕೊಂಡು, ಅವನಿಗೆ ಏನೇನೋ ಮೆಲ್ಲಗೆ
ಹೇಳಿ ದೂರ ಸರಿಯಲು ಸಂಜ್ಞೆ ಮಾಡಿದಳು. ಕೂಡಲೆ ಅವನು
ಸರಿದು ನಿಂತನು. ಬಳಿಕ ಬೋಯಿಗಳು ಆ ಮೇಣೆಯನ್ನು ಹೊತ್ತು
ಕೊಂಡು ನಡೆದರು.

ಕಾಸೀಮನು ಅಮೀನೆಯ ಕಿವಿಯಲ್ಲಿ ಯಾವ ಶಬ್ದಗಳನ್ನುಚ್ಚ
ರಿಸಿದ್ದನೋ, ಅವುಗಳನ್ನು ಕೇಳಿ ಅವಳಿಗೆ ಪರಮಾಹ್ಲಾದವಾಗಿತ್ತು;
ಆದರೆ ನಡುದಾರಿಯಲ್ಲಿ ಹೀಗೆ ಪರಪುರುಷರೊಡನೆ ಭಾಷಣ-ಪ್ರತಿ
ಭಾಷಣ ಮಾಡುತ್ತ ಕೂಡ್ರುವದು ಅಮೀನೆಗೂ, ಆಗಿನ ಸಮಾಜಕ್ಕೂ
ಸೇರದ ಮಾತಾದ್ದರಿಂದ, ಅವಳು ಕಾಸೀಮನಿಗೆ ಹಿಂದಕ್ಕೆ ಸರಿಯಲು
ಸೂಚಿಸಿದಳು ಮಾತ್ರ. ಅಮೀನೆಯು ಹೀಗೆ ಸಂಕಟಕ್ಕೊಳಗಾಗಿ
ರಲು, ಕಾಸೀಮನ ಸಮಯೋಚಿತವಾದ ಆಚರಣೆಯಿಂದ ಅವಳು
ಬದುಕಿ ಉಳಿದಳೆಂಬ ವಾರ್ತೆಯು ತೀವ್ರವೇ ಆ ಭಾಗದಲ್ಲಿ ತುಂಬ
ಪಸರಿಸಿತು. ಅದನ್ನು ಕೇಳಿ ಖಾನನಿಗೂ ಟೀಪುವಿಗೂ ಆದ ಹರ್ಷ
ವನ್ನು ವರ್ಣಿಸಲಾಸಲ್ಲ.

ಮರುದಿನ ಕೂಡಿದ ದರ್ಬಾರದಲ್ಲಿ ಟೀಪುವು ಕಾಸೀಮನನ್ನು ತನ್ನ ಹತ್ತರ ಕರೆದು:— ಕಾಸೀಮಾ, ನಿನ್ನಿನ ಬೇಟೆಯ ಕಾಲಕ್ಕೆ ನಾವು ನಿನ್ನ ಕೌಶಲ್ಯವನ್ನು ಕಣ್ಣುಟ್ಟಿ ನೋಡಿದೆವು; ಮತ್ತು ನಿನ್ನೆ ಸಾಯಂಕಾಲದಲ್ಲಿ ನಮ್ಮ ಖಾನಸಾಹೇಬರ ಹೆಂಡತಿಯ ಪ್ರಾಣವು ನಿನ್ನಿಂದಲೇ ಉಳಿಯಿತೆಂದು ಕೇಳಿದೆವು. ಆ ಮದವೇರಿದ ಆನೆಯ ಮದವಿಳಿಸಿದವರಿಗೆ ಇನಾಮು ಕೊಡುವೆವೆಂದು ನಾವು ನಿನ್ನೆಯೇ ಹೇಳಿರುವೆವು. ಅಂದಮೇಲೆ ನಾವು ಆ ಬಕ್ಷೀಸನ್ನು ಈಗ ನಿನಗೇ ಕೊಡುತ್ತೇವೆ, ಎನ್ನಲು, ಕಾಸೀಮನು ನಮ್ರಭಾವದಿಂದ:—ಸರ ಕಾರ, ಆ ಬಗ್ಗೆ ನಾನೇನು ಹೇಳಲಿ? ತಮ್ಮ ಹಾಗು ಖಾನಸಾಹೇ ಬರ ಚಿತ್ತಕ್ಕೆ ಬಂದಂತೆ ಮಾಡಬಹುದು; ನಾನು ತಮ್ಮ ನಮ್ರ ಸೇವಕನು, ಎಂದು ಉತ್ತರ ಕೊಟ್ಟನು.

ಆಗ ಟೀಪುವು ಹಿಗ್ಗಿ ಉತ್ಸಾಹದಿಂದ:—ಕಾಸೀಮಾ, ನಿನ್ನ ವಿಷಯವಾಗಿ ಹೇಳತಕ್ಕದ್ದನ್ನೆಲ್ಲ ಖಾನಸಾಹೇಬರು ಈ ಮೊದಲೇ ನಮಗೆ ತಿಳಿಸಿದ್ದಾರೆ. ಅದಕ್ಕಾಗಿಯೇ ನಾವಿಂದು ನಿನ್ನ ಹುದ್ದೆಯನ್ನು ಏರಿಸುವೆವಲ್ಲದೆ, ನಿನ್ನನ್ನು ಬಹು ದೊಡ್ಡ ಅಧಿಕಾರದ ಜಾಗೆಗೆ ವರ್ಗ ಮಾಡುವೆವು. ಇಂದಿನಿಂದ ನೀನು ನಮ್ಮ ಅಂಗರಕ್ಷಕನಾಗಿರಬೇಕು. ನೀನು ಯಾವಾಗಲೂ ನಮ್ಮ ಹತ್ತರವೇ ಇರಬೇಕು. ನಾವಿನ್ನು ಈ ಮೊದಲಿಗಿಂತ ದೊಡ್ಡ ದೊಡ್ಡ ಯುದ್ಧಗಳನ್ನು ಮಾಡುವವರಿದ್ದೇವೆ. ನಾವೂ ನೀನೂ ಕೂಡಿಯೇ ಆ ನಮ್ಮ ಶತ್ರುಗಳನ್ನು ಜೀರಿಗೆ ತರ ಬೇಕಾಗಿದೆ. ನಿನ್ನನ್ನು ಇಂದಿನಿಂದ ನಾವು ನಮ್ಮ ದಂಡಿನ ಜಮಾ ದಾರನನ್ನಾಗಿ ಮಾಡಿರುತ್ತೇನೆ, ಎಂದು ಹುಕುಮು ಮಾಡಿದನು.

ಕೂಡಲೆ ಕಾಸೀಮನು ಸುಲ್ತಾನನಿಗೆ ನೆಲಮುಟ್ಟಿ ಸಲಾಮು ಮಾಡಿ, ದರ್ಬಾರದೊಳಗಿನ ತನ್ನ ಹೊಸ ನಿರ್ದಿಷ್ಟ ಸ್ಥಳಕ್ಕೆ ಹೋಗಿ ಕುಳಿತನು. ಆಗ ಸಭಿಕರೆಲ್ಲರೂ ಸುಲ್ತಾನನನ್ನು ನಾನಾ ಬಗೆಯಿಂದ

ಹೊಗಳಿದರು. ತದನಂತರ ಅವರು ಕಾಸೀಮನನ್ನೂ ಸ್ತುತಿಸಲಾರಂಭಿಸಿದರು. ಅವರಲ್ಲಿಯು ಖಾನನಂಥ ಕೆಲ ಸುಜನರು ತ್ರಿಕರಣಪೂರ್ವಕವಾಗಿ ಅವನನ್ನು ಹೊಗಳಿದರೆ, ಇನ್ನುಳಿದ ಅಸೂಯಾಗ್ರಸ್ತರಾದ ಕುಜನರು ಸುಲ್ತಾನನೇ ಕಾಸೀಮನನ್ನು ಹೊಗಳಿದ ಬಳಿಕ, ತಾವು ಸುಮ್ಮನಿರುವದು ಸರಿಯಲ್ಲವೆಂದು ನಿರ್ವಾಹವಿಲ್ಲದೆ ಮುಖಸ್ತುತಿ ಮಾಡಿದರು. ಹೀಗೆ ಒಟ್ಟಿನ ಮೇಲೆ ಟೀಪೂಸುಲ್ತಾನನ ದರ್ಬಾರದಲ್ಲಿ ಕಾಸೀಮನ ಅಭ್ಯುದಯವು ಭರದಿಂದ ನಡೆಯಿತು.

———0———

## ತ್ರಾವಣಕೋರದ ಯುದ್ಧ.

ನಮ್ಮ ನರವೀರ ಕಾಸೀಮನು ತನ್ನ ಕರ್ತವ್ಯತತ್ಪರತೆಯ ಮೂಲಕ ದಿನೇ ದಿನೇ ಅಭ್ಯುದಯವನ್ನು ಹೊಂದುತ್ತಿರಲು, ಒಂದು ದಿನದ ದರ್ಬಾರದಲ್ಲಿ ಸುಲ್ತಾನನು ಸಭಿಕರನ್ನುದ್ದೇಶಿಸಿ:—ಸರದಾರ ಮತ್ತು ದರಕದಾರರೇ, ತ್ರಾವಣಕೋರದ ಅರಸನ ಬಳಿಗೆ ಕಳಿಸಿದ್ದ ನಮ್ಮ ವಕೀಲನು ಅವನಿಂದ ತಂದ ಉತ್ತರವನ್ನು ನೀವೆಲ್ಲರೂ ಕೇಳಿರುವಿರಾ? ಕಾಫರರಾದ ಆ ಫಿರಂಗಿಗಳ ಬೆಂಬಲದಿಂದಲೇ ಅವನು ಇಷ್ಟು ಉನ್ಮತ್ತನಾಗಿರುತ್ತಾನೆ. ಅವರ ಕುಮ್ಮಕಿನಿಂದಲೇ ಅವನು ನಮ್ಮ ನಾಯರ ಪ್ರಜೆಗಳನ್ನು ತನ್ನ ನಾಡಿನಿಂದ ಹೊರಗೆ ಹಾಕಲಿಕ್ಕೆ ಒಪ್ಪಿರುವದಿಲ್ಲ. ಅದ್ದರಿಂದ ನಾವು ಅವನ ಮೇಲೆ ಸಾಗಿ ಹೋಗಿ ಆತನ ರಾಜ್ಯವನ್ನು ಗೆದ್ದು, ಅವನನ್ನು ಮಣ್ಣುಗೂಡಿಸಬೇಕು. ನಾಳೆಯೇ ನಮ್ಮ ಎಲ್ಲ ದಂಡುಗಳೂ ತ್ರಾವಣಕೋರದ ಕಡೆಗೆ ಹೊರಡತಕ್ಕದ್ದೆಂದು ನುಡಿದನು. ಆ ಮೇರೆಗೆ ಅವನ ದಂಡುಗಳು ಶ್ರೀರಂಗಪಟ್ಟಣದಿಂದ ಸರ್ವಸನ್ನಾಹದೊಡನೆ ಹೊರಟು, ಕುಸ ದಿನಗಳಲ್ಲಿಯೇ ತ್ರಾವಣಕೋರದ ಕೋಟೆಯ ಬಳಿಗೆ ಹೋಗಿ ಬೀಡುಬಿಟ್ಟವು.

ತ್ರಾವಣಕೋರದ ಕೋಟೆಯು ಸಾಮಾನ್ಯವಾಗಿರಲಿಲ್ಲ. ಅದ

ರಿಂದ ಅದು ಕೈ ಸೇರುವದು ಕಠಿಣ ಕೆಲಸವೇ ಆಗಿತ್ತು. ಅಲ್ಲಿಗೆ ಹೋದೊಡನೆ ಟೀಪುವು ಅದಕ್ಕೆ ಮುತ್ತಿಗೆ ಹಾಕಿದ್ದರೆ, ಅದು ಬೇಗನೆ ಹಸ್ತಗತವಾಗುವ ಸಂಭವವಿತ್ತು. ಯಾಕಂದರೆ, ಈ ಮೈಸೂರ ಹುಲಿಯು ಇಷ್ಟು ಬೇಗನೆ ಬಂದು ತಮ್ಮನ್ನು ಮುತ್ತಬಹುದೆಂಬ ಕಲ್ಪನೆಯು ಕೂಡ ಆ ತ್ರಾವಣಕೋರದ ಮಹಾರಾಜನಿಗಿರಲಿಲ್ಲ. ಅದರಿಂದ ಅವನು ಯುದ್ಧದ ಸನ್ನಾಹವನ್ನಿನ್ನೂ ಮಾಡಿರಲಿಲ್ಲ. ಆದರೂ ಟೀಪುವು ತ್ರಾವಣಕೋರದ ಕೋಟೆಯ ಬಳಿಗೆ ಹೋಗಿ ಒಮ್ಮೆಲೆ ಅದನ್ನು ಮುತ್ತಲಿಲ್ಲ. ಅವನು ತನ್ನ ವಕೀಲನನ್ನು ಮಹಾರಾಜನ ಬಳಿಗೆ ಮತ್ತೊಮ್ಮೆ ಕಳಿಸಿ, ತನ್ನ ನಾಯರ ಪ್ರಜೆಗಳನ್ನು ಮರಳಿ ಕಳಿಸಬೇಕೆಂದು ಕೇಳಿಸಿದನು. ಅವನ ಆ ಇಚ್ಛೆಯು ತ್ರಾವಣಕೋರದ ಮಹಾರಾಜನಿಂದ ಪೂರೈಸುವ ಸಂಭವವೇ ಇರಲಿಲ್ಲ; ಆದರೆ ಅವನು ಹಾಗೆಂದು ತಟ್ಟನೆ ಹೇಳಲಿಲ್ಲ ಇನ್ನು ಕೆಲ ದಿನಗಳಿಗೆ ಯೋಗ್ಯ ಜವಾಬನ್ನು ಕಳಿಸುವೆವೆಂದು ಟೀಪುವಿಗೆ ಹೇಳಿ ಕಳಿಸಿ, ಅವನು ಒಳಗಿಂದೊಳಗೆ ಯುದ್ಧದ ತಯಾರಿಯನ್ನು ಒತ್ತರದಿಂದ ನಡೆಸಿದನು. ಯೋಗ್ಯ ಉತ್ತರ ಕೊಡಲಿಕ್ಕೆ ಕೇಳಿಕೊಂಡ ಒಂದೆರಡು ಮುದ್ದತುಗಳನ್ನು ಕಳೆದು, ಹೊಸ ಮುದ್ದತನ್ನು ಮಹಾರಾಜನು ಕೇಳಿದನು; ಆದರೂ ಮಡ್ಡತಲೆಯ ಆ ಟೀಪುವಿಗೆ ಮಹಾರಾಜನ ಅಂತರಂಗವು ಹೊಳೆಯಲಿಲ್ಲ. ಹೀಗೆ ನಾಲ್ಕಾರು ತಿಂಗಳುಗಳಾದರೂ ಅತ್ತ ಒಪ್ಪಂದದ ಮಾತುಗಳು ನಡೆದೇ ಇದ್ದವು. ಇತ್ತ ಟೀಪುವಿನ ಸೈನಿಕರು ಉಂಡು-ತಿಂದು ಮೋಜಿನಿಂದ ಕಾಲಹರಣ ಮಾಡುತ್ತಿದ್ದರು; ಆದರೆ ಕಾಸೀಮನಿಗೆ ಅಂಥ ಆಲಸ್ಯತನದ ಇರವು ಸೇರುತ್ತಿರಲಿಲ್ಲ. ಮೈತುಂಬ ಕೆಲಸವಿರದ್ದರಿಂದ, ಅವನಿಗೆ ಆಗಾಗ್ಗೆ ಅಮೀನೆಯ ಸ್ಮರಣವಾಗುತ್ತಿತ್ತು. ಆ ದಂಡಿನ ಕೂಡ ಖಾನನೂ ಅಮೀನೆಯೊಡನೆ ಬಂದಿದ್ದನು ಖಾನನ ಅಡಿಗೆಯವನಾದ ಝುಲ

ಫೀಕರನೂ ಬಂದಿದ್ದನಾದ್ದರಿಂದ, ಅವನು ಆಗಾಗ್ಗೆ ಕಾಸೀಮನೆಡೆಗೆ ಬರುತ್ತಿದ್ದನು. ಈ ಸಾರೆ ಝುಲಫೀಕರನು ತನ್ನ ತಂಗಿಯಾದ ಮಿರ್ಜಾಬೀಬಿಯನ್ನು ತನ್ನ ಸಂಗಡ ಕರಕೊಂಡು ಬಂದಿದ್ದನು. ಅವಳು ಅಮೀನೆಯ ತವರುಮನೆಯ ದಾಸಿಯಾದ್ದರಿಂದ, ಅಮೀನೆ ಯನ್ನು ಹೆಚ್ಚು ಪ್ರೀತಿಸುತ್ತಿದ್ದಳು. ಖಾನನಂಥ ಮುದಿಹದ್ದಿನ ಕೂಡ ಅಮೀನೆಯ ಲಗ್ನವಾಗಬಾರದೆಂದು ಮಿರ್ಜಾಬೀಬಿಯು ಮನಃಪೂರ್ವ ಕವಾಗಿ ಬಯಸುತ್ತಿದ್ದಳು; ಆದರೆ ದುಡ್ಡಿಗೆ ಬಾಯಿ ತೆರೆದಿದ್ದ ಅಮೀ ನೆಯ ತಂದೆಯು ಯಾರ ಮಾತನ್ನೂ ಕೇಳಲಿಲ್ಲ. ಮಿರ್ಜಾಬೀಬಿಯು ಕಾಸೀಮನನ್ನು ನೋಡಿದಾಗಿನಿಂದ ತಮ್ಮ ಅಮೀನೆಗೆ ಇವನಂಥ ನರವೀರ ತರುಣಪತಿಯು ಲಭಿಸಿದ್ದರೆ, ಹಿಳಿತಾಗುತ್ತಿತ್ತೆಂದು ಅನ್ನು ತ್ತಿದ್ದಳು ಅಮೀನೆಗಾದರೂ ದಿನಾಲು ಕಾಸೀಮನ ಸಂಬಂಧದ ಒಂದಿಷ್ಟು ಹರಟೆಯನ್ನಾದರೂ ಹೊಡೆಯದಿದ್ದರೆ ಸಮಾಧಾನವಾಗು ತ್ತಿರಲಿಲ್ಲ ಅದರಿಂದ ಇವರಿಬ್ಬರಲ್ಲಿ ಗುಪ್ತಸಂಬಂಧವನ್ನುಂಟುಮಾಡಿ ದರೆ ತಪ್ಪಲ್ಲೆಂದು ಅವರಿಬ್ಬರ ಅಂತಃಕರಣದ ಪರಮಪಾವಿತ್ರ್ಯತೆ ಯನ್ನು ತಿಳಿಯದ ಆ ಮಿರ್ಜಾಬೀಬಿಯು ತನ್ನ ಮನಸ್ಸಿನಲ್ಲಿ ಗೊತ್ತು ಮಾಡಿಕೊಂಡಳು.

ಝುಲಫೀಕರನು ಕಾಸೀಮನೆಡೆಗೆ ಬಂದಾಗೆಲ್ಲ ಅಮೀನೆಯ ಸಂಬಂಧದ ಒಂದಿಲ್ಲೊಂದು ಸಂಗತಿಯನ್ನು ಅವನಿಗೆ ಹೇಳಿಯೇ ಹೇಳುತ್ತಿದ್ದನು. ಯಾಕಂದರೆ, ಅವಳ ಸಂಗತಿಯನ್ನು ತಿಳಿಯಲಿಕ್ಕೆ ಕಾಸೀಮನು ಆತುರನಾಗಿರುತ್ತಿದ್ದನೆಂಬದನ್ನು ಆ ಅಡುಗಲಜ್ಜೆಯು ಎಂದೋ ತಿಳಿದುಕೊಂಡಿದ್ದನು ಒಂದು ದಿನ ಆ ಝುಲಫೀಕರನು ಕಾಸೀಮನಿಗೆ:—ನನ್ನ ತಂಗಿಯಾದ ಮಿರ್ಜಾಬೀಬಿಯು ನಿಮ್ಮನ್ನು ಕಾಣಬೇಕೆಂದಿದ್ದಾಳೆ. ಆಕೆಯು ಯಾವಾಗ ಬಂದರೆ, ಅವಳಿಗೆ ನಿಮ್ಮ ಭೆಟ್ಟಿಯಾದೀತು? ಎಂದು ಪ್ರಶ್ನೆ ಮಾಡಿದನು.

ಆ ಭೆಟ್ಟಿಯು ಯೋಗವು ಬಹು ಗುಪ್ತವಾಗಿಯೇ ಆಗಬೇಕಾಗಿತ್ತು; ಯಾಕಂದರೆ, ಅಮೀನೆಯು ದಾಸಿಯು ಕಾಸೀಮುನ ಭೆಟ್ಟಿಗೆ ಬರುವ ಕಾರಣವೇನೆಂಬ ಸಂಗತಿಯ ಚರ್ಚೆಯು ನಾಲ್ಕು ಮಂದಿಯಲ್ಲಿ ನಡೆದರೆ, ಅದರಿಂದ ಕಾಸೀಮುನಿಗೂ, ಅಮೀನೆ-ಅಬ್ದುಲ್‌ರಹಿಮಾನಖಾನರಿಗೂ ಕೂಡಿಯೇ ಅಪಮಾನವುಂಟಾಗುವಂತಿತ್ತು; ಆದರೆ ಹಾಗೆ ಯಾವ ಗದ್ದಲವೂ ಆಗದಂತೆ ಒಂದು ದಿನ ಮೀರನಳು ಕಾಸೀಮುನಿಗೆ ಭೇಟಿಯಾದಳು. ಆ ಮೊದಲನೆಯ ಭೇಟಿಯಲ್ಲಿ ವಿಶೇಷ ಮಾತು-ಕಥೆಗಳಾವವೂ ನಡೆಯಲಿಲ್ಲ; ಹಾಗೆಯೇ ಮುಂದೆ ಆರೇಳು ಸಾರೆಯ ಭೇಟಿಗಳ ನಂತರ ಒಂದು ದಿನ ಮೀರನಳು ಗಟ್ಟಿ ಧೈರ್ಯ ಮಾಡಿ:—ಅಂದು ಆ ಮದವೇರಿದ ಆನೆಗೆ ಅಂಜಿ ಅಮೀನೆಯು ನಿಶ್ಚೇಷ್ಟಿತಳಾಗಿ ಬಿದ್ದಾಗ ನೀವು ಅಮೀನೆಯ ಕಿವಿಯಲ್ಲಿ ಯಾವ ಪ್ರೇಮದ ಮಾತನ್ನು ನುಡಿದಿರೋ, ಅದರ ಬಗ್ಗೆ ನಿಮ್ಮನ್ನು ಕೇಳುವ ಸಲುವಾಗಿಯೇ ಅವಳಿಂದ ಕಳಿಸಲ್ಪಟ್ಟವಳಾಗಿ ಬಂದಿರುತ್ತೇನೆ, ಎಂದು ಕಾಸೀಮುನಿಗೆ ಹೇಳಿದಳು; ಆದರೆ ಕಾಸೀಮುನು ಅಂದು ಅವಳಿಗಾವ ಉತ್ತರವನ್ನೂ ಕೊಡದೆ, ಮುಗುಳುನಗೆ ನಕ್ಕು ಸುಮ್ಮನಾಗಿ ಬಿಟ್ಟನು.

ಎಷ್ಟೋ ತಿಂಗಳುಗಳು ಕಳೆದ ನಂತರ, ಇನ್ನು ಸುಮ್ಮನೆ ಕೂಡುವದು ಸರಿಯಲ್ಲವೆಂದು ತಿಳಿದು ಟೀಪುವು ಆ ಕೋಟೆಯನ್ನು ನಾಲ್ಕೂ ಕಡೆಯಿಂದ ಮುತ್ತಬೇಕೆಂದು ತನ್ನ ಜನರಿಗೆ ಹುಕುಮು ಮಾಡಿದನು. ಅಲ್ಲದೆ ಅಂದೇ ರಾತ್ರಿ ತಾನು ಸ್ವತಃ ಕೆಲ ದಂಡನ್ನು ತಕ್ಕೊಂಡು, ಯಾವ ಕಡೆಯಿಂದ ಏರಿ ಹೋದರೆ ಆ ದುರ್ಗವು ಹಸ್ತಗತವಾಗಬಹುದೆಂಬದನ್ನು ಕಣ್ಣುಕಟ್ಟಿ ನೋಡಿ ಬರುವ ಸಲುವಾಗಿ ಗುಪ್ತವಾಗಿ ಹೊರಟನು. ಕಾಸೀಮುನು ಇತ್ತೀಚೆಗೆ ಸುಲ್ತಾನನ ಅಂಗರಕ್ಷಕನೂ ದಂಡಿನ ಜಮಾದಾರನೂ ಆದ್ದರಿಂದ, ಆತನೂ ಅಂದು ಸುಲ್ತಾನನೊಡನೆ ಸಾಗಿದ್ದನು. ತ್ರಾವಣಕೋರದ ದುರ್ಗವು

ಬಹು ವಿಶಾಲವಾದದ್ದಿತ್ತು. ಇವರು ಗುಪ್ತವಾಗಿ ಹೊರಟಿರಲು, ಕಲ್ಲು-ಮುಳ್ಳಿನ ದಾರಿಯಿಂದಲೇ ಹೋಗಬೇಕಾಗಿತ್ತಾದ್ದರಿಂದ, ಇವರಿಗೆ ಕುಸ ತೊಂದರೆಯಾಯಿತು. ಕಡೆಗೆ ಕಾಸೀಮನು ಯಾವ ಸ್ಥಳದಲ್ಲಿ ಏರಿ ಹೋದರೆ ದುರ್ಗವು ತೀವ್ರವೇ ಹಸ್ತಗತವಾಗಬಹುದಾಗಿತ್ತೋ, ಆ ಸ್ಥಳಕ್ಕೆ ಸುಲ್ತಾನನನ್ನು ಕರೆದೊಯ್ದು ಅವನಿಗೆ ಅದನ್ನು ತೋರಿಸಿದನು ಸುಲ್ತಾನನಿಗೆ ಆ ಇಕ್ಕಟ್ಟಾದ ಸ್ಥಳವನ್ನೇರಿ ಹೋಗಲು ಮಾರ್ಗವೇ ಕಾಣಿಸದಾಯಿತು ಆಗ ಆತನು:—ಕಾಸೀಮಾ, ಇದೇ ಆ ಸ್ಥಳವೆಂಬ ವಿಷಯುವಾಗಿ ನಿನ್ನ ತಪ್ಪು ತಿಳವಳಿಕೆಯಾಗಿಲ್ಲವಷ್ಟೇ? ನೋಡು, ತಪ್ಪಿ ಬೇರೆ ಕಡೆಗೆ ಒಯ್ದರೆ, ಟೀಪೂಸುಲ್ತಾನನ ಸಂಗತಿಯಿದೆಂಬದನ್ನು ಚೆನ್ನಾಗಿ ಮನಸ್ಸಿನಲ್ಲಿಟ್ಟುಕೋ, ಎಂದು ಗದ್ದರಿಸಲು, "ಸುಲ್ತಾನಸಾಹೇಬ, ಇದೇ ಆ ಸ್ಥಳವು ಈ ಬಗ್ಗೆ ಕೊಂಚವೂ ಅನುಮಾನವಿಲ್ಲ; ಆದರೆ ಈ ಇಕ್ಕಟ್ಟಿನ ಸ್ಥಳದಿಂದ ತಮ್ಮ ಎಲ್ಲ ಸೈನ್ಯವೂ ಒಮ್ಮೆಲೆ ಮೇಲಕ್ಕೆ ಹೋಗಲಾರದು ಮೊದಲು ನನ್ನೊಡನೆ ಹತ್ತಿಪ್ಪತ್ತು ಜನರನ್ನು ಮುಂದೆ ಕಳಿಸಿರಿ. ಯಾಕಂದರೆ ಅಲ್ಲಿ ಒಳಮಗ್ಗಲು ಕಾವಲುಗಾರರಾರಾದರೂ ಇರುವರೇನೆಂಬದನ್ನು ನಾವು ಪರೀಕ್ಷಿಸುತ್ತೇವೆ. ಆ ಮೇಲೆ ತಾವು ಒಳಗೆ ಬರುವಿರಂತೆ, ಎಂದಂದು, ಕಾಸೀಮನು ಮುಂದೆ ಸಾಗಲು, "ಕಾಸೀಮಾ, ಹಾಗೇ ಆಗಲಿ; ಆದರೆ ನಾನೂ ನಿನ್ನೊಡನೆ ಬರುತ್ತೇನೆ" ಎಂದಂದು, ಜನರು ಬೇಡ-ಬೇಡವೆಂದು ದುಂಬಾಲ ಬಿದ್ದು ಹೇಳುತ್ತಿದ್ದರೂ, ಸುಲ್ತಾನನು ಕಾಸೀಮನ ಹಿಂದಿಂದೆ ನಡೆದನು.

ಅವರೆಲ್ಲರೂ ಯಾವ ಕಡೆಯಿಂದ ಆ ಕೋಟೆಯ ಬಹಿರ್ಭಾಗವನ್ನು ಪ್ರವೇಶಿಸಿದರೋ, ಆ ಕಡೆಗೆ ಯಾವ ಬಗೆಯ ಬಂದೋಬಸ್ತು ಇರಲಿಲ್ಲ. ಹೀಗಾಗಲಿಕ್ಕೆ ಕಾರಣವೇನಂದರೆ, ಇವರು ಅಂದು ಯಾವ ಮಾರ್ಗದಿಂದ ಹೊರಟಿದ್ದರೋ, ಅದು ಇಕ್ಕಟ್ಟಿನದೂ, ಮುಳ್ಳುಗಳಿ

ಯಿಂದ ತೀರ ಮುಚ್ಚಿದ್ದೂ ಆಗಿತ್ತು. ಟೀಪುವಿನ ದಂಡೆಲ್ಲ ಕೋಟೆಯ ಮುಖ್ಯ ಬಾಗಿಲದ ಕಡೆಗೇ ತಳವೂರಿದ್ದರಿಂದ, ಆ ಕಡೆಗೇ ಎಲ್ಲ ಬಗೆಯಿಂದ ಬಂದೋಬಸ್ತು ಮಾಡಲ್ಪಟ್ಟಿತ್ತು. ಆದರಿಂದ ಆ ಇಕ್ಕಟ್ಟಿನ ಭಾಗದಿಂದ ಇವರು ನಿರ್ಧಾಸ್ತರಾಗಿ ಹೊರಟರು. ಅವರು ಕೋಟೆಯ ಹೊರಭಾಗಕ್ಕೆ ತಲುಪಿದರು. ಅಲ್ಲಿಯೂ ಯಾರೂ ಇರಲಿಲ್ಲ. ಆಗ ಸುಲ್ತಾನನು ಅಂಥ ನಿರ್ಧಾಸ್ತಸ್ಥಳವನ್ನು ಶೋಧಿಸಿದ್ದಕ್ಕಾಗಿ ಕಾಸೀಮನನ್ನು ಹೊಗಳಿದನು. ತದನಂತರ ಆ ಆತ್ಮಸ್ತುತಿಪ್ರಿಯನು ತನ್ನಷ್ಟಕ್ಕೆ ತಾನೇ ಗಟ್ಟ-ಗಟ್ಟಿಯಾಗಿ ಹೊಗಳಿಕೊಳ್ಳಲಾರಂಭಿಸಿದನು.

ಸುಲ್ತಾನನು ಎಷ್ಟೋ ಹೊತ್ತು ಬಡಬಡಿಸಿದರೂ ಅಲ್ಲಿ ಯಾರೂ ಸುಳಿಯಲಿಲ್ಲ. ಕೆಲ ನಿಮಿಷಗಳ ನಂತರ ಯಾವ ಕಡೆಯಿಂದಲೋ ಸಿಳ್ಳು ಹಾಕುತ್ತಿರುವಂತೆ ಕೇಳಬರತೊಡಗಿತು. ಅಷ್ಟರಲ್ಲಿ ಒಂದೆರಡು ಗುಂಡುಗಳ ಸಪ್ಪಳವೂ ಕೇಳಹತ್ತಿತು. ಆಗ ಸುಲ್ತಾನನು:—ಎಲೈ ಕಾಸೀಮಾ, ಕಾವಲುಗಾರರು ಎಚ್ಚತ್ತಿರುವರು ಕಂಡೆಯಾ? ಎನ್ನಲು, ಕಾಸೀಮನು ಸುಲ್ತಾನನನ್ನು ಮುಂದೆ ಹೋಗಗೊಡದೆ:—ಸರಕಾರ, ತಾವು ಮುಂದೆ ಹೋಗಬಾರದು ಇಲ್ಲಿಂದಲೇ ಹಿಂದಿರುಗಬೇಕು ತಮ್ಮ ಜೀವವನ್ನು ಸಂಕಟದಲ್ಲಿ ಕೆಡವಬೇಡಿರಿ. ನಾನೊಬ್ಬನೇ ಈ ಸೈನಿಕರೊಡನೆ ಹೋಗಿ ಅವರಿಗೆ ಒಂದು ಕೈ ತೋರಿಸುತ್ತೇನೆ, ಎಂದು ಎಷ್ಟೋ ಹೊತ್ತಿನವರೆಗೆ ಹೇಳಿದ ಮೇಲೆ ಸುಲ್ತಾನನು ಹಿಂದಿರುಗಿದನು.

ಬಳಿಕ ಕಾಸೀಮನು ತನ್ನ ಸೈನಿಕರೊಡನೆ ಆ ದುರ್ಗದ ಕೊತ್ತಳವನ್ನೇರಿ ಕಾದಬೇಕೆಂದು ಹವಣಿಸಿದನು. ಅಷ್ಟರಲ್ಲಿ ಕೋಟೆಯೊಳಗಿನ ಬೇರೊಂದು ದಂಡು ಅಲ್ಲಿಗೆ ಬಂತು. ಆ ದಂಡಿನ ಗುಂಡುಗಳು ಕೋಟೆಯ ಗೋಡೆಗಳನ್ನೇರುವ ಕಾಸೀಮನ ದಂಡಾಳುಗಳಿಗೆ ತಾಕ

ಹತ್ತಲು, ಅವರು ಪಟಪಟನೆ ಕೆಳಗೆ ಕಂದಕದಲ್ಲಿ ಬಿದ್ದು ಸಾಯು ಹತ್ತಿದರು. ಬರಬರುತ್ತ ಒಳಗಿನವರ ಗುಂಡುಗಳ ವರ್ಷಣವು ಹೆಚ್ಚಾಯಿತು. ಇಷ್ಟರಲ್ಲಿ ಸುಲ್ತಾನನು ತನ್ನ ಮುಖ್ಯಸ್ಥಳಕ್ಕೆ ತಲುಪಿದ್ದನು. ಗುಂಡು ಯಾವ ಕಡೆಯಿಂದ ಬಂದು ಯಾರ ಮೇಲೆ ಬಿದ್ದೀತೆಂಬದರ ನಿಯಮವುಳಿದಿರಲಿಲ್ಲ. ಆಗ ಕಾಸೀಮನು ತನ್ನ ಜನರನ್ನು ಕೋಟೆ ಯೇರುವದನ್ನು ಬಿಡಿಸಿದನು; ಹಾಗು ಕಂದಕದಲ್ಲಿ ಜಿಗಿದು ಈಚೆಯು ದಂಡೆಗೆ ಬರಲಿಕ್ಕೆ ತಿಳಿಸಿದನು. ಜೀವದಿಂದ ಉಳಿದವರೆಲ್ಲರೂ ಕಂದಕ ದಲ್ಲಿ ಹಾರಿದರು; ಆದರೆ ಆ ಕಂದಕದ ಈಚೆಯು ದಂಡೆಗೂ ಮೂರು ನಾಲ್ಕು ಆಳು ಎತ್ತರವಾದ ನಿಡಿದಾದ ಗೋಡೆಯಿದ್ದದರಿಂದ, ಅದನ್ನು ಹತ್ತಿ ಬರಲಿಕ್ಕೆ ಅವರಿಗೆ ಸಾಧಿಸದಾಯಿತು. ಆಗ ಕಾಸೀಮನು ಒಬ್ಬನನ್ನು ಕೆಳಗೆ ನಿಲ್ಲಿಸಿ, ಅವನ ಹೆಗಲ ಮೇಲೆ ಮತ್ತೊಬ್ಬನನ್ನು ಹತ್ತಿಸಿದನು. ಅವರ ನೆರವಿನಿಂದ ಉಳಿದವರು ಹತ್ತಬೇಕೆಂದು ಆಜ್ಞೆ ಮಾಡಿದನು. ಅತ್ತ ಕೋಟೆಯೊಳಗಿನ ಜನರು ಗುಂಡು ಹಾರಿ ಸುತ್ತಲೇ ಇದ್ದರು. ಅವುಗಳಲ್ಲಿಯು ಹಲಕೆಲವು ಗುಂಡುಗಳು ಈ ಜನರ ಸಮೀಪಕ್ಕೇ ಬಂದು ಬೀಳುತ್ತಿದ್ದವು. ಅವು ಒಬ್ಬಿಬ್ಬರಿಗೆ ತಾಕಿ ದ್ದರಿಂದ ಅವರು ಗಾಯುಪಟ್ಟು ಕಂದಕದಲ್ಲಿಯೇ ಉರುಳಾಡಹತ್ತಿದರು ಕಾಸೀಮನ ಸಂಗಡಿಗರಲ್ಲಿ ಜೀವದಿಂದಿದ್ದ ಎಲ್ಲ ಜನರೂ ಮೇಲೆ ಹತ್ತಿ ದಾರಿ ಸಿಕ್ಕತ್ತ ಓಡತೊಡಗಿದರು. ಕಾಸೀಮನೂ ಮೇಲೆ ಹತ್ತಿ ಒತ್ತಟ್ಟಿಗೆ ನಿಂತು, ಯಾವ ಭಾಗದಲ್ಲಿ ಯಾವ ಬಗೆಯಿಂದ ಕಾದಿದರೆ ಈ ದುರ್ಗವು ತಮ್ಮ ಕೈ ಸೇರಬಹುದೆಂದು ಆಲೋಚಿಸು ತ್ತಿರಲು, ಎಡಭಾಗದಿಂದೊಂದು ಬಂದೂಕಿನ ಗುಂಡು ಬಂದು ಅವನ ಎಡ ಹೆಗಲಲ್ಲಿ ನಟ್ಟಿತು. ಆದರ ವೇದನೆಗಳು ಅಸಹ್ಯವಾದವು. ಆ ಕೂಡಲೆ ಬವಳಿ ಬರಲು, ಅವನು ನಿಶ್ಚೇಷ್ಟಿತನಾಗಿ ನೆಲಕ್ಕೆ ಬಿದ್ದನು!

ಕಾಸೀಮನ ದಂಡಿನ ಅತ್ಯವಸ್ಥೆಯು ಸುದ್ದಿಯು ಕೆಲ ಹೊತ್ತಿ

ನಲ್ಲಿಯೇ ಟೀಪುವಿಗೆ ತಿಳಿಯಿತು. ಅದನ್ನು ಕೇಳಿ ಎಲ್ಲರಿಗೂ ವಿಸ್ಮ
ಯವಾಯಿತು. ಕಾಸೀಮನು ಆ ಭಾಗದಲ್ಲಿ ವಿಜಯ ಪಡೆಯದ
ಹೊರತು ಹಿಂದಿರುಗುವದಿಲ್ಲೆಂದೇ ಅವರ ಖಾತ್ರಿಯಿತ್ತು. ಅಂತೇ
ಅವರೆಲ್ಲರೂ ನಿಷ್ಕಾಳಜಿಯಿಂದ ಕುಳಿತಿದ್ದರು. ಕಾಸೀಮನ ದಂಡಿನ
ಜನರು ಓಡಿ ಬಂದ ಸುದ್ದಿಯು ಹತ್ತಿದ ಕೂಡಲೆ ಸುಲ್ತಾನನು
ಆಗಿಂದಾಗಲೇ ತನ್ನ ಮಂತ್ರಿ-ಮುತ್ಸದ್ದಿಗಳ ದರಬಾರ ಕೂಡಿ[illegible]
ಆ ದರಬಾರದಲ್ಲಿ ಮೊದಲು ಯಾರು ಮಾತಾಡಬೇಕೆಂಬುದು [illegible]ತ್ತಿತು.
ರಿಗೂ ತಿಳಿಯದಾಯಿತು. ಯಾಕಂದರೆ ಆಗ ಸುಲ್ತಾನನು ಸಿಟ್ಟಿ
ನಿಂದ ತಪ್ತನಾಗಿದ್ದನು. ಅವನೆದುರಿಗೆ ಬಾಯಿ ತೆರೆಯಲಿಕ್ಕೆ ಒಬ್ಬ
ನಿಗೂ ಧೈರ್ಯ ಸಾಲಲೊಲ್ಲದು. ಕಡೆಗೆ ಸದಾ 'ರೀ' ಎಳೆಯುವ
ಒಬ್ಬ ಮಹಾಮೂರ್ಖ ಗೃಹಸ್ಥನು:—ಸರಕಾರಕ್ಕೆ ಬಲು ಸಿಟ್ಟು
ಬಂದಂತೆ ಕಾಣುತ್ತದೆ. ಈ ಬಡ ಸೇವಕರದೇನಾದರೂ ತಪ್ಪಾಗಿ
ದ್ದರೆ ಕ್ಷಮಿಸಿ, ನಮ್ಮನ್ನು ಯೋಗ್ಯ ಕೆಲಸಕ್ಕೆ ತೊಡಗಿಸಬೇಕು,
ಎಂದು ವಿನಯದಿಂದ ನುಡಿದನು ಮಾತ್ರ. ಕೂಡಲೆ ಕೆರಳಿದ ಹೆಣ್ಣು
ಹುಲಿಯಂತೆ ಸುಲ್ತಾನನು ಗರ್ಜಿಸಿ:—ಭಲೆ-ಭಲೆ! ಎಂಥ ಪೌರುಷ
ವಂತನಿವನು? ನಮ್ಮ ಪ್ರತಿಯೊಂದು ಮಾತಿಗೆ "ಹೌದ್ದೇವರೂ"
ಎಂದೆನ್ನುವ ನಿನ್ನಂಥ ಹರಾಮಖೋರರಿಂದಲೇ ನಮಗಿಂದು ಈ
ದೆಸೆಯು ಪ್ರಾಪ್ತವಾಗಿರುತ್ತದೆ. ನೀಚಾ, ಇಷ್ಟು ದಿನ ಇದೇ ಕಡೆ
ಯಿಂದ ಕೋಟೆಯನ್ನು ಮುತ್ತಬೇಕೆಂದು ನೀವೆಲ್ಲರೂ ಹೇಳಿದ್ದ
ರಿಂದಲೇ ಇಂದು ನಮ್ಮ ಕಾಸೀಮನ ದಂಡು ಅಲ್ಲಿ ಆ ಅತ್ಯವಸ್ಥೆ
ಯನ್ನು ಹೊಂದಬೇಕಾಯಿತು. ಹೀಗಿದ್ದೂ ಈ ನಾಚಿಕೆಗೇಡಿಯು
'ಈ ಸೇವಕನಿಗೆ ಯೋಗ್ಯ ಮಾರ್ಗ ತೋರಿಸಬೇಕೆ'ಂದು ಈಗ ಅನ್ನು
ತ್ತಾನೆ. ಥೂ, ನಿನ ಮುಸುಡಿಗೆ ಸೆಗಣೀ ತಿಕ್ಕಲಿ............ ಎಲ್ಲೈ
ನಮ್ಮ ಆ ಕಾಸೀಮನು ಈಗೆಲ್ಲಿರುತ್ತಾನೆ; ಮತ್ತು ಆತನ ಸಂಗಡ

ಹೋಗಿದ್ದ ಲಾಲಖಾನನೆಲ್ಲಿರುತ್ತಾನೆ? ಎಂದು ಕೇಳಿದ ಕೂಡಲೆ ಲಾಲಖಾನನು ಮುಂದೆ ಬಂದು: "ಹಜರತ್, ಕಾಸೀಮುಅಲ್ಲಿಯನ್ನು ನಾವು ಅಲ್ಲಿ ಬಹಳ ಶೋಧಿಸಿದೆವು. ಎಲ್ಲಿಯೂ ಅವನ ಪತ್ತೆಯೇ ಹತ್ತಲಿಲ್ಲ. ಆತನು ಇತ್ತ ಕಡೆಗೇ ಬಂದಿರಬಹುದೆಂದು ತಿಳಿದು ಇಲ್ಲಿಗೆ ಬಂದು ನೋಡಿದೆವು. ಇಲ್ಲಿಲ್ಲಿಯೂ ಕಾಣಿಸಲೊಲ್ಲನು" ಯೇರ ನುಡಿದನು ಮಾತ್ರ. ಕೂಡಲೆ ಸುಲ್ತಾನನ ಕ್ರೋಧವು ದಂಡ್ಮಡಿಯಾಯಿತು. "ಏನಂದಿ? ಆತನೆಲ್ಲಿಯೂ ಕಾಣಲಿಲ್ಲವೆಂದೇ? ಹರಾಮಖೋರಾ, ಹೀಗೆಂದು ನುಡಿಯಲಿಕ್ಕೆ ನಿನಗೆ ನಾಚಿಕೆ ಬರಲಿಲ್ಲವೆ? ಹೋಗು, ಈಗಿಂದೀಗಲೇ ಹೋಗಿ ಆತನ ಪತ್ತೆ ಹಚ್ಚಿ, ನನ್ನೆಡೆಗೆ ಕರಕೊಂಡು ಬಾ ಇಷ್ಟೇ ಅಲ್ಲ, ಆತನು ಸ್ವರ್ಗಕ್ಕೆ ಹೋಗಿದ್ದರೂ ನೀನು ಕರೆತರಲೇಬೇಕು; ಇಲ್ಲದಿದ್ದರೆ ನಿನ್ನ ಗತಿಯೇನಾದೀತೆಂಬದನ್ನು ನಾನು ಈಗಲೇ ಹೇಳಲಾರೆನು. ಹೊರಡು ಇಲ್ಲಿಂದ, ಮೋರೆ ನೋಡುತ್ತ ಮತ್ತೇಕೆ ಕುಳಿತೆ?" ಎಂದು ಹೆದರಿ ಲಾಲಖಾನನನ್ನು ಹೊರಹೊರಡಿಸಿದನು

ಅಷ್ಟರಲ್ಲಿ ವೃದ್ಧ ಅಬ್ದುಲ್‌ರಹಿಮಾನಖಾನನು ಮುಂದೆ ಬಂದು ವಿನಯದಿಂದ:—ಹಜರತ್, ಈ ಸೇವಕನಿಗೆ ಅಜ್ಞೆ ದೊರೆತರೆ ಈತನೂ ಲಾಲಖಾನನೊಡನೆ ಹೋಗಿ ಕಾಸೀಮನ ಪತ್ತೆ ಹಚ್ಚಿಕೊಂಡು ಬರಬೇಕೆಂದಿದ್ದಾನೆ. ಈಗ ಆ ಹುಡುಗನ ಗತಿ ಏನಾ............" ಖಾನನ ಬಾಯಿಂದ ಮುಂದೆ ಶಬ್ದಗಳೇ ಹೊರಡದಾದವು. ಅವನ ಕಣ್ಣುಗಳಿಂದ ಪಟಪಟನೆ ನೀರುದುರಹತ್ತಿದವು. ಖಾನನ ಆ ಕರುಣಾಜನ್ಯಸ್ಥಿತಿಯನ್ನು ನೋಡಿದ ಕೂಡಲೆ ಸುಲ್ತಾನನ ಸಿಟ್ಟು ಇಳಿಯಿತು. ಅವನು ಖಾನನಿಗೂ ಹೋಗಲಿಕ್ಕೆ ತಿಳಿಸಿದನು.

ಇತ್ತ ಮೊದಲಿನ ರಾತ್ರಿ ಗುಂಡು ಬಡಿಸಿಕೊಂಡು ನಿಶ್ಚೇಷ್ಟಿತನಾಗಿ ಬಿದ್ದಿದ್ದ ಕಾಸೀಮನಿಗೆ, ಮರುದಿನ ಸಂಜೆಯ ಮುಂದೆ ಸ್ಮೃತಿ

ಯುಂಟಾಯಿತು. ಅವನು ಕಣ್ಣು ತೆರೆದು ಅತ್ತಿತ್ತ ನೋಡಿದಾಗ, ಅಲ್ಲಿ ತನ್ನವರಾರೂ ಆತನ ಕಣ್ಣಿಗೆ ಕಾಣಿಸಲಿಲ್ಲ. ಬಹು ದೂರದಲ್ಲಿ ಸತ್ತು ಬಿದ್ದಿದ್ದ ತನ್ನ ಕಡೆಯ ಜನರ ಶಸ್ತ್ರಾಸ್ತ್ರಗಳನ್ನೂ, ಬಟ್ಟೆ-ಬರಿ ಗಳನ್ನೂ ವೈರಿಗಳ ಕಡೆಯ ಪೆಂಡಾರಿಗಳು ಸುಲಿದುಕೊಳ್ಳುತ್ತಿರುವದು ಮಾತ್ರ ಆತನ ನಜರಿಗೆ ಬಿತ್ತು. ಆತನ ದೇಹಕ್ಕೆ ಹಗಲೆಲ್ಲ ಬಿಸಿಲು ಬಡಿದುದರಿಂದಲೂ, ಗುಂಡಿನ ನೋವಿನಿಂದಲೂ ಆತನಿಗೆ ಬಹಳ ನೀರಡಿಕೆಯಾಗಿತ್ತು ಅದರಿಂದ ಅವನಿಗೆ ಬಲು ಸಂಕಟವಾಗಹತ್ತಿತು. ದೂರದಲ್ಲಿದ್ದ ಆ ವೈರಿಗಳಾದರೂ ಬಂದು ತನಗೆ ನೀರು ಕೊಡಲೆಂದು ಆತನು:—ನೀರು-ನೀರು! ಎಲೈ ಯಾರಾದರೂ ಬಂದು ನನಗೆ ನೀರು ಕೊಡಿರಿ. ನೀರು ಕುಡಿಯಗೊಡದೆ ನನ್ನನ್ನು ಕೊಲ್ಲಬೇಡಿರಿ. ನನಗೆ ನೀರು ಕೊಡದಿದ್ದರೆ ನಿಮಗೆ ನಿಮ್ಮ ಮಕ್ಕಳು-ಮರಿಗಳ, ತಾಯಿ-ತಂದೆಗಳ, ಕುಲದೇವರ ಆಣೆಯಿರುತ್ತದೆ. ಬೇಗನೆ ನನಗೆ ನೀರು ತಂದು ಕುಡಿಸಿರಿ, ಎಂದು ತನ್ನ ಶಕ್ತಿಮೀರಿ ಕೂಗಿಕೊಂಡನು.

ಆದರೆ ಅವನ ದನಿಯು ಅಶಕ್ತತೆಯ ಮೂಲಕ ಅಂದು ತೀರಬಿದ್ದ ದ್ದರಿಂದ, ಅವನ ಶಬ್ದಗಳು ಅಷ್ಟು ದೂರದಲ್ಲಿದ್ದ ಆ ಪೆಂಡಾರಿಗಳಿಗೆ ಕೇಳಿಸಿದವೋ-ಇಲ್ಲವೋ ಯಾರು ಹೇಳಬೇಕು? ಒಂದುವೇಳೆ ಕೇಳಿ ಸಿದವೆಂದು ತಿಳಿದರೂ ಆ ಸುಲಿಗೆಗಾರರಲ್ಲಿ ಅಷ್ಟು ದಯೆಯು ಹೇಗೆ ಹುಟ್ಟಬೇಕು? ಆತನ ದನಿಯು ಅವರಿಗೆ ಕೇಳಿಸಿ ಅವರು ಅವನೆಡೆಗೆ ಬಂದಿದ್ದರೆ, ಅವರು ಅವನನ್ನು ಆಗಿಂದಾಗಲೆ ಕೊಲ್ಲುತ್ತಿದ್ದರು; ಇಲ್ಲವೆ ಸೆರೆಯಾಳೆಂದು ಒಯ್ದು, ತಮ್ಮ ಅರಸನ ತುರಂಗದಲ್ಲಿ ಹಾಕು ತ್ತಿದ್ದರು; ಆದರೆ ಆಗ ಅದಾವದೂ ಸಂಭವಿಸಲಿಲ್ಲ. ತನ್ನ ಒದರು ವಿಕೆಯಿಂದ ದಾದು ಹತ್ತದಾಗಲು, ಕಾಸೀಮನು ತಾನೇ ಎದ್ದು ಹೋಗಿ ಇದ್ದಲ್ಲಿಂದ ನೀರು ತಂದು ಕುಡಿಯಬೇಕೆಂದು ಮನಸ್ಸಿನಲ್ಲಿ ಆಲೋಚಿಸಿ ಏಳಹೋದನು; ಆದರೆ ಅಷ್ಟು ಅಲ್ಪ ಶ್ರಮದಿಂದಲೇ

ಆತನಿಗೆ ಪುನಃ ಬವಳಿ ಬರಲು, ಅವನು ಮತ್ತೆ ಸ್ಮೃತಿ ತಪ್ಪಿ ಬಿದ್ದನು!

ತುಸ ಹೊತ್ತಿನಲ್ಲಿ ಮುಂಜಾವಿನ ತಂಗಾಳಿಯು ಅವನ ಮೈಗೆ ಸೋಂಕಲು, ಅವನಿಗೆ ಪುನಃ ಎಚ್ಚರಿಕೆಯುಂಟಾಯಿತು. ಆಗಲೂ ಅವನಿಗೆ ನೀರಡಿಕೆಯಿಂದ ಸಂಕಟವಾಗುತ್ತಿದ್ದರೂ ಅವನು ಬೀಳುತ್ತ-ಏಳುತ್ತ ಹೋಗಿ ಒಂದು ಗಿಡದ ಕೆಳಗೆ ಕುಳಿತುಕೊಂಡನು ಇಷ್ಟರಲ್ಲಿ ಸಂಧ್ಯಾಕಾಲವಡಗಿ ಸುತ್ತಲೂ ಕತ್ತಲುಗವಿಯಿತು. ಸಮೀಪದಲ್ಲೇ ಬಿದ್ದಿದ್ದ ಹೆಣಗಳನ್ನು ತಿನ್ನುವ ನರಿ-ನಾಯಿಗಳು ಸಪರಿವಾರದೊಡನೆ ಹರ್ಷಭರದಿಂದ-ಅಬ್ಬರದಿಂದ ಕೂಗುತ್ತ ಬರಲಾರಂಭಿಸಿದವು. ಆ ಮಾಂಸಭಕ್ಷಕ ಮೃಗಗಳು ಆ ಹೆಣಗಳೊಡನೆ ತನ್ನನ್ನೂ ಎಲ್ಲಿ ತಿನ್ನಬರುವವೋ ಎಂಬ ಹೆದರಿಕೆಯುಂಟಾಗಲು, ಅವನು ಆ ಮರವನ್ನೇರ ಹೋದನು; ಆದರೆ ತೀರ ಅಶಕ್ತದೆಸೆಯನ್ನು ಹೊಂದಿದ್ದ ಕಾಸೀಮನಿಗೆ ಅದು ಶಕ್ಯವಾಗಲಿಲ್ಲ. ಬರಬರುತ್ತ ತಂಪು ಹವೆಯ ಮೂಲಕ ಆತನಿಗೆ ಹೆಚ್ಚಾಗಿ ಹುಷಾರಿಯೆನಿಸಿದರೂ ಅಶನಾಭಾವದಿಂದಲೂ, ಬಾಯಾರಿಕೆಯಿಂದಲೂ ಅವನ ಅಂತರಂಗದ ದಾಹವು ಹೆಚ್ಚಾಯಿತು ತಾನು ಹೀಗೆಯೇ ಅನ್ನ-ನೀರುಗಳಿಲ್ಲದೆ ಸಾಯುವದೇ ಖಂಡಿತವೆಂದು ನಿರ್ಧರಿಸಿ, ಈ ಸಂಕಟದಿಂದ ತನ್ನನ್ನು ಪಾರು ಮಾಡುವ ಸಲುವಾಗಿ ಆತನು ಪೈಗಂಬರನನ್ನು ಅನನ್ಯಭಾವದಿಂದ ಪ್ರಾರ್ಥಿಸತೊಡಗಿದನು!

ಕಾಸೀಮನ ಆ ಕೂಗಿಗೆ ಎಚ್ಚತ್ತು, ದೇವರೇ ಆತನ ಸಹಾಯಕ್ಕಾಗಿ ತನ್ನ ದೂತರನ್ನು ಕಳಿಸಿದನೋ-ಏನೋ ಎಂಬಂತೆ, ಕಾಸೀಮನಿಂದ ತುಸ ಅಂತರದ ಮೇಲೆ ಯಾರೋ ಮಾತಾಡುತ್ತಿರುವಂತೆ ಆತನಿಗೆ ಭಾಸವಾಯಿತು. ಅಲ್ಪಾವಕಾಶದಲ್ಲಿಯೇ ಅವರ ಸಂಭಾಷಣವು ತೀರ ಸಮೀಪಿಸಿದ್ದಲ್ಲದೆ, ಅವರೊಡನೆ ಇದ್ದ ಹಿಲಾಲಿನ ಬೆಳಕೂ ಕಾಣಿಸತೊಡಗಿತು; ಹಾಗು ಆ ಆಗಂತುಕರೊಡನೆ ಬರು

ತ್ತಿದ್ದ ಆನೆಗಳ ಕೊರಳೊಳಗಿನ ಕಿರಿಗಂಟೆಗಳ ಸಪ್ಪಳವೂ ಕೇಳಿಸಲಾ ರಂಭಿಸಿತು. ಅದರಿಂದ ಕಾಸೀಮನ ಮನಸ್ಸು ಮತ್ತೆ ಆಶೆ-ನಿರಾ ಶೆಗಳೆಂಬ ತೊಡಕಿನಲ್ಲಿ ಸಿಕ್ಕು ಅಲೆದಾಡಹತ್ತಿತು.

ನಮ್ಮ ಕಾಸೀಮ ಅಲ್ಲಿಯು ಇಲ್ಲಿಯೋ ಸಮೀಪದಲ್ಲೆಲ್ಲಾ ದರೂ ಬಿದ್ದುಕೊಂಡಿರಬಹುದು. ಅಗೋ ನೋಡಿರಿ; ಅಲ್ಲಿ ನಮ್ಮ ಜನರ ಹೆಣಗಳು ಬಿದ್ದಿವೆ. 'ಕಾಸೀಮಾ-ಕಾಸೀಮಾ'ಎಂದು ಒದರಿದ ಖಾನನ ದನಿಯು ಕಾಸೀಮನಿಗೆ ಕೇಳಿಸಿತು. ಆತನೂ ಗಟ್ಟಿಯಾಗಿ 'ಓ-ಓ' ಎಂದು ಉತ್ತರ ಕೊಟ್ಟನು. ಆದರೆ ಆತನ ದನಿಯು ಅಶಕ್ತ ತೆಯ ಮೂಲಕ ತೀರ ಬಿದ್ದಿತ್ತಾದ್ದರಿಂದ, ಅದು ಖಾನನಿಗೆ ಕೇಳಿಸ ಲಿಲ್ಲ. ಆದರಿಂದ ಆ ಜನರು ಅವನನ್ನು ಹುಡುಕುತ್ತ, ಆತನ ಹೆಸ ರುಗೊಂಡು ಒದರುತ್ತ ಅವನ ಹತ್ತಿರವೇ ಬಂದರು. ಆಗ ಅವನು ಅವರಿಗೆ ಕೂಗಿ ದನಿ ಕೊಡಬೇಕೆಂದು ಎದ್ದೇಳಲು ಪ್ರಯತ್ನಿಸಿದನು. ಆತನ ಆ ಚಲನವಲನವು ಹಿಲಾಲನ್ನು ಹಿಡಿದಿದ್ದ ಮನುಷ್ಯನಿಗೆ ಕಾಣಿಸಿತು. ಕೂಡಲೆ ಅವನು:—ಇಲ್ಲಿ ಯಾರೋ ಒಬ್ಬರು ಜೀವಂತ ಇದ್ದು, ಅಲ್ಲಾಡುತ್ತಿರುವಂತೆ ತೋರುತ್ತದಾದ್ದರಿಂದ, ಎಲ್ಲರೂ ಇತ್ತ ಬರಬೇಕು, ಎಂದು ಸೂಚಿಸಿದನು. ಆ ಕ್ಷಣವೇ ಎಲ್ಲರೂ ಕಾಸೀ ಮನ ಸುತ್ತಮುತ್ತು ನೆರೆದರು. ಆಗ ಕಾಸೀಮನಿಗುಂಟಾದ-ಹರ್ಷ ವನ್ನು ವರ್ಣಿಸಲಸದಳವು. ಅವನು ತನ್ನ ಒಂದು ಕೈಯನ್ನು ಮೇಲೆ ಎತ್ತಿ ತನ್ನ ಇರವನ್ನು ಅವರಿಗೆ ತಿಳಿಸಿದನು. ಅಷ್ಟರಲ್ಲಿ ಹಿಲಾಲಿನ ವನು ಅವನ ಮೋರೆಯ ಮೇಲೆ ಬೆಳಕು ಕೆಡವಲು, ಆತನೇ ಕಾಸೀ ಮನೆಂಬದು ಅವರೆಲ್ಲರಿಗೂ ಖಾತ್ರಿಯಾಯಿತು!

ಆಗ ಖಾನನು ಆತನ ಹತ್ತಿರ ಕುಳಿತು:— ಶುಕರಖುದಾ! ಅಲ್‌ಅಹಮ್ಮದಲ್ಲಿಲ್ಲಾ!! ಮಿತ್ರರೇ, ಈ ನಮ್ಮ ಕಾಸೀಮಅಲ್ಲಿಯು ಖುದಾನ ಕೃಪೆಯಿಂದ ಜೀವಂತನಿರುವನು ಪಾಪ, ಈತನು ಹ್ಯಾಗಾ

ಗಿರುವನೆಂಬದನ್ನು ನೋಡಿದಿರಾ? ಯಾ ಅಲ್ಲಾ! ಯಾ ಮೌಲಾಲಿ! ಈ ನಮ್ಮ ಕಾಸೀಮುನನ್ನು ಉಳಿಸಿದ್ದಕ್ಕಾಗಿ ದೇವರೇ, ನಿನ್ನ ಪ್ರೀತ್ಯ ರ್ಥವಾಗಿ ನೂರು ಜನ ಫಕೀರರಿಗೆ ಇಚ್ಛಾಭೋಜನ ಮಾಡಿಸುತ್ತೇನೆ. ಎಲೈ ಹುಡುಗಾ, ಕಾಸೀಮಾ; ತಮ್ಮಾ, ನೀನೀಗ ಮಾತನಾಡಬೇಡ. ಮಿತ್ರರೇ, ಆ ಮೇಣೆಯನ್ನು ಇತ್ತ ತನ್ನಿರಿ. ಈತನನ್ನು ಎತ್ತಿ ಅದ ರಲ್ಲಿ ಮೆಲ್ಲಗೆ ಮಲಗಿಸಿರಿ ಎಚ್ಚರಿಕೆ, ಬಹು ಸಾವಧಾನದಿಂದ ಎತ್ತಿರಿ, ಎನ್ನಲು, ಕಾಸೀಮುನು ಖಾನನ ಮೋರೆಯ ಕಡೆಗೆ ನೋಡಿ, ತನಗೆ ನೀರಡಿಕೆಯಾಗಿದೆಯೆಂದು ಸಂಜ್ಞೆ ಮಾಡಿ ತಿಳಿಸಿದನು. ಕೂಡಲೆ ಖಾನನು ತನ್ನೊಡನೆ ತಂದಿದ್ದ ಹಳ್ಳೀ ತಂಪಾದ ಸುಗಂಧಯುಕ್ತ ನೀರನ್ನು ಅವನಿಗೆ ಕುಡಿಸಿದನು

ಎರಡು-ಮೂರು ಲೋಟಾ ನೀರು ಕುಡಿದ ಮೇಲೆ ಕಾಸೀಮು ನಿಗೆ ಹುಷಾರಿಯೆನಿಸಿತು; ಆದರೆ ಆತನು ತೀರ ಅಶಕ್ತನಾದುದರಿಂದ ಅಂಥ ಮೃದುವಾದ ಹಾಸಿಗೆಯ ಮೇಣೆಯಲ್ಲಿ ಮಲಗಿಸಿಕೊಂಡು ಹೊಯ್ದರೂ ಆತನಿಗೆ ಕೆಲಮಟ್ಟಿಗೆ ತೊಂದರೆಯಾಗದೆ ಇರಲಿಲ್ಲ. ಆ ಮೇಣೆಯು ಛಾವಣಿಗೆ ಬಂದ ಕೂಡಲೆ ಖಾನನು ಅದನ್ನು ತನ್ನ ಸ್ವಂತ ಡೇರೆಗೆ ಹೊಯ್ದು, ಕಾಸೀಮುನನ್ನು ತನ್ನ ಪಲ್ಲಂಗದ ಮೇಲೆ ಮಲಗಿಸಿದನು; ಹಾಗು ಆತನ ಸೇವೆಗಾಗಿ ತನ್ನ ಹೆಂಡಂದಿರನ್ನೇ ನೇಮಿಸಿದನು. ಝುಲಫೀಕರನು ಪಾಕಶಾಸ್ತ್ರದಲ್ಲಿ ತಜ್ಞನಾಗಿದ್ದಂತೆ, ರೋಗಿಗಳ ಶುಶ್ರೂಷೆಯ ವಿದ್ಯೆಯೂ ಆತನಿಗೆ ಚನ್ನಾಗಿ ಅವಗತವಾ ಗಿದ್ದಿತು. ಅದರಿಂದ ಅವನೂ ಕಾಸೀಮುನ ಶುಶ್ರೂಷೆ ಮಾಡಹತ್ತಿ ದನು. ಬೆಳಗಾಗುತ್ತಲೆ ಕಾಸೀಮುನು ಜೀವ ಮಾತ್ರ ದೊರೆತ ವರ್ತಮಾನವು ಸುಲ್ತಾನನಿಗೆ ತಿಳಿಯಲು, ಅವನು ತನ್ನ ದರ್ಬಾರದ ನಿಷ್ಣಾತ ಹಕೀಮನನ್ನು ಕಾಸೀಮುನ ಔಷಧೋಪಚಾರಕ್ಕಾಗಿ ಕಳಿಸಿ ದನು; ಮತ್ತು ತುಸ ಹೊತ್ತಿನಲ್ಲಿಯೇ ತಾನು ಸ್ವತಃ ಖಾನನ

ಬಿಡಾರಕ್ಕೆ ಹೋಗಿ ಕಾಸೀಮನನ್ನು ಕಣ್ಮುಟ್ಟಿ ನೋಡಿದನು ಸುಲ್ತಾನನೇ ಬಂದು ಕಾಸೀಮನನ್ನು ನೋಡಿಯಾನೆಂಬ ಭರವಸೆಯು ಖಾನನಿಗೆ ಕೂಡ ಇರಲಿಲ್ಲ. ಅಂದಬಳಿಕ ಕಾಸೀಮನಿಗಾದರೂ ಆ ಭರವಸೆಯು ಹೇಗೆ ಇರಬೇಕು? ಆದರೆ ಹಾಗೆ ಆಕಸ್ಮಿಕವಾಗಿ ಸುಲ್ತಾನನು ಅಲ್ಲಿಗೆ ಹೋಗಲು, ಅವರೆಲ್ಲರಿಗೂ ಆನಂದವೂ ಉತ್ತೇಜನವೂ ಉಂಟಾಯಿತು.

ಇಷ್ಟರಲ್ಲಿ ದರ್ಬಾರದ ಹಕೀಮನು ಅಲ್ಲಿಗೆ ಬಂದು ಕಾಸೀಮನ ನಾಡಿ ಮುಂತಾದವುಗಳನ್ನು ನೋಡಿ ಪರೀಕ್ಷೆ ಮಾಡಿ ಸುಲ್ತಾನನಿಗೆ ಮೆಲ್ಲನೆ:—ಈತನು ಬದುಕುವ ಆಶೆಯಿಲ್ಲ; ಆದುದರಿಂದ ಇವನಿಗೆ ಹೆಚ್ಚು ಉಪಚರಿಸುವದರಿಂದ ಪ್ರಯೋಜನವಿಲ್ಲ, ಎಂದು ಅಂದನು. ಅದನ್ನು ಕೇಳಿದವನೇ ಸುಲ್ತಾನನು ಸಿಂಹನಂತೆ ಗರ್ಜಿಸಿ:- ಛೇ-ಛೇ! ಹಕೀಮಸಾಹೇಬ, ಹಾಗೆಂದಿಗೂ ಆಗಲಾರದು. ಇಂಥ ಅಭದ್ರ ನುಡಿಗಳನ್ನು ನಿಮ್ಮಂಥವರು ಆಡಬಾರದು. ಈ ಹುಡುಗನು ಖಂಡಿತವಾಗಿ ಬದುಕುವನು; ಮತ್ತು ನಮ್ಮೊಡನೆ ಮತ್ತೆ ರಣಸಂಗ್ರಾಮಕ್ಕೆ ಸನ್ನದ್ಧನಾಗುವನು. ನೀವು ನಿಮ್ಮಲ್ಲಿಯ ಅತ್ಯುತ್ತಮ ಔಷಧಿಗಳನ್ನೆಲ್ಲ ಈತನಿಗೆ ಕೊಡಿರಿ. ನಿನ್ನೆ ರಾತ್ರಿ ನಾವು ಕಂಡ ಕನಸಿನಂತೆ ಈತನು ಬದುಕಿ ನಮಗೆ ಯಶಃಪ್ರಾಪ್ತಿ ಮಾಡಿ ಕೊಡುತ್ತಾನೆ, ಎಂದು ಆಜ್ಞೆ ಮಾಡಿದ ಮೇಲೆ, ಹಕೀಮನಾದರೂ ಮಾಡುವದೇನು? ಎಲ್ಲ ಬಗೆಯಿಂದಲೂ ಕಾಸೀಮನ ಉಪಚಾರವು ಚೆನ್ನಾಗಿ ನಡೆಯಿತು. ಬಳಿಕ ಸುಲ್ತಾನನು ಅಲ್ಲಿಂದ ಹೊರಟು ದರ್ಬಾರನ್ನು ಕೂಡಿಸಿ, ತ್ರಾವಣಕೋರದ ಅರಸನನ್ನು ಬಹು ಬೇಗನೆ ಹಣ್ಣಿಗೆ ತರುವ ಆಲೋಚನೆ ನಡಿಸಿದನು.

ಇತ್ತ ಸುಲ್ತಾನನು ಖಾನನೊಡನೆ ದರ್ಬಾರಿಗೆ ಹೊರಟು ಹೋದ ಬಳಿಕ, ಅಮೀನೆಯು ಮೀರನಳೊಡನೆ ಕಾಸೀಮನ ಬಳಿಗೆ

ಹೋದಳು; ಆದರೆ ಅಲ್ಲಿ ಖಾನನ ಇತರರ ಹೆಂಡಂದಿರೂ ದಾಸ-ದಾಸಿಯರೂ ಕುಳಿತಿದ್ದರು. ಆದರಿಂದ ಆಗ ಅವಳು ಅಲ್ಲಿ ಕೂಡ್ರದೆ ಹಿಂದಿರುಗಿ ತನ್ನ ಮಹಾಲಿಗೆ ಬಂದು, ಅವರೆಲ್ಲರ ಎದುರಿಗೆ ಕಾಸೀಮನೊಡನೆ ಮಾತಾಡುವ ಧೈರ್ಯವು ತನಗಾಗುವದಿಲ್ಲೆಂದು ಮೀರಜಬೀಬಿಗೆ ತಿಳಿಸಿದಳು. ಆಗ ಆ ಚತುರೆಯು:—ಹಾಗೇ ಆಗಲಿ; ನಾನು ಅವರೆಲ್ಲರನ್ನೂ ಬೇರೆ ಕಡೆಗೆ ಕಳಿಸಿ, ಒಮ್ಮೆ ಕೆಮ್ಮುವೆನು. ಆ ಕೂಡಲೆ ನೀನು ಅಲ್ಲಿಗೆ ಬಾ. ಇಂದರೆ ನಿಮ್ಮೀರ್ವರಿಗೆ ಮನಬಿಚ್ಚಿ ಮಾತಾಡಲಿಕ್ಕೆ ಅನುಕೂಲವಾಗುವದೆಂದು ಹೇಳಿ, ಕಾಸೀಮನ ಬಳಿಯಲ್ಲಿದ್ದ ಖಾನನ ಇತರ ಹೆಂಡಂದಿರನ್ನೂ, ದಾಸಿಯರನ್ನೂ ಬೇರೆ ಕಡೆಗೆ ಕಳಿಸಿ, ಹೊರಟು ಬರುವದಕ್ಕಾಗಿ ಅಮೀನೆಗೆ ಸೂಚಿಸಿದಳು.

ಅಮೀನೆಯು ಅಲ್ಲಿಗೆ ಹೋಗಿ ಕಾಸೀಮನನ್ನು ನೋಡಿದವಳೇ ಒಮ್ಮೆಲೆ ನೆಲಕ್ಕೆ ಕುಸಿ ಕುಳಿತಳು! ಕೆಲ ಹೊತ್ತು ಆಕೆಯ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ನಂತರ:—ಮೀರಜ, ಇನ್ನು ಈ ನನ್ನ ಬಹಿಃಪ್ರಾಣವು ಬದುಕಿ ಉಳಿಯಬಹುದೇ? ಯಾ ಅಲ್ಲಾ, ಯಾ ಕರೀಮ, ನಾನು ಬಯಸಿದ್ದೇನು, ಇದು ಈಗ ಆಯಿತೇನು? ಇನ್ನು ಈ ಮೂರ್ತಿಯು............ಎಂದಂದು, ಅಮೀನೆಯು ಕಾಸೀಮನ ಕಾಲ್ಗಡೆಯಲ್ಲಿ ಬವಳಿ ಬಂದು ಬಿದ್ದಳು. ಆಗ ಮೀರನಳ ಹಾ-ಹಾರಿತು. ತಾನು ಇವಳನ್ನು ಇಲ್ಲಿಗೇಕೆ ಕರೆತಂದೆನೋ, ಎಂದು ಅವಳಿಗೆ ಚಿಂತೆಯುಂಟಾಯಿತು. ಇಷ್ಟರಲ್ಲಿ ಖಾನನಾಗಲಿ, ಆತನ ಇತರ ಹೆಂಡಂದಿರಾಗಲಿ ಇಲ್ಲಿಗೆ ಬಂದು ಇವಳ ಈ ದೆಸೆಯನ್ನು ನೋಡಿದರೆ ಏನಾದೀತು-ಏನಾಗಲಿಕ್ಕಿಲ್ಲ, ಎಂಬದನ್ನು ಯಾರು ಹೇಳಬೇಕು? ಎಂದು ಅವಳು ಕಳವಳಿಸಹತ್ತಿದಳು. ಕೂಡಲೆ ಮೀರನಳು ಸಮೀಪದಲ್ಲಿದ್ದ ತಣ್ಣೀರನ್ನು ಅಮೀನೆಯ ಕಣ್ಣು-ತಲೆಗೆ ಹಚ್ಚಿ, ಮೋರೆಯ ಮೇಲೆ ಸಿಂಪಡಿಸಿದಳು ಅಷ್ಟರಿಂದಲೇ ಅಮೀನೆಯು ಸಾವಧಳಾದಳು.

ಆಗ ಅವಳನ್ನು ದೂರ ಎತ್ತಿ ಕೂಡ್ರಿಸಿ, ಆಕೆಯ ಕಿವಿಯಲ್ಲಿ ವಿೂರನಳು ಮೆತ್ತಗೆ:—ತಂಗೀ, ಹೀಗೇಕೆ ಮಾಡುವೆ? ಇಲ್ಲಿಯೇ ಇದ್ದರೆ ನಿನ್ನ ಮನಸ್ಸು ಹೆಚ್ಚು ಚಂಚಲವಾಗುವದು. ಆದುದರಿಂದ ನಿನ್ನನ್ನು ನಿನ್ನ ಕೋಣೆಗೆ ಕಳಿಸುವೆನು ನಡೆ, ಎಂದಂದು, ಅವಿೂನೆಯ ಉತ್ತರದ ದಾರಿ ಕೂಡ ನೋಡದೆ ಅವಳನ್ನು ಕರೆದುಕೊಂಡು ನಡೆದಳು.

ಕೆಲ ದಿನಗಳಲ್ಲಿಯೇ ಕಾಸೀಮನು ಪ್ರಾಣಾಂತ ಸಂಕಟದಿಂದ ಪಾರಾಗಿ ಉಳಿದನು. ಅವನ ಗಾಯವು ಮಾಯಹತ್ತಿತು. ಆದರೂ ಇನ್ನೂ ಕೆಲ ದಿನಗಳ ವರೆಗೆ ನೀನು ಎದ್ದೇಳಬಾರದೆಂದು ಸುಲ್ತಾನನೂ ಖಾನನೂ ಹಕೀಮನ ಪರಾಮರ್ಶದ ಮೇರೆಗೆ ಆತನಿಗೆ ಕಟ್ಟಪ್ಪಣೆ ಮಾಡಿದ್ದರು. ಇತ್ತೀಚೆಗೆ ಅವಿೂನೆಯೂ ಆಗಾಗ್ಗೆ ಅವನೆಡೆಗೆ ಸಂಕೋಚವಿಲ್ಲದೆ ಬಂದು ಕೂಡ್ರುತ್ತಿದ್ದಳು; ಆದರೆ ಅವರೀರ್ವರಲ್ಲಿಯೂ ಒಂದು ಬಗೆಯ ಅವರ್ಣನೀಯವಾದ ಪ್ರೀತಿಯಿತ್ತಲ್ಲದೆ, ಪರಸ್ತ್ರೀಯೊಡನೆ ರತನಾಗಬೇಕೆಂಬ ಪಾಪಬುದ್ಧಿಯು ಕಾಸೀಮನಲ್ಲಾಗಲಿ, ಅನ್ಯಪುರುಷನೊಡನೆ ಹಿತಗುಜಗಳನ್ನು ಮಾಡಬೇಕೆಂಬ ನಿಂದ್ಯ ವಿಚಾರವು ಅವಿೂನೆಯಲ್ಲಾಗಲಿ ಎಂದೂ ಬರುತ್ತಿರಲಿಲ್ಲ. ಖಾನನು ತನ್ನ ಹಡೆದ ತಂದೆಯಂತೆ ಇರುವದರಿಂದಲೇ ತನ್ನ ಶುಶ್ರೂಷೆಯು ಇಷ್ಟು ನೆಟ್ಟಗಾಗಿ, ತಾನು ಈ ಸಂಕಟದಿಂದ ಪಾರಾದೆನೆಂದು ಕಾಸೀಮನು ಅವಿೂನೆಯ ಬಳಿಗೆ ಆಗಾಗ್ಗೆ ಆಡಿ ತೋರಿಸುತ್ತಿದ್ದನು.

ಸಂಪೂರ್ಣವಾಗಿ ನೆಟ್ಟಗಾಗಿ ತನ್ನ ಕೆಲಸದ ಮೇಲೆ ಹಾಜರಾಗಲಿಕ್ಕೆ ಕಾಸೀಮನಿಗೆ ಕೆಲ ತಿಂಗಳುಗಳ ಅವಧಿಯು ಬೇಕಾಯಿತು. ಆ ವರೆಗೂ ಸುಲ್ತಾನನು ದಿನಬಿಟ್ಟು ದಿನದಂತೆ ತಾನೇ ಆತನ ಭೆಟ್ಟಿಗೆ ಹೋಗಿ, ಆತನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದನಲ್ಲದೆ, ನೆಟ್ಟಗಾದ ಮೇಲೆ ಆತನನ್ನು ಮತ್ತೆ ತನ್ನ ಚಾಕರಿಗೆ ನೇಮಿಸಿಕೊಂಡು ಅವನ ಸಂಬಳವನ್ನೂ ಪದವಿಯನ್ನೂ ಹೆಚ್ಚಿಸಿದನು.

ಕಾಶೀಮನು ಅಶಕ್ತನಾಗಿ ಬಿದ್ದುಕೊಂಡಾಗ ಟೀಪೂಸುಲ್ತಾನನು ಇತ್ತ ತ್ರಾವಣಕೋರದ ಅರಸನ ಕೂಡ ಕಾಳಗ ನಡಿಸಿದ್ದನಲ್ಲದೆ, ಅತ್ತ ಗುಪ್ತವಾಗಿ ತುರ್ಕಸ್ತಾನದ ಶಹನ ಕಡೆಗೂ, ಅಫಗಾನದ ಅಮೀರನ ಕಡೆಗೂ ತನ್ನ ವಕೀಲರನ್ನು ಕಳಿಸಿ, ಹಿಂದುಸ್ತಾನದಿಂದ ಇಂಗ್ಲಿಷರನ್ನು ಹೊಡೆದೋಡಿಸುವ ಕಾರ್ಯದಲ್ಲಿ ಸಸೈನ್ಯವಾಗಿ ಬಂದು ನೆರವಾಗಬೇಕೆಂದು ಕೇಳಿಕೊಂಡಿದ್ದನು; ಆದರೆ ತುರ್ಕಸ್ತಾನದ ಶಹನು ಸುಲ್ತಾನನ ಮಾತಿಗೆ ಒಪ್ಪಲಿಲ್ಲ ಮುಂದೆ ಕೆಲ ದಿನಗಳನಂತರ ನಿಜಾಮನೂ ಮರಾಟರೂ ಇಂಗ್ಲಿಷರೊಡನೆ ಕಲೆತು, ತನ್ನ ಮೇಲೆ ಸಾಗಿ ಬರುವರೆಂಬ ಸುದ್ದಿಯು ಸುಲ್ತಾನನಿಗೆ ಬಡಿಯಿತು ಇದೇ ಕಾಲಕ್ಕೆ ಸುಲ್ತಾನನು ತ್ರಾವಣಕೋರದ ಕೋಟೆಯ ಗೋಡೆಯ ಮೇಲಿಂದ ಕೆಳಗೆ ದುಮುಕುವ ಪ್ರಸಂಗ ಬಂದುದರಿಂದ, ಆಗ ಅವನ ಕಾಲಿಗೆ ಚೆನ್ನಾಗಿ ಪೆಟ್ಟು ಬಡಿದಿತ್ತು. ಅದರಿಂದ ಅವನ ಮನಸ್ಸು ಮತ್ತಿಷ್ಟು ವ್ಯಗ್ರವಾಯಿತು ಆಗ ಅವನು ಹೆಚ್ಚೀ ನಿಕರದಿಂದ ಕಾದತೊಡಗಿದನು.

ಸುಲ್ತಾನನು ಹೆಚ್ಚೀ ಸಿಟ್ಟಿಗೆದ್ದು ಕಾದಹತ್ತಿದ ಕೆಲ ದಿನಗಳಲ್ಲಿಯೇ ತ್ರಾವಣಕೋರದ ಕೋಟೆಯು ಅವನ ಹಸ್ತಗತವಾಯಿತು. ಆಗ ದಂಡಾಳುಗಳೆಲ್ಲ ಪಟ್ಟಣವನ್ನು ಹೊಕ್ಕು ಪತಿವ್ರತೆಯರ ಮಾನಭಂಗ ಮಾಡುವದರಲ್ಲಿಯೂ, ಹುಡುಗರು ಹುಪ್ಪಡಿಗಳನ್ನು ಎಗ್ಗಿಲ್ಲದೆ ಕೊಲ್ಲುವದರಲ್ಲಿಯೂ, ಮನೆ-ಮಠಗಳನ್ನು ಸುಲಿದು ಸುಡುವದರಲ್ಲಿಯೂ ಮಗ್ನರಾದರು! ಸುಲ್ತಾನನು ತನ್ನ ತೋಫಿನ ಗುಂಡುಗಳ ಸುರಿಮಳೆಗರೆದು ಆ ಕೋಟೆಯ ಕೊತ್ತಳಗಳನ್ನೆಲ್ಲ ನೆಲಸಮ ಮಾಡಿದನು. ತ್ರಾವಣಕೋರನ್ನು ಗೆದ್ದು, ಸುಲ್ತಾನನು ತನ್ನ ಮೇಲೆ ಏರಿ ಬರುತ್ತಿರುವ ತ್ರಿವರ್ಗರ ದಂಡುಗಳಿಗೆದುರಾಗುವದಕ್ಕಾಗಿ ಶ್ರೀರಂಗಪಟ್ಟಣದ ಕಡೆಗೆ ಭರದಿಂದ ಸಾಗಿದನು.

---

## ಹೊಸ ಸಂಕಟ.

ಕಾಸೀಮುಇಲ್ಲಿಯು ಶ್ರೀರಂಗಪಟ್ಟಣಕ್ಕೆ ಬಂದ ಮೇಲೆ ಅವನಿಗೆ ಪ್ರಾಪ್ತವಾದ ಹೊಸ ಸಂಕಟವು ವಿಚಿತ್ರತರದ್ದಾಗಿತ್ತು. ಅಂಥ ಸಂಕಟದೊಳಗಿಂದ ಸಾಮಾನ್ಯ ಮನುಷ್ಯನು ಪಾರಾಗುವದು ದುಸ್ತರವೇ ಸರಿ. ಅಬ್ದುಲ್‌ರಹಿಮಾನಖಾನನ ಎರಡನೇ ಹೆಂಡತಿಯ ಹೆಸರು ಕುಲಸುಮ್‌ಬಿ. ಕಾಸೀಮುನನ್ನು ನೋಡಿದಾಗಿನಿಂದ ಅವಳ ಚಿತ್ತವು ಚಂಚಲವಾಗಿ ಹೋಗಿತ್ತು. ತನ್ನನ್ನು ತನ್ನ ಗಂಡನು ದುರ್ಲಕ್ಷಿಸಿ ಬೇರೆಯವಳನ್ನು ಲಗ್ನವಾದುದರಿಂದ, ಮೊದಲೇ ವಿಲಕ್ಷಣ ಸ್ವಭಾವದ ಆ ಹೆಣ್ಣುಮಗಳಿಗೆ ಬಹಳ ಕೆಡಕೆನಿಸಿತ್ತು. ಆಕೆಯು ಹಳ್ಳೀ ಹಟಮಾರಿಯೂ, ಸಿಟ್ಟಿನವಳೂ, ಕಾಮುಕಳೂ ಆಗಿದ್ದಳು. ಅದರಿಂದ ಕಾಸೀಮುನನ್ನು ನೋಡಿದಾಗಿನಿಂದ ಅವಳು ವಿಹ್ವಲಳಾಗಿದ್ದಳು. 'ಅರೇಬಿಯನ್‌ನಾಯಿಟ್ಸ' ಎಂಬ ಪುಸ್ತಕದಲ್ಲಿನ ಮುಸಲ್ಮಾನ ದೇಶದ ಸ್ತ್ರೀ-ಪುರುಷರ ವಿಷಯವಾಸನೆಯ ಕಥೆಗಳನ್ನೋದಿದವರಿಗೆ ಕುಲಸುಮಳು ಯಾವ ತರಗತಿಯವಳಿದ್ದಳೆಂಬದನ್ನು ಬರೆದು ತಿಳಿಸುವ ಕಾರಣವಿಲ್ಲ. ಆಕೆಯು ಕಾಸೀಮುನಲ್ಲಿ ಆಸಕ್ತಳಾಗಿದ್ದಳು. ಆಕೆಯು ಒಮ್ಮೆ ತನ್ನ ವೃದ್ಧ ದಾಸಿಯಾದ ಸೋರ್ಯುನ್ ಎಂಬವಳಿಗೆ ತನ್ನ ಗೌಪ್ಯವನ್ನೆಲ್ಲ ತಿಳಿಸಿ, ಅವಳನ್ನು ಕಾಸೀಮುನೆಡೆಗೆ ಕಳಿಸಿದಳು. ಸೋರ್ಯುನ್‌ಳಾದರೂ ತಾರುಣ್ಯದಲ್ಲಿ ನಾನಾ ಬಗೆಯ ಲೀಲಾ ನಾಟಕಗಳನ್ನಾಡಿದವಳು. ಅಂದಮೇಲೆ ಅವಳಿಗೆ ಆ ಕೆಲಸವು ಗೆಡಚೆನಿಸಲಿಲ್ಲ. ಕುಲಸುಮಳು ಕೊಟ್ಟಿದ್ದ ಲವಂಗಗಳನ್ನು ಸೋರ್ಯುನಳು ಕಾಸೀಮುನಿಗೆ ಒಯ್ದು ಕೊಟ್ಟಳು. ತರುಣ ಸ್ತ್ರೀ-ಪುರುಷರು ಲವಂಗಗಳನ್ನು ಒಬ್ಬರು ಮತ್ತೊಬ್ಬರಿಗೆ ಕಳಿಸುವದೆಂದರೆ, "ಲವಂಗದ ಖಾರದಂತೆ ನಾನು ನಿನ್ನನ್ನು ಹೆಚ್ಚಾಗಿ ಪ್ರೀತಿಸುತ್ತೇನೆ" ಎಂದು ಸೂಚಿಸುವದಾಗಿರುತ್ತದೆ. ತನ್ನ ಕಡೆಗೆ ಅಪರಿಚಿತ ಸ್ತ್ರೀಯಳೊಬ್ಬಳು

ಬಂದುದನ್ನು ತಿಳಿದು ಕಾಸೀಮನಿಗೆ ಮೊದಲೇ ಆಶ್ಚರ್ಯವೆನಿಸಿತ್ತು. ಆದರಲ್ಲಿ ಸೋರ್ಯುನಳು ತಂದ ಆ ಲವಂಗಗಳನ್ನು ನೋಡಿದ ಬಳಿಕಂತೂ ಅವನು ವಿಸ್ಮಯದಿಂದ ಬೆಪ್ಪಾದನು. ಆಗ ಆತನು ಸೋರ್ಯುನಳನ್ನು ಕುರಿತು:—"ತಾಯಿಯೆ, ನಿನ್ನನ್ನು ಯಾವ ಕೆಲಸಕ್ಕಾಗಿ ಇಲ್ಲಿಗೆ ಕಳಿಸಿರುವರೋ, ಅದು ಎಂದಿಗೂ ಸಾಧ್ಯವಾಗಲಾರದು. ನೀನು ಯಾರಿಂದ ಬಂದಿರುವಿಯೋ ಅವರಿಗೆ—ಕಾಸೀಮನಲ್ಲಿಯ ಅಂತಃಕರಣವು ಬೇರೆ ಕಡೆಗೆ ಮಗ್ನವಾಗಿದೆ. ಆದರಿಂದ ಅದು ಇನ್ನಾರಿಗೂ ಸಿಗಲಾರದು. ಸುಲ್ತಾನನ ದರ್ಬಾರದಲ್ಲಿ ನನಗಿಂತ ಸುಂದರರೂ, ತರುಣರೂ, ಧನ-ಕನಕ ಸಂಪನ್ನರೂ ಆದ ಎಷ್ಟೋ ಜನರಿದ್ದಾರೆ. ಅಂಥವರ ಕಡೆಗೇ ಅವರು ನಿನ್ನನ್ನು ಕಳಿಸಬೇಕಾಗಿತ್ತು. ಹೀಗೆ ತಿಳಿಸು"ಎಂದು ಹೇಳಿದನು.

ಸೋರ್ಯುನಳು ಕುಲಸುಮಳ ದಾಸಿಯೆಂಬುದಾಗಲಿ, ಖಾನನ ಹೆಂಡತಿಯಾದ ಕುಲಸುಮಳು ಆ ತರದ ಹೆಣ್ಣುಮಗಳಿರುವಳೆಂಬುದಾಗಲಿ ಕಾಸೀಮನಿಗೆ ಗೊತ್ತೇ ಇರಲಿಲ್ಲ ಲವಂಗಗಳನ್ನು ತಂದಿರುವ ಈ ವೃದ್ಧ ದಾಸಿಯು ಯಾವಳೊಬ್ಬ ನವನರ್ತಕಿಯ ಕಡೆಯಿಂದ ಬಂದಿರುವಳೆಂದೇ ಅವನ ಗ್ರಹಿಕೆಯಾಗಿತ್ತು. ಆದರಿಂದಲೇ ಅವನು ಗೂಢವಾದ ಆ ಉತ್ತರವನ್ನು ಅವಳಿಗೆ ಹೇಳಿದ್ದನು.

ಸೋರ್ಯುನಳು ಕಾಸೀಮನಂಥ ಎಷ್ಟೋ ತರುಣರನ್ನು ನಾನಾ ಬಗೆಯಾಗಿ ಕಂಡಿದ್ದಳು. ಆದರಿಂದ ಅವಳು ಅಷ್ಟಕ್ಕೇ ಹೊರಟು ಹೋಗದೆ:-'ತರುಣಾ, ನಿನ್ನನ್ನು ಯಾವಳು ಪ್ರೀತಿಸುವಳೋ, ಅವಳು ಯಾವಳೊಬ್ಬ ವಾರಾಂಗನೆಯಾಗಿರುವದಿಲ್ಲ. ಅವಳು ಶ್ರೇಷ್ಠ ಮನೆತನದ ಕುಲಸ್ತ್ರೀಯಾಗಿರುತ್ತಾಳೆ ಆದರಿಂದಲೇ ನಿನ್ನ ಭಾಗ್ಯೋದಯವಾಯಿತೆಂದು ತಿಳಿದು, ನೀನು ಅವಳ ನಿಮಂತ್ರಣವನ್ನು ಸ್ವೀಕರಿಸು. ಹಿಲ್ಲೆನಬೇಡ' ಎಂದು ತಿಳಿಸಿದಳು. "ಹಾಗಾದರೆ ನೀನು

ಅಂಥವಳ ಆ ಕೆಲಸಕ್ಕಾಗಿ ಇಲ್ಲಿಗೇಕೆ ಬಂದೆ? ಹೊರಡು ಇಲ್ಲಿಂದ. ಯಾಕೆ? ಬೇಗನೆ ಹೋಗುವಿಯೋ, ನೌಕರನಿಗೆ ಹೇಳಿ ಹೊರಗೆ ಹಾಕಿಸಲೊ? ನೀನು ಕುಲಸ್ತ್ರೀಯು ಕಡೆಯುವಳಾಗಿದ್ದರೆ, ತನ್ನ ಗಂಡನನ್ನೇ ಇನ್ನಿಷ್ಟು ಪ್ರೀತಿಸಲಿಕ್ಕೆ ಅವಳಿಗೆ ಹೇಳಬಾರದೇ? ನಿನ್ನಂಥ ಮುದುಕಿಯು ಅವಳನ್ನು ಈ ತರದ ಅವಿಚಾರಕ್ಕೆ ಹಚ್ಚುವದುಂಟೆ?'' ಎಂದು ಕಾಸೀಮನು ಸೋಫುನಳಿಗೆ ಸಿಟ್ಟು ಮಾಡಿ ಹೇಳಿ, ಅವಳನ್ನು ಅಲ್ಲಿಂದ ಕಳಿಸಿಕೊಟ್ಟನು.

ಸೋಫುನಳು ಸಿಟ್ಟುಬೆಂಕಿಯಾಗಿ ಕುಲಸಮಳ ಬಳಿಗೆ ಬಂದಳು. ಅವಳ ಕ್ರುದ್ಧ ಮೊಗವನ್ನು ನೋಡಿ ತನ್ನ ಕೆಲಸವಾಗಲಿಲ್ಲೆಂದು ಆಕೆಯು ತಿಳಿದುಕೊಂಡಳು. ಏನಾಯಿತೆಂದು ದುಂಬಾಲು ಬಿದ್ದು ಕೇಳಿದರೂ ಸೋಫುನಳು ಮಾತಾಡಲೇ ಇಲ್ಲ. ಕಡೆಗೆ ಅವಳು:—ತಂಗೀ, ನೀನು ಆ ನೀಚನ ಹವ್ಯಾಸವನ್ನು ಬಿಟ್ಟುಬಿಡು. ಅವನ ಅಂತರಂಗವು ಬೇರೆ ಕಡೆಗೆ ತೊಡಗಿದೆಯಂತೆ! ಎಂದು ಹೇಳಿ, ಉರಿಯುವದರಲ್ಲಿ ಎಣ್ಣೆ ಹಾಕುವ ನಿಂದ್ಯಕೆಲಸ ಮಾಡಿದಳು. ಮೊದಲೇ ಕಾಮಾತುರಳಾಗಿದ್ದ ಕುಲಸಮುಬಿಯು ಆ ನುಡಿಯನ್ನು ಕೇಳಿ, ಮತ್ತಿಷ್ಟು ಅಧೀರಳಾದಳು

ಮರುದಿನ ತಾನೇ ಕಾಸೀಮನೆಡೆಗೆ ಹೋಗಿ, ತನ್ನ ಸೌಂದರ್ಯವನ್ನು ಅವನಿಗೆ ತೋರಿಸಿ, ಅವನನ್ನು ವಶಪಡಿಸಿಕೊಳ್ಳುವದನ್ನು ಕುಲಸಮುಬಿಯು ನಿರ್ಧರಿಸಿದಳು. ಅವಳ ಆ ಸಾಹಸವನ್ನು ಕಂಡು ಆ ವೃದ್ಧನಾರೀ ಪತಿವ್ರತೆಯಾಗಿದ್ದ ಸೋಫುನಳಿಗೆ ಕೂಡ ಆಶ್ಚರ್ಯವೆನಿಸಿತು ಆ ಸಾಹಸಕ್ಕೆ ಹೋಗಬೇಡೆಂದು ಸೋಫುನಳು ಪರಿಪರಿಯಾಗಿ ಅವಳಿಗೆ ಹೇಳಿದಳು; ಆದರೆ ತೀರ ಕಾಮಾತುರಳಾಗಿದ್ದ ಘೋಷೆಯೊಳಗಿನ ಆ ಬೀಬಿಯು ಅದನ್ನು ಕೇಳದೆ, ಮರುದಿನ ಸಾಯಂಕಾಲಕ್ಕೆ ಹೋಗೇ ತೀರುವೆನೆಂದು ನಿಶ್ಚಯಿಸಿ ಕುಳಿತಳು.

ಇದೇ ಕಾಲಕ್ಕೆ ಬೇರೆ ಬೇರೆ ಕಡೆಗೆ ಶತ್ರುಗಳು ನುಗ್ಗಿ, ಟೀಪು ವಿನ ಕೆಲವು ಕೋಟೆಗಳನ್ನು ಹಸ್ತಗತ ಮಾಡಿಕೊಂಡ ವರ್ತಮಾನವು ಬಂದಿತು. ಅದರಿಂದ ಅವನು ಯಾವುದೊಂದು ಕಡೆಗೆ ಹೋಗಿ ಕಾಳಗಕ್ಕೆ ಸನ್ನದ್ಧನಾಗಬೇಕೆಂದಿದ್ದನು; ಇಷ್ಟರಲ್ಲಿ ಇಂಗ್ಲಿಷರ ಕಡೆ ಯದೊಂದು ಪತ್ರವು ಅವನಿಗೆ ಬಂದು ತಲುಪಿತು. ಅದರಲ್ಲಿ: "ನೀನು ತ್ರಾವಣಕೋರದ ರಾಜನಿಗೂ ಅವನ ಪ್ರಜೆಗಳಿಗೂ ಕಾರಣ ವಿಲ್ಲದೆ ತೊಂದರೆ ಕೊಟ್ಟು, ಅವರ ಕೋಟೆಯನ್ನು ಹಾಳು ಮಾಡಿ ರುತ್ತೀ. ಈಗ ನೀನು ನಿನ್ನ ಖರ್ಚಿನಿಂದ ಆ ಕೋಟೆಯನ್ನು ಮೊದ ಲಿನಂತೆ ಕಟ್ಟಿಸಿ ಕೊಡಬೇಕು; ಹಾಗು ಇನ್ನೆಂದೂ ಆ ರಾಜ್ಯಕ್ಕೆ ತೊಂದರೆ ಕೊಡಲಿಕ್ಕಿಲ್ಲೆಂದು ಜಾಮೀನು ಕೊಡಬೇಕು; ಇಲ್ಲದಿ ದ್ದರೆ ಪ್ರಸಂಗವು ಕಠಿಣವಾದೀತು!" ಈ ಪ್ರಕಾರದ ಸಂಗತಿಯು ಇತ್ತು. ಆ ಪತ್ರದ ಸಂಗತಿಯನ್ನು ಕೇಳಿಯಂತೂ ಸುಲ್ತಾನನ ಪಿತ್ತವು ತಲೆಗೇರಿತು. ಅದರಿಂದ ಅವನು ಬೇರೆ ಕಡೆಗೆ ಹೊರಡುವ ದನ್ನು ಬಿಟ್ಟುಗೊಟ್ಟು, ಇಂಗ್ಲಿಷರು ಯಾವ ಕಡೆಯಿಂದ ಉಪಟಳ ವನ್ನು ನಡಿಸಿದ್ದರೋ, ಅದೇ ಕಡೆಗೆ ಭರದಿಂದ ಸಾಗಿ ಹೋದನು. ಅಬ್ದುಲ್‌ರಹಿಮಾನಖಾನನೂ ಆತನೊಡನೆ ಹೋದನು. ಅಮೀನೆಗೆ ಬೇಡಬೇಡವೆಂದು ಎಷ್ಟು ಹೇಳಿದರೂ ಕೇಳದೆ, ಆಕೆಯೂ ಖಾನನೊ ಡನೆ ತೆರಳಿದಳು. ಕಾಸೀಮನು ಇನ್ನೂ ಅಶಕ್ತನಾಗಿದ್ದರಿಂದ ಆತ ನನ್ನು ಸುಲ್ತಾನನು ಬೇಕಂತ ತನ್ನ ಸಂಗಡ ಕರೆದೊಯ್ಯಲಿಲ್ಲ. ಅದ ರಿಂದಲೇ ಖಾನನ ಎರಡನೇ ಹೆಂಡತಿಯಾದ ಕುಲಸುಮಬಿಗೆ ತನ್ನ ಬೇತನ್ನು ಪಾರುಗಾಣಿಸಿಕೊಳ್ಳಲಿಕ್ಕೆ ತಾನಾಗಿ ಒಳ್ಳೇ ಅನುಕೂಲ ಪ್ರಸಂಗವು ಒದಗಿ ಬಂತು.

ಮರುದಿನ ಮೂರೂಸಂಜೆಯ ಮುಂದೆ ಅವಳು ಸೋಝುಪ ಳೊಡನೆ ಮೈತುಂಬ ಬುರುಕ ಹಾಕಿಕೊಂಡು, ಕಾಸೀಮನ ಮನೆಗೆ

ಹೋದಳು. ಬಾಗಿಲ ಕಾಯುವವನು "ನೀವು ಯಾರು? ಯಾರ ಕಡೆಗೆ ಬಂದಿರುವಿರಿ?" ಮುಂತಾದುದನ್ನು ಕೇಳಹತ್ತಲು, "ಕಾಸೀಮ ಅಲ್ಲಿಯು ಕರೆಕಳುಹಿರುವದರಿಂದಲೇ ನಾವು ಇಲ್ಲಿಗೆ ಬಂದಿರುವೆವು" ಎಂದದ್ದು, ಅವರು ಕಾವಲುಗಾರನಿಗೆ ಸೊಪ್ಪು ಹಾಕದೆ ಒಳಗೆ ನುಗ್ಗಿದರು ತನ್ನ ಯಜಮಾನನು ಒಳ್ಳೇ ಕಡ್ಡಾಚರಣೆಯವನಾಗಿದ್ದು, ಈ ದಿನ ಸಂಜೆಯ ಮುಂದೆ ಈ ಹೆಂಗಸರನ್ನು ಕರೆಸಿಕೊಂಡಿದುದೇಕೆ? ಎಂಬುದರ ಗೂಢವನ್ನು ತಿಳಿಯಲಾರದೆ, ಆ ಶಿಪಾಯಿಯು ಕುಳಿತಲ್ಲಿಯೇ ಕುಳಿತು ಬಿಟ್ಟನು. ಒಳಗೆ ಹೋದೊಡನೆ ಇವರನ್ನು ನೋಡಿ ಕಾಸೀಮನು ಬೆರಗಾದನು. ಕ್ಷಣದಲ್ಲಿ ಅವನ ಮುಖವು ಕ್ರೋಧದಿಂದ ಸಂತಪ್ತವಾಯಿತು. ಆಗ ಆತನು:—"ನೀವು ಯಾರು? ಇಲ್ಲಿಗೇಕೆ ಬಂದಿರುವಿರಿ? ನಿಮ್ಮನ್ನು ಒಳಗೆ ಬಿಟ್ಟವರಾರು?" ಎಂದು ಗದ್ದರಿಸಿ ಕೇಳಹತ್ತಲು, ಕುಲಸಮಳು ತನ್ನ ಮೋರೆಯ ಮೇಲಿನ ಬುರುಕೆಯನ್ನು ತೆಗೆದೊಗೆದು, ಅವನ ಹತ್ತರ ಹೋಗಿ ನಿಂತು, ಅವನಿಗೆ ತನ್ನ ಸೌಂದರ್ಯವನ್ನು ತೋರಹತ್ತಿದಳು.

ಕುಲಸಮಳು ರೂಪಸುಂದರಿಯು. ಆಕೆಯು ಒಳ್ಳೇ ಗೌರವರ್ಣದವಳಾಗಿರದಿದ್ದರೂ ಆಕೆಯ ಕಣ್ಣು, ಮೂಗು, ಹಣೆ ಮುಂತಾದವುಗಳು ಪ್ರಮಾಣಬದ್ಧವಾಗಿದ್ದವು. ಅವಳ ಮೈಕಟ್ಟಂತೂ ನೋಡುವವರ ದೃಷ್ಟಿಗೆ ಮೋಹವನ್ನುಂಟು ಮಾಡುವಂತಹದಿತ್ತು. ಕಾಸೀಮನು ತನ್ನನ್ನು ದಿಟ್ಟಿಸಿ ನೋಡುತ್ತಿರುವನೆಂಬದು ಅವಳಿಗೆ ತಿಳಿದ ಕೂಡಲೆ ಅವಳು ತನ್ನ ಕಣ್ಣಲ್ಲಿ ನೀರು ತಂದು:—"ಪ್ರಿಯಕರಾ, ನಿಮ್ಮನ್ನು ನೋಡಿದಾಗಿನಿಂದ ಈ ದಾಸಿಯ ಚಿತ್ತವು ಹರಣವಾಗಿ ಹೋಗಿದೆ. ಹೃದಯವನ್ನು ಬಗೆದು ತೋರಿಸುವದು ಶಕ್ಯವಾಗಿದ್ದರೆ, ನನ್ನ ಹೃದಯದಲ್ಲಿ ನಿಮ್ಮ ವಿಷಯವಾಗಿ ಎಷ್ಟು ಪ್ರೇಮವಿದೆಯೆಂಬದನ್ನು ನಾನು ನಿಮಗೆ ತೋರಿಸಿ ಬಿಡುತ್ತಿದ್ದೆನು; ಆದರೆ ಅದು

ಅಶಕ್ಯದ ಮಾತು. ಇಷ್ಟರಿಂದಲೇ ನನ್ನ ಮಾತಿನ ಸಂದರ್ಭವೇನೆಂಬ ದನ್ನು ಜಾಣರಾದ ನೀವು ತಿಳಿದೇ ಇರುತ್ತೀರಿ..........." ಎಂದು ನುಡಿಯುಹತ್ತಲು, ಕಾಸೀಮುಅಲ್ಲಿಯೂ ಅವಳನ್ನು ಮತ್ತೆ ಮಾತಾಡ ಗೊಡದೆ:—"ನಿನ್ನ ಮಾತಿನ ಮೇಲಿಂದ ನೀನು ವಾರವನಿತೆಯಾಗಿ ತೋರುವದಿಲ್ಲ; ಹಾಗಾದರೆ ನೀನು ಕುಲೀನ-ಗರತಿ-ಸ್ತ್ರೀಯಾಗಿರು ವಿಯಲ್ಲವೆ?" ಎಂದು ಪ್ರಶ್ನೆ ಮಾಡಿದನು.

"ಅಹುದು. ನಾನು ಸುಳ್ಳೇಕೆ ಹೇಳಲಿ? ನಾನು ನನ್ನ ಮುದಿ ಗಂಡನಿಂದ ಪರಿತ್ಯಕ್ತಳಾಗಿದ್ದೇನೆ. ಅದರಿಂದ ನನ್ನ ಮನಸ್ಸು ನಿಮ್ಮಲ್ಲಿ ಅನುರಕ್ತವಾಗಿದೆ. ಹೇಗಾದರೂ ಮಾಡಿ ಈ ದಾಸಿಗೆ ನಿಮ್ಮ ಪಾದ ದೆಡೆಯಲ್ಲಿ ಸ್ಥಳ ಕೊಡಿರಿ. ಇಲ್ಲೆನಬೇಡಿರಿ"ಎಂದಂದು, ಕುಲಸಮುಳು ಅಳಲಾರಂಭಿಸಿದಳು. ಅವಳ ಆ ಕಂಬನಿಗಳನ್ನು ಕಂಡು ಆ ಧೀರ, ಶೂರ, ನರವೀರನ ಮನಸ್ಸು ಕೂಡ ಅವಳ ಇಚ್ಛೆಗೆ ಬಲಿಯಾಗುವ ಬೇತು ಮಾಡಿತು. ಆತನ ಮುಖಭಾವದಿಂದಲೇ ಅವನ ಅಂತರಂಗ ವನ್ನು ತಿಳಿದ ಸೋಝುನಳು:—"ಅಲ್ಲೀಸಾಹೇಬ, ಇನ್ನು ವಿಚಾರ-ಪ್ರತಿವಿಚಾರಗಳಲ್ಲಿ ಕಾಲ ಕಳೆಯಬೇಡಿರಿ. ಈಕೆಯ ಇಚ್ಛೆಯನ್ನು ತೃಪ್ತಿ ಪಡಿಸಿರಿ. ನಾನು ಆ ಬದಿಯ ಪಡಸಾಲೆಗೆ ಹೋಗುತ್ತೇನೆ" ಎಂದು ನುಡಿದಳು. ದಾಸಿಯು ಆ ಶಬ್ದಗಳನ್ನು ಕೇಳಿದೊಡನೆಯೇ ಕಾಸೀಮುಅಲ್ಲಿಯು ವ್ಯಾ ನಡುಗಿತು. ಅವನು ಆಪಾದ-ಮಸ್ತಕದ ವರೆಗೂ ಉರಿಯುತ್ತ ಕುಲಸಮುಳನ್ನು ಕುರಿತು:—"ಏನಮ್ಮಾ, ನೀವು ನಮ್ಮ ಖಾನಸಾಹೇಬರ ಕುಟುಂಬವಾಗಿ ತೋರುತ್ತಿದೆಯಲ್ಲ! ಯಾಕೆ? ಅಹುದೋ-ಅಲ್ಲೋ ಹೇಳಿರಿ" ಎಂದು ಕೇಳಲು, ಕುಲ ಸಮುಳು ಥರಗುಟ್ಟಿ ನಡುಗಹತ್ತಿದಳು. ಕಡೆಗೆ ಅವಳು ನಿರ್ಲಜ್ಜ ತನದಿಂದ:—ಆದರೆ ಏನಾಯಿತು? ಎನ್ನಲು, ಕಾಸೀಮುನು ತಿರ ಸ್ಕಾರಪೂರ್ಣದೃಷ್ಟಿಯಿಂದ ಅವಳ ಕಡೆಗೆ ನೋಡುತ್ತ:— ಹೊರಡಿರಿ

ಇಲ್ಲಿಂದ ಮೊದಲು! ಎಂದು ಹೇಳಿದನು. ಆತನ ಆ ವಾಕ್ಯವನ್ನು ಕೇಳಿ ವಿರಹವ್ಯಥೆಯಿಂದ ಬವಳಿಬಂದ ಕುಲಸಮಳು ನೆಲಕ್ಕೆ ಬಿದ್ದಳು! ಸೋರ್‍ಯುನಳಿಂದ ಅವಳನ್ನು ಎಚ್ಚರಗೊಳಿಸಿ, ಹಿತ್ತಲಬಾಗಿಲಿನಿಂದ ಅವರೀರ್ವರನ್ನೂ ಆಗಲೆ ಹೊರಗೆ ಹಾಕಿಸಿದನು; ಹಾಗು ತನ್ನ ಮನೆಯ ಬಾಗಿಲು ಕಾಯುವವರಿಗೆ ಇನ್ನು ಮುಂದೆ ಯಾವ ಹೆಂಗಸನ್ನೂ ನನ್ನ ಅಪ್ಪಣೆಯಿಲ್ಲದೆ, ಒಳಗೆ ಬಿಡಕೂಡದೆಂದು ಕಾಸೀಮನು ಕಟ್ಟಪ್ಪಣೆ ಮಾಡಿದನು.

ಅಂದಿನಿಂದಲೇ ಕಾಸೀಮ ಅಲ್ಲಿಗೆ ಆ ಕುಲಸಮ ಹಾಗು ಸೋರ್‍ಯುನರೆಂಬ ಇಬ್ಬರು ಹೊಸ ಶತ್ರುಗಳಾದರು. ಇದೇ ಕಾಲಕ್ಕೆ ಜಾಫರ ಜಮಾದಾರನು-ಈ ಮೊದಲು ದಂಡಿನ ಬೊಕ್ಕಸದಿಂದ ಅಪಹರಿಸಿದ್ದ ಹಣದ ನಿಜವಾದ ಲೆಕ್ಕವು ಕಾಸೀಮನಿಂದ ಹೊರಬಿದ್ದುದರಿಂದ ಅವನು-ಈತನನ್ನು ಹೆಚ್ಚಾಗಿ ದ್ವೇಷಿಸಹತ್ತಿದನು. ಆ ಹಗೆತನವು ಬೆಳೆಯಲಿಕ್ಕೆ ಕಾರಣವಾಯಿತೇನಂದರೆ:—ಅಬ್ದುಲ್ ರಹಿಮಾನಖಾನನೂ ಆತನ ಹಸ್ತಕನಾದ ಕಾಸೀಮನೂ ಸೇರಿ ತನ್ನ ಮೇಲೆ ಇಲ್ಲದ-ಸಲ್ಲದ ಆರೋಪವನ್ನು ಹೊರಿಸುವದಕ್ಕಾಗಿ ಖೊಟ್ಟಿ ಲೆಕ್ಕವನ್ನು ತೋರಿಸುತ್ತಾರೆ. ಆದುದರಿಂದ ಸರಕಾರವು ಈ ಬಗ್ಗೆ ಚೆನ್ನಾಗಿ ಶೋಧ ಮಾಡಬೇಕೆಂದು ಅರ್ಜಿ ಮಾಡಿಕೊಳ್ಳಲಿಕ್ಕೆ ಜಾಫರನು ಸುಲ್ತಾನನ ಕಡೆಗೆ ಹೋದನು. ಮಾತು-ಮಾತಾಡುತ್ತಿರುವಾಗಲೇ ಈತನು ಸುಳ್ಳುಗಾರನೆಂಬದು ಸುಲ್ತಾನನ ಮನವರಿಕೆಯಾಗಲು, ಆತನು ಇವನಿಗೆ ಚೆನ್ನಾಗಿ ಸಿಟ್ಟು ಮಾಡಿ:—ಅವರು ಲೆಕ್ಕಾಚಾರ ಮಾಡಿದಂತೆ ನೀನು ಭರಣಾ ಮಾಡಬೇಕಾದ ಎರಡು ಸಾವಿರ ಹೊನ್ನುಗಳನ್ನು ಇಂದು ಸಂಜೆಯೊಳಗೆ ಖಜೀನಿಗೆ ಭರತಿ ಮಾಡಲೇ ಬೇಕು; ಇಲ್ಲದಿದ್ದರೆ ನಿನ್ನ ಗತಿ ನೆಟ್ಟಗಾಗಲಿಕ್ಕಿಲ್ಲ. ಈ ವರೆಗೆ ನೀನು ಯಾವ ನಂದಿದುರ್ಗದಲ್ಲಿ ಅಧಿಕಾರಿಯಾಗಿದ್ದೆಯೋ,

ಅದೇ ನರಕದಲ್ಲಿ ಕೊಳೆಯಬೇಕಾದೀತು, ಎಂದು ಹೇಳಿ ಕಳಿಸಿದನು! ಆಗಿನಿಂದಂತೂ ಆ ಕುಟಿಲ ಜಾಫರನು ಕಾಸೀಮಅಲ್ಲಿಯ ಮೇಲೆ ಹಲ್ಲು ಕಡಿಯಹತ್ತಿದನು.

ಸೋಝುನಬಿಯು ತನ್ನ ತಾರುಣ್ಯದಲ್ಲಿ ನಾನಾ ಲೀಲಾ ನಾಟಕಗಳನ್ನಾಡಿದವಳೆಂಬುದನ್ನು ನಮ್ಮ ವಾಚಕರು ಅರಿತೇ ಇರುವರು. ತಾರುಣ್ಯಕಾಲದೊಳಗೆ ಅವಳು ಜಾಫರ ಜಮಾದಾರನ ಪ್ರೀತಿಪಾತ್ರಳಾಗಿದ್ದಳು. ನಡುವೆ ಆತನು ಬೇರೆ ಕಡೆಗೆ ವರ್ಗವಾಗಿ ಹೋದುದರಿಂದಲೋ, ಮತ್ತಾವ ಕಾರಣದಿಂದಲೋ ಅವರಲ್ಲಿ ವಿಯೋಗವುಂಟಾಗಿತ್ತು; ಆದರೆ ಈಚೆಗೆ ಜಾಫರನು ಮತ್ತೆ ಶ್ರೀರಂಗಪಟ್ಟಣದಲ್ಲಿಯೇ ಇರಹತ್ತಿದ್ದರಿಂದ, ಆ ಉಭಯತರ ಮೈತ್ರಿಯು ಮೊದಲಿನಂತೆ ಕೂಡಿ ಬಂದಿತು. ಒಂದುದಿನ ಸೋಝುನಳು ತನ್ನ ಪ್ರಿಯಕರನಿಗೆ ಕುಲಸಮಳನ್ನು ಕಾಸೀಮನು ಹೇಗೆ ಅವಮಾನಗೊಳಿಸಿದನೆಂಬುದನ್ನು ತಿಳಿಸಲು, ತನಗೂ ಆ ನೀಚನು ಎಷ್ಟು ತೊಂದರೆ ಕೊಟ್ಟಿರುವನೆಂಬುದನ್ನು ಜಾಫರನು ಅವಳಿಗೆ ತಿಳಿಸಿದನು. ಅವನು ಕಾಸೀಮನ ಬಗ್ಗೆ ಮಾತಾಡುವಾಗ ಆತನಿಗೂ ಅಮೀನೆಗೂ ದುಷ್ಟಸಂಬಂಧವಿರಬೇಕೆಂದು ಅಂದದ್ದೊಂದೇ ತಡ; "ನನ್ನ ಅಂತರಂಗವು ಬೇರೆ ಕಡೆಯಲ್ಲಿ ತೊಡಗಿದೆ" ಎಂದು ಅಂದಿದ್ದ ಕಾಸೀಮನ ನುಡಿಯನ್ನು ಸೋಝುನಬಿಯು ಜ್ಞಾಪಕಕ್ಕೆ ತಂದುಕೊಂಡು, ಆ ಎರಡನೆಯವಳೆಂದರೆ-ಅಮೀನೆಯೇ ಆಗಿರಬೇಕೆಂದೂ, ಕಾಸೀಮನು ನಿನಗೆ ವೈರಿಯಾಗಿರುವಂತೆ ನಮಗೂ ಹಗೆಯಾಗಿರುತ್ತಾನಾದ್ದರಿಂದ ಯಾವ ಬಗೆಯಿಂದಾದರೂ ನಾವು ಅವನ ಸೇಡು ತೀರಿಸಿಕೊಳ್ಳಲೇಬೇಕೆಂದೂ ಆಕೆಯು ಅಂದಳು.

ಸೋಝುನಳು ಆ ಸಂಗತಿಯನ್ನು ಕುಲಸಮಳಿಗೆ ತಿಳಿಸಲು, ಆ ಕಾಮಾತುರಳು:—ಅಮೀನೆಯು ತನಗೆ ಎರಡೂ ಕಡೆಯಿಂದಲೂ

ಸವತಿಯಾಗಿರುವಳಲ್ಲವೆ? ಈಕೆಯು ಸತ್ಯಾನಾಶವಾಗದ ಹೊರತು ನನ್ನ ಬಯಕೆಯು ಈಡೇರಲಾರದು, ಎಂದಂದು, ಸೋಯಿಝುನಳಿಗೆ ಹೇಳಿ ಯಾವನೋ ಒಬ್ಬ ಮಾಂತ್ರಿಕನ ಕಡೆಯಿಂದ ಅಮೀನೆಗೆ ಮಾಟ ಮಾಡಿಸಿದಳಂತೆ.

o o o o o o o

ಸುಲ್ತಾನನು ಅತ್ತ ಕಡೆಯ ದೊಂಬೆಯನ್ನು ಮುರಿದು ಪಟ್ಟಣಕ್ಕೆ ತಿರುಗಿ ಬಂದನು. ಅವನ ಕೂಡ ಖಾನನೂ, ಅಮೀನೆಯೂ ಬಂದರೆಂದು ಬೇರೆ ಹೇಳುವ ಕಾರಣವಿಲ್ಲ. ಅಮೀನೆಯು ಬಂದ ನಂತರ ಅವಳ ದಾಸಿಯಾದ ಮೀರನಳು ಎಂದಿನಂತೆ ಕಾಸೀಮನ ಕಡೆಗೆ ಹೋಗಿ ಬರಹತ್ತಿದಳು; ಆದರೆ ಕಾಸೀಮ ಮತ್ತು ಅಮೀನೆ ಇವರ ಹಗೆಗಳಾದ ಜಾಫರ, ಸೋಯಿಝುನೆ ಹಾಗು ಕುಲಸಮ ಈ ಚಂಡಾಲತ್ರಯರು ಈಚೆಗೆ ಯಾವಾಗಲೂ ಅವರ ಮೇಲೆ ದೃಷ್ಟಿಯನ್ನಿಟ್ಟಿದ್ದರು. ಅವರು ಯಾವಾಗ ತಮ್ಮ ಕೈಗೆ ಸಿಗುವರೋ ಮತ್ತು ತಾವು ಯಾವಾಗ ಅವರ ಕೇಡು ಬಗೆಯುವೆವೋ ಎಂದು ಅವರು ಹಾತೊರೆಯುತ್ತಿದ್ದರು.

ದೈವದ ಗತಿಯು ವಿಲಕ್ಷಣವಾಗಿರುವಂತೆ, ಮನುಷ್ಯನ ಆಶೆ-ನಿರಾಶೆಗಳಾದರೂ ವಿಲಕ್ಷಣವಾಗಿರುತ್ತವೆಂದು ಅನ್ನಬೇಕಾಗುತ್ತದೆ. ಎಂಥವನೇ ಯಾಕಾಗಲೊಲ್ಲನು; ಒಂದೇ ವಿಷಯದಲ್ಲಿ ಅವನ ಮನಸ್ಸು ಸದಾ ತೊಡಗಿರಬಹುದೆಂದು ಹೇಳಲಿಕ್ಕೆ ಸಾಧ್ಯವಿಲ್ಲ. ಈ ರೂಢಿಗನುಸರಿಸಿ ಅಮೀನೆಯಲ್ಲಿ ಆ ವೃದ್ಧ ಅಬ್ದುಲ್‌ರಹಿಮಾನಖಾನನ ಪ್ರೇಮವು ಈಚೆಗೆ ತುಸ ವಿರಲವಾಗಹತ್ತಿತು; ಮತ್ತು ಅದೇ ಕಾಲಕ್ಕೆ ಕೆಲವು ವಿಪರೀತ ಸಂದರ್ಭಗಳೂ ಉದ್ಭವಿಸಿದವು. ಕುಲಸಮಳು ಅಮೀನೆಗೂ ಖಾನನಿಗೂ ಮಾಟ ಮಾಡಿಸಿ ಅವರೀರ್ವರಲ್ಲಿ ವಿತುಷ್ಟತೆಯನ್ನುಂಟು ಮಾಡಿದಳು. ಅಮೀನೆಯ ವಿಧಿಲಿಖಿತದಲ್ಲಿ ವ್ಯಭಿಚಾರ

ದೋಷವಿದೆಯೆಂದೂ, ಆಕೆಗ ಸಂತಾನ ಪ್ರಾಪ್ತಿಯಾಗಲಾರದೆಂದೂ ನಾಮಾಂಕಿತ ರಮಲಶಾಸ್ತ್ರಜ್ಞರಿಗೂ ಜ್ಯೋತಿಷ್ಕರಿಗೂ ಕುಲಸುಮಳು ಹಿಳಗಿಂದೊಳಗೆ ನಾನಾ ಬಗೆಯ ಆಮಿಷ ಹಚ್ಚಿ, ಅವರಿಂದ ಆ ಸಂಗತಿಗಳನ್ನು ಖಾನನ ಕಿವಿಯ ಮೇಲೆ ಹಾಕಿಸಿದಳಲ್ಲದೆ, ನಿಮಗೆ ಸಂತಾನ ಪಡೆಯುವ ಇಚ್ಛೆಯಿದ್ದರೆ, ನಿಮ್ಮ ಎರಡನೇ ಹೆಂಡತಿ ಯಿಂದಲೇ ನಿಮಗದಾಗುವ ಸಂಭವವಾಗಿದೆಯೆಂದೂ ಹೇಳಿಸಿದಳು. ಆಕೆಯ ಆ ಸಾಹಸವು ತೀರ ಹುಸಿ ಹೋಗಲಿಲ್ಲ; ಅಲ್ಪ-ಸ್ವಲ್ಪಾದರೂ ಸಿದ್ಧಿಸಿತು.

ಕೆಲ ದಿನಗಳಲ್ಲಿಯೇ ವೃದ್ಧ ಖಾನನು ಕುಲಸುಮಳ ಮನೆಗೆ ಹೋಗಿ-ಬರತೊಡಗಿದನು. ಮನುಷ್ಯನ ಲಕ್ಷ್ಯವು ಎರಡೂ ಕಡೆಗೆ ಎಂದೂ ಸರಿಯಾಗಿರುವದಿಲ್ಲ. ಪ್ರತಿಯೊಬ್ಬನಿಗೆ ಎರಡು ಕಣ್ಣುಗಳಿದ್ದರೂ ಅವುಗಳಲ್ಲಿ ಒಂದು ಮತ್ತೊಂದಕ್ಕಿಂತ ಸ್ವಲ್ಪಾದರೂ ಮಂದವಿದ್ದೇ ಇರುತ್ತದೆ ; ಎರಡು ಕೈಗಳಿದ್ದರೂ ಒಂದು ಮತ್ತೊಂದಕ್ಕಿಂತ ತುಸಮಟ್ಟಿಗಾದರೂ ಬಲಹೀನವಾಗಿರುತ್ತದೆ. ಈ ನ್ಯಾಯಕ್ಕನುಸರಿಸಿ ಖಾನನ ಚಿತ್ತವು ಕುಲಸುಮಳ ಕಡೆಗೆ ತಿರುಗಿದಂದಿನಿಂದ, ಅವನು ಅಮೀನೆಯ ಮನೆಗೆ ಹೋಗಿ-ಬರುವದು ಕಡಿಮೆಯಾಯಿತು. ಮೊದಲೇ ಮನಸ್ಸಿಲ್ಲದ ವೃದ್ಧಪತಿಯನ್ನು ತಂದೆಯ ಒತ್ತಾಯದಿಂದ ವರಿಸಿ ತೇಜೋಹೀನಳಾಗುತ್ತ ನಡೆದಿದ್ದ ಆ ತರುಣ ಅಮೀನೆಯು, ಖಾನನು ತನ್ನ ಸವತಿಯ ಮನೆಗೆ ಹೋಗಹತ್ತಿದ್ದನ್ನು ಕೇಳಿ ಮತ್ತಿಷ್ಟು ಕೊರಗಹತ್ತಿದಳು ಮನಸ್ಸಿಗೇ ಆನಂದವಿಲ್ಲದ ಬಳಿಕ ಶರೀರದ ಪ್ರಫುಲ್ಲತೆಯು ಉಳಿಯುವದೆಂತು? ಹೀಗೆ ಅಮೀನೆಯ ಮುಖದ ಮೇಲಿನ ಮೋಹಕ ಕಳೆಯು ಕುಂದಹತ್ತಲು, ಖಾನನು ಆಕೆಯ ಕಡೆಗೆ ಇಣಿಕಿ ಕೂಡ ನೋಡದಾದನು

ತನ್ನ ಪತಿಯು ತನ್ನ ತಳುಕಿನಲ್ಲಿ ಸಿಕ್ಕ ಬಳಿಕ ಕುಲಸುಮ

ಳಂಥ ವ್ರಾತ್ಯ ಹೆಂಗಸು ಆ ಪ್ರಸಂಗವನ್ನು ವ್ಯರ್ಥವಾಗಿ ಕಳಕೊಳ್ಳುವಳೇ? ಅವಳು ನಾನಾ ಬಗೆಯಿಂದ ಆತನ ಕಿವಿ ಕಚ್ಚಾಡಿ ಅಮೀನೆಯ ವಿಷಯವಾಗಿ ಖಾನನ ಅಂತರಂಗದಲ್ಲಿ ವಿಷವನ್ನು ಕಲಿಸಿದಳು. ಆದರಿಂದ ಕಲುಷಚಿತ್ತನಾದ ವೃದ್ಧ ಖಾನನು ಎಂದಾದರೊಮ್ಮೆ ಅಮೀನೆಯ ಬಳಿಗೆ ಹೋದಾಗ ಆಕೆಯೊಡನೆ ನಾಲ್ಕು ಹಿತವಚನಗಳನ್ನು ಆಡುವದೊತ್ತಟ್ಟಿಗೇ ಉಳಿದು, ನಾನಾ ಬಗೆಯ ಪರುಷ ನುಡಿಗಳಿಂದ ಅವಳ ಕೋಮಲ ಮನಸ್ಸಿಗೆ ಆಘಾತ ಮಾಡಿ ಬರುತ್ತಿದ್ದನು. ಬರಬರುತ್ತ ಅಮೀನೆಯ ಕೃಶತೆಯು ಹೆಚ್ಚಾಗಿ, ಅವಳಿಗೆ ಹೃದಯರೋಗವೇ ಗಂಟು ಬಿದ್ದಿತು. ಅವಳಿಗೆ ಸಮಾಧಾನದ ನಾಲ್ಕು ಮಾತುಗಳನ್ನು ಹೇಳುವವಳೆಂದರೆ, ಮೀರನಳೊಬ್ಬಳೇ. ಇನ್ನು ಇಲ್ಲಿ ಇರುವದರಿಂದೇನೂ ಪ್ರಯೋಜನವಿಲ್ಲೆಂದೂ, ಖಾನನು ಸಮ್ಮತಿಸಿದರೆ ಆತನ ಸಮ್ಮತಿಯಿಂದಾಗಲಿ, ಆತನು ಅಲ್ಲಗಳೆದರೆ ಕಾಸೀಮನ ಸಹಾಯದಿಂದಾಗಲಿ ತಾವು ಹೈದರಾಬಾದಿಗೆ ಹೋಗಬೇಕೆಂದೂ ಮೀರನಳು ಅಮೀನೆಯ ಎದುರಿಗೆ ಮಾತು ತೆಗೆದಳು. ಆಕೆಯು ಮೊದಮೊದಲು ಅದಕ್ಕೆ ತೀರ ವಿರುದ್ಧಳಾಗಿದ್ದಳು; ಆದರೆ ಬರಬರುತ್ತ ಖಾನನು ಸವತಿಯ ಚಾಡಿಯನ್ನು ಕೇಳಿ ತನ್ನನ್ನು ಹೆಚ್ಚೆಚ್ಚು ಹಿಂಸಿಸಹತ್ತಿದ ಬಳಿಕ, ಅನಿವಾರ್ಹವೆಂದು ಮೀರನಳ ಬೇತಿಗೆ ಆಕೆಯೂ ಸಮ್ಮತಿಸಿದಳು.

ಖಾನ ಹಾಗು ಅಮೀನೆ ಇವರೀರ್ವರಲ್ಲಿ ನಡೆದಿದ್ದ ಮನಸ್ತಾಪಗಳ ಸಂಗತಿಯು ಕಾಸೀಮನಿಗೂ ತಿಳಿಯಿತು. ಈ ಸ್ಥಿತಿಯಲ್ಲಿ ಅವಳನ್ನು ಇಲ್ಲಿ ಇರಗೊಡುವದಕ್ಕಿಂತ ಅವಳ ತವರೂರಿಗೆ ಕಳಿಸಿ ಬಿಡುವದೇ ವಿಹಿತವೆಂದು ಅವನಿಗೂ ಅನಿಸಿತು. ಆದರಿಂದ ಅವನು ಮೀರನಳ ಮಾತಿಗೆ ಒಪ್ಪಿದನು. ಖಾನನು ಮಾತ್ರ ಹೆಂಡತಿಯನ್ನು ತವರು ಮನೆಗೆ ಕಳಿಸಲಿಕ್ಕೆ ಒಪ್ಪಲಿಲ್ಲ ಆದ್ದರಿಂದ ಅವನು ಊರು

ಬಿಟ್ಟು ಹೋದಾಗ ಅಮೀನೆಯನ್ನು ಕಳಿಸುವ ಗುಪ್ತಾಲೋಚನೆಯು ಮಾಡಲ್ಪಟ್ಟಿತು; ಅದಕ್ಕಾಗಿ ಒಂದು ದಿನವೂ ಗೊತ್ತು ಮಾಡಲ್ಪಟ್ಟಿತು. ಆ ದಿನ ಕತ್ತಲೆಯಾದ ಬಳಿಕ ಅಮೀನೆಯು ಕಾಸೀಮನ ಮನೆಗೆ ಬರಬೇಕು, ಅಷ್ಟರಲ್ಲಿಯೊಂದು ಮೇಣೆಯು ಸಿದ್ಧವಾಗಿರಬೇಕು ಅವಳು ಬಂದು ಆ ಮೇಣೆಯಲ್ಲಿ ಕುಳಿತೊಡನೆಯೇ ಮೀರನಳು ನಾಲ್ಕು ಜನ ವಿಶ್ವಾಸಿಗ ಜನರೊಡನೆ ಹೈದರಾಬಾದಿಗೆ ಹೊರಡಬೇಕು, ಎಂದು ಗೊತ್ತಾಯಿತು.

ಈ ಹಂಚಿಕೆಯನ್ನು ಆ ತ್ರಿವರ್ಗರು ಒಳ್ಳೇ ಗುಪ್ತವಾಗಿ ಮಾಡಿದರು; ಆದರೆ ತಮ್ಮ ಈ ಬೇತು ನಡೆದಿರಲಿಕ್ಕೆ ತಮ್ಮ ಮೇಲೆ ಯಾರಾದರೂ ಪಾಳತಿಯಿಟ್ಟಿರುವರೇನೆಂಬದರ ಕಡೆಗೆ ಅವರು ಲಕ್ಷ್ಯ ಗೊಡಲಿಲ್ಲ. ಸೋಝುನಬಿಯು ಅವರ ಬೇತನ್ನೆಲ್ಲ ಕಂಡುಕೊಂಡು, ಅದನ್ನು ಜಾಫರನಿಗೂ ಕುಲಸುಮಳಿಗೂ ತಿಳಿಸಿದಳು ಕಾಸೀಮನನ್ನು ಯಾವಾಗ ರಸಾತಳಕ್ಕೆ ಮೆಟ್ಟುವೆನೋ ಎಂದು ಜಾಫರನೂ, ಅಮೀನೆಯ ಮುಸುಡಿಗೆ ಕಲಂಕಹಚ್ಚಿ ತನ್ನ ದಾರಿಯೊಳಗಿನ ಆ ಮುಳ್ಳನ್ನು ಯಾವಾಗ ಕಿತ್ತೊಗೆಯುವೆನೋ ಎಂದು ಕುಲಸುಮಳೂ ದಾರಿ ಕಾಯುತಲೇ ಇದ್ದರು. ಆದರಿಂದ ಅವರೀರ್ವರಿಗೂ ಆ ಸಂಗತಿಯನ್ನು ಕೇಳಿ ಪರಮಾಹ್ಲಾದವಾಯಿತೆಂದು ಬೇರೆ ಹೇಳಲವಶ್ಯವಿಲ್ಲ.

ಜಾಫರನು ಇತ್ತೀಚೆಗೆ ಖಾನನ ಮನೆಗೆ ಹೆಚ್ಚಾಗಿ ಬರುತ್ತಿರಲಿಲ್ಲ; ಆದರೂ ಈ ಸುದ್ದಿ ಬಡಿದ ಬಳಿಕ ಅವನು ಒಂದು ದಿನ ಖಾನನ ಬಳಿಗೆ ಬೇಕಂತ ಹೋಗಿ, ಕಾಸೀಮನು ಅಮೀನೆಯನ್ನು ಒಡಿಸಿಕೊಂಡೊಯ್ಯುವನೆಂಬ ಸಂಗತಿಯನ್ನು ಚನ್ನಾಗಿ ಉಪ್ಪು-ಕಾರ ಹಚ್ಚಿ ತಿಳಿಸಿದನು. ಮೊದಮೊದಲು ಖಾನನಿಗೆ ಆ ನೀಚನ ಮಾತಿನ ಮೇಲೆ ಭರವಸೆ ಕೂರಲಿಲ್ಲ. "ಕಣ್ಣು ಮುಟ್ಟಿ ನೋಡಿದ ಬಳಿಕಂತೂ ನನ್ನ ಮಾತಿಗೆ ಅಲ್ಲಗಳೆಯುವದಿಲ್ಲವಷ್ಟೇ?" ಎಂದಂದು,

ಜಾಫರನು ಆತನನ್ನು ಆ ಗೊತ್ತಾದ ದಿವಸ ಸಂಜೆಯ ಮುಂದೆ ಕಾಸೀಮನ ಮನೆಯ ಹಿತ್ತಲಿಗೆ ಕರೆತಂದು ಕುಳ್ಳಿರಿಸಿದನು.

ಸಂಜೆಯಾಗಿ ಕತ್ತಲು ಬೀಳಹತ್ತುತ್ತಲೇ ಜಾಫರನು ಖಾನನಿಗೆ ತಿಳಿಸಿದಂತೆ ಒಂದು ಮೇಣೆಯು ಕಾಸೀಮನ ಬಾಗಿಲಿಗೆ ಬಂದಿತು. ತುಸಹೊತ್ತಿನಲ್ಲೇ ತುಂಬಾ ಬುರುಕೆ ಹಾಕಿಕೊಂಡಿದ್ದ ಅಮೀನೆಯೂ ಅಲ್ಲಿಗೆ ಬಂದಳು. ಅದನ್ನೆಲ್ಲ ನೋಡಿ ವೃದ್ಧ ಖಾನನು ಕ್ರೋಧಸಂತಪ್ತನಾದನು ತನ್ನ ಕೈಗತ್ತಿಯ ಒಂದೇ ಏಟಿನಿಂದ ಅವರಿಬ್ಬರನ್ನೂ ತುಂಡರಿಸಬೇಕೆಂದು ಅವನು ಅಲ್ಲಿಯೇ ಹೊಂಚು ಹಾಕಿ ಕುಳಿತನು. ಅಮೀನೆಯು ಇನ್ನು ಮೇಣೆಯನ್ನೇರತಕ್ಕವಳು; ಅಷ್ಟರಲ್ಲಿ ಕಾಸೀಮನು ಅವಳ ಕೈ ಹಿಡಿದು ಪ್ರೇಮಭರದಿಂದ:-ಹೋಗು; ನಿನ್ನ ತವರು ಮನೆಗಾದರೂ ಹೋಗಿ ಸುಖದಿಂದಿರು. ಮತ್ತೆ ಯಾವಾಗ ಯೋಗ ವೊದಗಿ ಬರುವದೋ, ಆಗ ಭೇಟಿಯಾಗುವೆನು, ಎಂದು ಮೆಲ್ಲನೆ ನುಡಿದನು. ಅದೇ ಕಾಲಕ್ಕೆ ಜಾಫರನು ಖಾನನ ತೊಡೆ ಚಿವುಟ-ಚಿವುಟ, ಅವನನ್ನು ಹೆಚ್ಚಾಗಿ ರೇಗಿಗೆಬ್ಬಿಸುತ್ತಿದ್ದನು; ಹಾಗು ಬಾಯಿಯಿಂದ:—ಖಾನಸಾಹೇಬ, ನೋಡಿದಿರಾ ನಿಮ್ಮ ಈ ಕಾಸೀಮನನ್ನು! ಈತನು ನಿಮಗೊಳ್ಳೇ ಪ್ರೀತಿಪಾತ್ರನಾಗಿರುವನಲ್ಲವೆ? ಆಗದೇನು ಮಾಡಿಯಾನು? ನಿಮ್ಮ ತರುಣ ಹೆಂಡತಿಯ ಪ್ರಿಯಕರನಾದವನು, ಮುದಿಹದ್ದಾಗಿರುವ ನಿಮ್ಮ ಪ್ರೀತಿಗೆ ಪಾತ್ರನಾಗದೆ ಇದ್ದಾನೆಯೇ? ಆ ನಿಮ್ಮ ತರುಣಿಯನ್ನು ಈ ನಿಮ್ಮ ಪ್ರಿಯಕರನು ಈಗ ಓಡಿಸಿಕೊಂಡೊಯ್ಯುತ್ತಿರುವನಲ್ಲ? ನೀವು ಹೀಗೆ ನೋಡುತ್ತ ಇಲ್ಲಿಯೇ ಕೂಡ್ರುವವರೇನು?

ಈ ಪ್ರಕಾರದ ನುಡಿಗಳನ್ನು ಆ ನೀಚ ಜಾಫರನು ಉಚ್ಚರಿಸಿದ ಕೂಡಲೆ ವ್ಯವಹಾರಜ್ಞಾನ ರಹಿತನಾದ ಆ ಖಾನನು ಸಿಟ್ಟಿನಿಂದ ತಪ್ತನಾದನು. ಆತನು ಆವೇಶಭರದಿಂದ ಮುಂದೆ ಹೋಗಿ, ತನ್ನ

ಕೈಖಡ್ಗದ ಹಿಂದೇ ಏಟನ್ನು ಅವರೀರ್ವರ ಮೇಲೆಯೂ ಹಾಕಿದನು; ಆದರೆ ಅದು ಖಾನನ ಮನಸ್ಸಿನಂತೆ ಇಬ್ಬರ ಮೇಲೆಯೂ ಬೀಳಲಿಲ್ಲ. ಅಮೀನೆಯ ಕಾಲಿಗೆ ಬಡಿದುದರಿಂದ, ಅವಳು ಕೂಡಲೆ ಮೂರ್ಛಿತ ಳಾಗಿ ಬಿದ್ದಳು. ಸುತ್ತಲೂ ಕತ್ತಲು ಮುಸುಕಿದ್ದರಿಂದ, ಖಾನನು ಹಾಗೆ ಆಕಸ್ಮಿಕವಾಗಿ ಅಲ್ಲಿಗೆ ಬಂದದ್ದು ನೋಡಲು ಯಾರಿಗೂ ಗೋಚರವಾಗಲಿಲ್ಲ. ಅಮೀನೆಯೊಬ್ಬಳಿಗೇ ತನ್ನ ಖಡ್ಗದ ಏಟು ಬಿದ್ದದರಿಂದ ಖಾನನ ಸಂತಾಪವು ಶಾಂತವಾಗದೆ, ಆತನು ಮತ್ತ ರೊಚ್ಚಿಗೆದ್ದು, ಮತ್ತೊಂದು ಏಟನ್ನು ಕಾಸೀಮನಿಗೆ ಹಾಕುವದ ಕ್ಕಾಗಿ ಕೈಯೆತ್ತಿದನು; ಆದರೆ ಕಾಸೀಮನು ನಡುವೇ ಆತನ ಕೈ ಹಿಡಿದು ಗಟ್ಟಿಯಾಗಿ:—ಈಕೆಯನ್ನು ಸವಿಸಿ-ಸವಿಸಿ ಕೊಲ್ಲುವದರ ಲ್ಲಿಯೇ ನಿಮಗೆ ಸಂತೋಷವೆನಿಸುತ್ತದಲ್ಲವೆ? ಈ ಪ್ರಕಾರವಾಗಿ ಹರಿಗಡಿಯುವಂಥ ಅಪರಾಧವು ಇವಳಿಂದ ಅದಾವದುಂಟಾಗಿದೆ? ಜೀವಕ್ಕೆ ತುಸ ಆರಾಮವುಂಟಾಗುವದಕ್ಕಾಗಿ ತನ್ನ ತವರುಮನೆಗೆ ಹೊರಡುವದೇ ಇವಳ ಮಹಾಪರಾಧವೋ, ಅಥವಾ ಯಾರ ನಿಷ್ಕಾ ಳಜಿತನದ ಮೂಲಕ ಇವಳು ಇಷ್ಟು ನವೆಯ ಹತ್ತಿರುವಳೋ ಅವರ ತಪ್ಪೋ? ಎಂದು ಗರ್ಜಿಸಲು, ಖಾನನು ತೆಪ್ಪಗಾದನು. ಆಗ ಕಾಸೀಮನು ಲಗುಬಗೆಯಿಂದ ಅಮೀನೆಯನ್ನುಪಚರಿಸಹತ್ತಿದನು. ಅಷ್ಟರಲ್ಲಿ ಏರನಳು ಅವಳ ಕಣ್ಣಿಗೆ ನೀರು ಹಚ್ಚಿದ್ದಳು. ಝುಲ ಫೀಕರನು ಅವಳ ಗಾಯವನ್ನು ತೊಳೆದು ಕಟ್ಟಲಾರಂಭಿಸಿದ್ದನು. ಆದನ್ನೆಲ್ಲ ನೋಡಿ ಖಾನನ ಕಣ್ಣುಗಳು ಚನ್ನಾಗಿ ತೆರೆದವು. ತನ್ನ ಮನಸ್ಸಿನಲ್ಲಿ ಬಂದ ದುಷ್ಟ ಸಂಶಯವು ಕೇವಲ ಸಂಶಯವೇ ಹೊ- ರತು, ನಿಜಾಂಶವೇನೂ ಇಲ್ಲೆಂದು ಅವನ ಮನವರಿಕೆಯಾಯಿತು. ಆಗ ಆತನು ತನ್ನನ್ನು ಈ ಪರಿ ರೇಗಿಗೆಬ್ಬಿಸಿದ್ದ ಕುಟಿಲ ಜಾಫರನನ್ನು ಹರಿಗಡಿಯಬೇಕೆಂದು ಯೋಚಿಸಿ:—ಯಾ ಅಲ್ಲಾ! ಯಾ ರಹೀಮ!

ಕಿದರ ಹೈ ಓ ಸೂವ್ವರ, ಬೇವಕೂಫ, ರಂಡೀಕೆ ಅವಲಾದ! ಎಂದೆ ನ್ನುತ್ತ, ಜಾಫರನ ಬೆನ್ನು ಹತ್ತಿ ಓಡಲಾರಂಭಿಸಿದನು.

ಅಮೀನೆಗೆ ಹೆಚ್ಚಾಗಿ ಗಾಯವಾದದ್ದರಿಂದ ಅವಳು ಕೆಲ ದಿವ ಗಳ ವರೆಗೆ ಒತ್ತಟ್ಟಿಗಿದ್ದು ಉಪಚಾರ ಮಾಡಿಸಿಕೊಳ್ಳಬೇಕಾಗಿತ್ತು. ಅದಕ್ಕಾಗಿ ಇನ್ನು ಕೆಲ ದಿನ ಇಲ್ಲಿಯೇ ಇದ್ದು ಔಷಧೋಪಚಾರ ಮಾಡಿ, ಅವಳಿಗೆ ತುಸ ವಾಸಿಯಾದ ನಂತರ ಹೈದರಾಬಾದಿಗೆ ಕರ ಕೊಂಡು ಹೋಗಿರೆಂದು ಕಾಸೀಮನು ಮೀರನಳಿಗೂ ಝುಲಫೀಕರ ನಿಗೂ ಹೇಳಿದನು; ಆದರೆ ಇನ್ನು ಇಲ್ಲಿರುವದು ಸರ್ವಥಾ ತಕ್ಕದ್ದಲ್ಲ ವೆಂದೂ, ಇಲ್ಲಿಂದ ಇಂದೇ ಹೊರಟು, ದಾರಿಯಲ್ಲಿಲ್ಲಾದರೂ ಗುಪ್ತಸ್ಥಳದಲ್ಲಿದ್ದು, ತುಸ ನೆಟ್ಟಗಾದ ಮೇಲೆ ಮುಂದೆ ತೆರಳುವೆ ವೆಂದೂ ಹೇಳಿ, ಕಾಸೀಮನ ಅನುಮತಿ ಪಡೆದು, ಆಗಲೆ ಅವರು ತಮ್ಮ ಬೋಪಿಗಳಿಂದ ಅಮೀನೆಯ ಮೇಣೆಯನ್ನು ಹೊರಿಸಿಕೊಂಡು ಅಲ್ಲಿಂದ ಹೈದರಾಬಾದದ ಕಡೆಗೆ ಸಾಗಿದರು ಹೀಗೆ ಕಾಲಗತಿ ಯಿಂದ ಕಾಸೀಮನಿಗೂ ಅಮೀನೆಗೂ ಹೊಸ ಸಂಕಟಗಳುಂಟಾಗಿ ಅವರೀರ್ವರಲ್ಲಿ ವಿರಹವುಂಟಾಯಿತು!

———0———

## ಟೀಪುವಿನ ವಿಚಿತ್ರ ಸ್ವಪ್ನ.

ತ್ರಾವಣಕೋರ ಯುದ್ಧದ ನಂತರ ಟೀಪುವಿನ ರಾಜ್ಯಕ್ಕೆ ಅನೇಕ ಕಡೆಯಿಂದ ಉಪಟಳವಾಗಹತ್ತಿತು. ಒಂದು ಕಡೆಯಿಂದ ಇಂಗ್ಲಿ ಷರು ನುಗ್ಗಹತ್ತಲು, ಟೀಪುವು ಒಳ್ಳೇ ರಭಸದಿಂದ ಹೋಗಿ ಅವರ ದೊಂಬೆ ಮುರಿದು ಬರುತ್ತಿರುವಷ್ಟರಲ್ಲಿ, ಬೇರೊಂದು ಕಡೆಯಿಂದ ನಿಜಾಮನೂ, ಇನ್ನೊಂದು ಕಡೆಯಿಂದ ಮರಾಟರೂ ಅವನ ರಾಜ್ಯ ದಲ್ಲಿ ನುಗ್ಗಿ, ಅದನ್ನು ಸೆಳಕೊಳ್ಳತೊಡಗಿದ್ದರು. ಹೀಗೆ ತನ್ನ ಮೇಲೆ ಮೂವರು ಶತ್ರುಗಳು ಬೇರೆ ಬೇರೆ ಕಡೆಯಿಂದ ಸಂಧಿ ಸಾಧಿಸಿ ಏರಿ

ಒರಹತ್ತಿದ್ದನ್ನು ಕಂಡು ಟೀಪುವು ಹಿಮ್ಮೊಮ್ಮೆ ಕಡು ಚಿಂತೆಗೊ ಳಗಾಗುತ್ತಿದ್ದನು; ಆದರೆ ಆತನು ಹುಂಬನೂ, ಧರ್ಮನಿಷ್ಠನೂ ಮಹಾ ಕ್ರೂರನೂ ಆಗಿದ್ದಂತೆ, ಸ್ವಪ್ನಸೃಷ್ಟಿಗೆ ಹೆಚ್ಚು ಮಹತ್ವ ಕೊಡುವವನೂ ಆದ್ದರಿಂದ, ಎಂಥ ಚಿಂತಾಜನಕಪ್ರಸಂಗವೊದಗಿದಾ ಗಲೂ ಇವನು ಆ ಸ್ಥಿತಿಯಲ್ಲಿ ಬಹಳ ಹೊತ್ತು ಆಲೋಚಿಸುತ್ತ ಕೂರುತ್ತಿರಲಿಲ್ಲ. ಅಂದಿನ ರಾತ್ರಿಯು ತನ್ನ ಕನಸಿನಲ್ಲಿ ಕಂಡ ಸಂಗತಿ ಗಳ ಕಡೆಗೇ ಹೆಚ್ಚು ಮಹತ್ವ ಕೊಟ್ಟು ಆತ್ಮಸ್ತುತಿಯಲ್ಲಿ ಮಗ್ನನಾಗಿ ಬಿಡುತ್ತಿದ್ದನಾದ್ದರಿಂದ, ಅವನು ಸದಾ ಗಂಭೀರನಾಗಿರುತ್ತಿದ್ದನು.

ಹೀಗಿರಲು, ಒಂದು ದಿನ ಒಬ್ಬ ಸಾಂಡಣೀಸ್ವಾರನು ಒಂದು ಮಹತ್ವದ ಪತ್ರದ ಫೈಲಿಯನ್ನು ತಂದು ಸುಲ್ತಾನನಿಗೆ ಒಪ್ಪಿಸಿದನು. ಆಗ ಸುಲ್ತಾನನು ಮೊದಲಿನ ರಾತ್ರಿಯಲ್ಲಿ ತನಗೆ ಕಂಡ ಸ್ವಪ್ನ ವನ್ನು ಒಳ್ಳೇ ಆಥ್ಯತೆಯಿಂದ ಸಭಿಕರಿಗೆ ನಿವೇದಿಸುತ್ತ ಕುಳಿತಿದ್ದನು. ಆ ದಿನದ ಸ್ವಪ್ನದಲ್ಲಿ ಪ್ರತ್ಯಕ್ಷ ಅಲ್ಲಾನು ಆತನೆಡೆಗೆ ಬಂದು:— ಎಲೈ ಸುಲ್ತಾನನೇ, ನಿನಗೆ ಹಸಿವೆಯಾಗಿದೆಯುಷ್ಟೇ? ಎಂದು ಪ್ರಶ್ನೆ ಮಾಡಿದ್ದನು. ಅದಕ್ಕೆ ಸುಲ್ತಾನನು ಅಹುದೆಂದು ಒಪ್ಪಿ:—ಅಲ್ಲಾ, ನನಗೆ ಅಂತಿಂಥ ಕೀಳುಬಗೆಯ ಅನ್ನವು ಬೇಕಾಗಿರುವದಿಲ್ಲ. ಮಹ ಮ್ಮದ ಪೈಗಂಬರರ ಧರ್ಮವೃದ್ಧಿಗಾಗಿ ಯಾವ ನಮ್ಮ ಧರ್ಮನಿಷ್ಠರ ಪ್ರಾಣಗಳು ಕಾಫರರಿಂದ ನಾಶವಾದವೋ, ಅದರ ಸೇಡು ತೀರಿಸಿ ಕೊಳ್ಳುವಂಥ ಅನ್ನವನ್ನು ನೀನು ನನಗೆ ಕೊಟ್ಟರೆ ಕೊಡು; ಇಲ್ಲದಿದ್ದರೆ ಅಂಥ ಆಹಾರವನ್ನು ನನ್ನ ಮುಂಗೈ ಕಸುವಿನಿಂದ ನಾನೇ ಸಂಪಾದಿ ಸುವೆನೆಂಬ ಭರವಸೆಯು ನನಗಿದೆ; ಎಂದು ಹೇಳಿದನಂತೆ! ಕೂಡಲೆ ಅಲ್ಲಾ ದೇವರ ಸೂಚನೆಯು ಮೇರೆಗೆ ಆತನ ಸೇವಕರು ಅವನೆದು ರಿಗೆ ಉತ್ತಮ ಖರ್ಜೂರದ ಮೂರು ತಾಟುಗಳನ್ನು ತಂದಿಟ್ಟರು. ಆಗ ಆ ಅಲ್ಲಾನು ಪ್ರೇಮಲವಾಣಿಯಿಂದ:—ವತ್ಸಾ, ಇಗೋ ನಿನಗೆ

ತಕ್ಕದ್ದಾದ ಆಹಾರವನ್ನೇ ಈ ನನ್ನ ಸೇವಕರು ನಿನ್ನ ಮುಂದಿಟ್ಟಿರು ತ್ತಾರೆ. ಈ ಆಹಾರವಾವುದೆಂಬದು ನಿನ್ನಂಥ ಮಹಾ ಚಾಣಾಕ್ಷ ನಿಗೆ ಬಿಚ್ಚಿ ಹೇಳುವ ಕಾರಣವಿಲ್ಲ, ಎಂದು ಅನುಜ್ಞೆಗೈದನು; ಹಾಗು ಪರಕ್ಷಣದಲ್ಲಿಯೇ ಆ ಸ್ವಪ್ನವು ಬಯಲಾಯಿತು!

ಸಭಿಕರೇ, ನಿಮಗೆ ಈ ಸ್ವಪ್ನದ ಅರ್ಥವು ಗೊತ್ತಾಯಿತೇನು? ಛೇ! ನಿಮಗೆಂದಿಗೂ ಇದರ ಅರ್ಥವು ತಿಳಿಯಲಾರದು ನಾನೇ ಹೇಳುತ್ತೇನೆ, ಕೇಳಿರಿ: "ಅಲ್ಲಾನು ನನಗೆ ಕೊಟ್ಟ ಆ ಮೂರು ಖಾದ್ಯದ ತಾಟುಗಳೆಂದರೆ ಆ ನನ್ನ ಮೂವರು ಹಗೆಗಳಾದ ಇಂಗ್ಲಿಷ, ನಿಜಾಮ ಹಾಗು ಮರಾಟರು. ಅಲ್ಲಾನ ಕೃಪೆಯಿಂದ ನಾನು ಆ ಮೂವರ ಚಂಡುಗಳನ್ನೂ ಮುರಿದು ಬಿಡುವೆನೆಂಬದಕ್ಕೆ ಸಂಶಯವೇ ಇಲ್ಲ" ಆಗ ಸಭಿಕರಲ್ಲಿಯ ತಲೆ ಬೆಳ್ಳಗಾದ ಕೆಲ ಮುತ್ಸದ್ದಿಗಳು ಟೀಪುವಿನ ವಿಚಿತ್ರ ಸ್ವಪ್ನವನ್ನು ಕೇಳಿ ನಕ್ಕರು. ಇನ್ನುಳಿದ ಬಹು ಸಂಖ್ಯಾಕರಾದ 'ಹೌದ್ದೇವರೂ' ಎಂದೆನ್ನುವ ಸ್ತುತಿಪಾಠಕರು ವಾ-ಹವ್ವಾ-ವಾಹವ್ವಾ! ಇನ್ನು ನಮಗೆ ಯಾರ ಅಂಜಿಕೆಯೂ ಉಳಿಯ ಲಿಲ್ಲ, ಎಂದಂದು ನಕ್ಕರು.

"ಏನಂದಿರಿ, ಹೆದರಿಕೆಯೇ? ಇಂಥ ಅಂಜುಬುರುಕತನದ ಮಾತುಗಳನ್ನು ಈ ಮೈಸೂರ ಹುಲಿಯ ಮುಂದೆ ತೆಗೆಯುವಿರಾ? ಅದರ ಹೆಸರನ್ನೇ ಮರೆತು ಬಿಡಿರಿ. ಇನ್ನು ತುಸ ದಿನಗಳಲ್ಲಿ ಅಫ ಗಾಣದ ಅಮೀರನೂ, ನೇಪಾಳ-ಭೂತಾನದ ಅರಸರೂ, ಜಯಪೂರ-ಜೋಧಪುರದ ರಜಪೂತರೂ ನನಗೆ ಬಂದು ಕೂಡುವರು. ಆ ಬಳಿಕ ಈ ಮೂವರ ಹಲ್ಲು ಮುರಿಯಲಿಕ್ಕೆ ಅದೆಷ್ಟು ಹೊತ್ತು ಹಿಡಿಯುವದು?" ಹೀಗೆಂದು, ಅವನು ಸಾಂಡಣೀಸ್ವಾರನು ಆಗಲೇ ತಂದು ಕೊಟ್ಟಿದ್ದ ಆ ಥೈಲಿಯನ್ನು ಹಳ್ಳೇ ಗರ್ವದಿಂದ ಹಿಡೆದನು. ಅದರಲ್ಲಿ ತನ್ನವರ ಕಡೆಯ ಯಾವದೊಂದು ವಿಜಯವಾರ್ತೆಯೇ ಇರಬಹುದೆಂದು ಆ

ಸುಲ್ತಾನನ ಕಲ್ಪನೆಯಾಗಿತ್ತು; ಆದರೆ ಆ ಲಕ್ಕೋಟಿಯನ್ನು ಓದುತ್ತ ಹೋದಹತ್ತಿದಂತೆ ಅವನ ಮುಖಲಕ್ಷಣವು ವ್ಯಸ್ತವಾಯಿತು ಅವನು ಕ್ರೋಧಸಂತಪ್ತನಾದನು. ಆಗ ಅವನಿಂದ ಸುಮ್ಮನಿರುವದಾಗದ್ದರಿಂದ:— ಯಾ ಫಕ್ತೆಹೋ, ಯಾ ಅಲ್ಲಾ ಮುಸೂಫ, ಸೂವ್ವರ, ರಂಡಿಕೇ ಅವಲಾದ! ಆ ಲವಡೀಮಗನು ಸೈಯ್ಯದ ಸಾಹೇಬನಲ್ಲ; ಸೈಯ್ಯದ ಬೀಬಿಯಾಗಿರುತ್ತಾನೆ. ಈತನನ್ನು ಆ ಬದಮಾಷ್ ಇಂಗ್ಲಿಷರು ಹೊಡೆದೋಡಿಸಿದ್ದರಿಂದ, ಈತನು ತಿರುಗಿ ಬರಹತ್ತಿದ್ದಾನಂತೆ. ಇತ್ತಲಿಂದ ಸಹಾಯಕ ದಂಡು ಕಳಿಸಿದರೆ ಮಾತ್ರ ಅವರ ಸಮಾಚಾರ ತಕ್ಕೊಳ್ಳುವನಂತೆ. ಥೂ ಅವನ ಮುಸುಡಿಗೆ........ನಾನು ಇಲ್ಲಿಂದ ಒಬ್ಬ ಸಿಪಾಯಿಯನ್ನಾಗಲಿ, ಒಂದು ಬಂದೂಕನ್ನಾಗಲಿ ಆತನೆಡೆಗೆ ಕಳಿಸಲಿಚ್ಛಿಸುವದಿಲ್ಲ ಹೋಗಲಿ ............ಮಗನು ಆ ಕಾಫರರಿಂದ ಸತ್ತು ಹೋಗಲಿ ಸಭಿಕರೇ, ಈತನಿಗೆ ಹೀಗೆ ಮಾಡುವದೇ ತಕ್ಕದ್ದಲ್ಲವೆ? ಎಂದು ನುಡಿದನು.

ಆಗ ಒಬ್ಬ ಮುತ್ಸದ್ದಿಯು:— ಖಾವಿಂದ, ಸೈಯ್ಯದಖಾನರ ಸಂಗತಿಯು ಸುಲ್ತಾನಸಾಹೇಬರಿಗೆ ಸಿಟ್ಟು ಬರುವಂತಹದೆಂಬದಕ್ಕೆ ಸಂದೇಹವಿಲ್ಲ; ಆದರೆ ಆ ಕಾಫರರ ಸೈನ್ಯವು ಇವರ ದಂಡಿಗಿಂತ ಅತಿಶಯವಾಗಿದ್ದರೆ ಇವರಾದರೂ ಏನು ಮಾಡಬೇಕು? ಸೈಯ್ಯದ ಸಾಹೇಬರು ಅಂತಿಂಥ ಮನುಷ್ಯರಲ್ಲ ಅವರಿಂದ ರಣಹೇಡಿಯಂತೆ ಎಂದೂ ವರ್ತನವಾಗದು. ಪ್ರಸಂಗವೇ ಬಂದ ಮೇಲೆ ಯಾರೇನು ಮಾಡುವದು? ಆದ್ದರಿಂದ ಸುಲ್ತಾನಸಾಹೇಬರು ದಯವಿಟ್ಟು, ಅವರ ಸಹಾಯಕ್ಕಾಗಿ ಯೋಗ್ಯ ಕುಮುಕನ್ನು ಕಳಿಸಬೇಕು, ಎಂದು ಹೇಳಲು, ಯಾಕೋ ಆತನ ಮಾತು ಆಗ ಸುಲ್ತಾನನಿಗೆ ಸಮ್ಮತವಾಗಿ ಅವನು ಅತ್ತ ತನ್ನ ಬೇರೆ ದಂಡನ್ನು ಕಳಿಸಿದನು.

ಹೀಗೆ ಸುಲ್ತಾನನು ಮಹಾ ಗರ್ವಿಯೂ, ಹಟಮಾರಿಯೂ,

ಸ್ವಪ್ನಸೃಷ್ಟಿಗೆ ಮಹತ್ವ ಕೊಟ್ಟು ಆತ್ಮಸ್ತುತಿಯಲ್ಲಿ ಅನುರಕ್ತನಾಗು
ವವನೂ ಆಗಿದ್ದರಿಂದ, ಅವನ ಲಹರಿಯು ಯಾವ ಕಾಲಕ್ಕೆ ಎತ್ತ
ಹೊರಳೀತೆಂಬದು ಯಾರಿಗೂ ತಿಳಿಯುತ್ತಿದ್ದಿಲ್ಲ. ಮಹಾಧರ್ಮನಿಷ್ಠ
ನೆಂದು ಅನಿಸಿಕೊಳ್ಳುವದಕ್ಕಾಗಿ ಅವನು ಪರಧರ್ಮಿಗಳ ಮೇಲೆ
ಮಾಡಿದ ಅತ್ಯಾಚಾರವನ್ನಂತೂ ನಮ್ಮ ಈ ದಕ್ಷಿಣಮಹಾರಾಷ್ಟ್ರ-
ಕರ್ನಾಟಕ ದೇಶದವರಿಗೆ ಹೇಳುವ ಕಾರಣವೇ ಇಲ್ಲ. ಬಹುಶಃ
ಪ್ರತಿಯೊಂದು ಊರಲ್ಲಿ ಟೀಪುಸುಲ್ತಾನನು ಒಡೆದ ಒಂದೆರಡು
ಹಿಂದುದೇವತಾವಿಗ್ರಹಗಳಾದರೂ ಆತನ ಅತ್ಯಾಚಾರದಸಾಕ್ಷಿಯನ್ನು
ಈಗಲೂ ನುಡಿಯುತ್ತ ಬಿದ್ದಿರುತ್ತವೆ. ಆತನು ಕರ್ನಾಟಕದ ಮೇಲೆ
ಕಡೆಯ ಸಾರೆ ಅಂದರೆ ೧೭೯೭-೯೮ರಲ್ಲಿ ಮಾಡಿದ ದಾಳಿಯಲ್ಲಂತೂ
ನಾನಾ ಅನನ್ವಿತ ಕೃತ್ಯಗಳು ಅವನಿಂದ ಘಟಿಸಿದವು. ಅವನು ಶ್ರೀರಂಗ
ಪಟ್ಟಣದಿಂದ ಉತ್ತರಕ್ಕೆ ಹೊರಟು ಇಂಗ್ಲಿಷ-ನಿಜಾಮ ಹಾಗು
ಮರಾಟರ ದಂಡುಗಳನ್ನು ಕಂಡಲ್ಲಿ ಸೋಲಿಸುತ್ತ ತುಂಗಭದ್ರಾ
ಹೊಳೆಯನ್ನು ದಾಟ ಬಂದನು. ಅವನು ಎಷ್ಟೋ ಪಾಳಯಗಾರ
ರನ್ನೂ ಮಾಂಡಲಿಕ ರಾಜರನ್ನೂ ಧರ್ಮಾಂತರಗೊಳಿಸಿದನು. ಅದಕ್ಕೆ
ಒಪ್ಪದವರನ್ನು ಹರಿಗಡಿದು ಚಲ್ಲಿದನು. ಟೀಪುವಿನ ಅನಾಹುತಕ್ಕೆ
ನಮ್ಮ ಅಗಡಿಯ ಇನಾಮದಾರರ ಪೂರ್ವಜನಾದ ಹಾವನೂರ
ಸಂಸ್ಥಾನಿಕ ಬಹದ್ದೂರ ಹಣಮಂತಗೌಡನೆಂಬ ರಣಶೂರನು ಮೇ-
ಡ್ಲೇರಿಯಲ್ಲಿ ಬಲಿಯಾದನು ಟೀಪುವು ಆತನನ್ನು ರಣದಲ್ಲಿ ಸೋಲಿ
ಸಲಾರದೆ, ಮೋಸದಿಂದ ಸೆರೆ ಹಿಡಿದು, ಹಿಂದೂಧರ್ಮವನ್ನು ಬಿಟ್ಟು
ಮುಸಲ್ಮಾನೀ ಧರ್ಮ ಸ್ವೀಕರಿಸಿದರೆ ಮಾತ್ರ ನಿನ್ನ ರಾಜ್ಯವನ್ನು
ನಿನಗೆ ತಿರುಗಿ ಕೊಡುವೆನೆಂದು ಹೇಳಿದಂತೆಯೂ, ಅದಕ್ಕೆ ಒಪ್ಪದ್ದ
ರಿಂದ ಅವನ ರುಂಡವನ್ನು ಕತ್ತರಿಸಿ, ಪಟ್ಟಣದ ಬಾಗಿಲಿಗೆ ಕಟ್ಟಿ
ಅವನ ರಾಜ್ಯವನ್ನು ಸೆಳೆಕೊಂಡಂತೆಯೂ ದಂತಕಥೆಯುಂಟು.

ಟೀಪುವು ತನ್ನ ಆಳಿಕೆಯು ಕಟ್ಟಕಡೆಗೆ ಇಷ್ಟು ಕ್ರೂರತನದಿಂದ ವರ್ತಿಸಹತ್ತಿದ್ದರೂ ಆತನ ಬಾಲ್ಯಸ್ವಭಾವವು ಇದಕ್ಕೆ ತೀರ ವಿಪರೀತವಾಗಿತ್ತು. ಟೀಪುವಿನ ತಂದೆಯಾದ ಹೈದರನು ಮೈಸೂರ ಮೂಲ ಮಹಾರಾಜರ ದಂಡಿನಲ್ಲಿ ಬಡ ಶಿಪಾಯಿಯಾಗಿದ್ದನು. ಆತನ ತಲಬು ಅವನ ಕುಟುಂಬ ಪೋಷಣೆಗೆ ಸಾಲುತ್ತಿರಲಿಲ್ಲ. ಅದರಿಂದ ಆಗ ರಾಜದರ್ಬಾರದಲ್ಲಿ ಘನತೆಗೇರಿ ಮುತ್ಸದ್ದಿಯಾಗಿದ್ದ ಪೂರ್ಣಯ್ಯನೆಂಬ ಬ್ರಾಹ್ಮಣನಲ್ಲಿ ಆತನು ತನ್ನ ಮಗನಾದ ಟೀಪುವನ್ನು ದನ ಕಾಯುವ ಕೆಲಸಕ್ಕೆ ಇಟ್ಟಿದ್ದನು. ಟೀಪುವಾದರೂ ಬಾಲ್ಯದಲ್ಲಿ ಹೈದರನಂತೆ ಪರಧರ್ಮಸಹಿಷ್ಣುವಾಗಿದ್ದನು. ಅದರಿಂದಲೇ ಆತನು ಪೂರ್ಣಯ್ಯನಂತಹ ಕಟ್ಟಾ ಬ್ರಾಹ್ಮಣನ ಪ್ರೀತಿಗೆ ಪಾತ್ರನಾಗಿದ್ದನು.

ಹೀಗೆ ಟೀಪುವು ಪೂರ್ಣಯ್ಯನ ಮನೆಯಲ್ಲಿ ದನದ ಚಾಕರಿ ಮಾಡುತ್ತಿರುವಾಗ, ಒಂದು ದಿನ ಆ ಬಾಲಕನು ದನ ಕಾಯುವದಕ್ಕೆಂದು ಅಡವಿಗೆ ಹೋದನು. ಅಂದು ಯಾಕೋ ಮಧ್ಯಾಹ್ನಕಾಲದಲ್ಲಿಯೇ ಅವನಿಗೊಳ್ಳೇ ನಿದ್ರೆ ಬಂದಿತು. ಗಿಡದ ನೆಳಲಿನ ಆಶ್ರಯಕ್ಕೆ ಕೂಡ ಹೋಗದೆ, ಆತನು ಅಲ್ಲಿಯೇ ಆ ನಟ್ಟಡವಿಯಲ್ಲಿ ಬಿಸಲಲ್ಲಿಯೇ ಬಿದ್ದು ನಿದ್ದೆ ಮಾಡಹತ್ತಿದನು. ಅಷ್ಟರಲ್ಲಿ ಒಂದು ಏಳು ಹೆಡೆಯ ನಾಗರಹಾವು ಅಲ್ಲಿಗೆ ಬಂದು ತನ್ನ ಹೆಡೆಗಳನ್ನು ಪಸರಿಸಿ, ಆ ನೆಳಲು ಟೀಪೂಬಾಲಕನ ಮುಖದ ಮೇಲೆ ಬೀಳುವಂತೆ ಮಾಡಿತು. ಬೆಳಿಗ್ಗೆ ಹೋದ ದನಗಳು ಮಧ್ಯಾಹ್ನವಾದರೂ ತಿರುಗಿ ಬಾರದ್ದರಿಂದ ಪೂರ್ಣಯ್ಯನವರೇ ಆತನಿದ್ದಲ್ಲಿಗೆ ಹುಡುಕುತ್ತ ಬಂದು ನೋಡುತ್ತಾರೆ, ಟೀಪುವಿನ ಮುಖದ ಮೇಲೆ ತನ್ನ ಹೆಡೆಗಳಿಂದ ನೆಳಲು ಹಾಕಿಕೊಂಡು ನಿಂತ ಆ ನಾಗರಹಾವಿನ ದೃಶ್ಯವು ಅವರ ಕಣ್ಣಿಗೆ ಬಿದ್ದಿತು. ಆಗ ಶಾಸ್ತ್ರಜ್ಞರಾದ ಅವರು ತಮ್ಮ ಮನಸ್ಸಿನಲ್ಲಿ ಈ

ಬಾಲಕನ ವಿಧಿಲಿಖಿತದಲ್ಲಿ ಛತ್ರ-ಚಾಮರಗಳನ್ನು ಹಿಡಿಸಿಕೊಳ್ಳುವದಿರುವದರಿಂದಲೇ ಇಂದು ಈ ಮಹಾಶೇಷನು ಇವನ ಸತ್ಕಾರವನ್ನು ಈ ಪ್ರಕಾರ ಮಾಡಿರುವನೆಂದು ತಿಳಿದುಕೊಂಡರು.

ಮುಂದೆ ತುಸ ಹೊತ್ತಿನಲ್ಲಿಯೇ ಟೀಪುವಿಗೆ ಎಚ್ಚರವಾಗಲು, ಆ ಸರ್ಪವಡಗಿ, ಅದು ಒಂದು ನಿಡಿದಾದ ಖಡ್ಗವಾಗಿ ಅವನೆದುರಿಗೇ ಬಿದ್ದಿತು. ಅಂದಿನಿಂದ ಆತನು ಅದನ್ನು ತನ್ನ ಹತ್ತರ ಸದಾ ಇರಿಸಲಾರಂಭಿಸಿದನು. ಕಾಲಗತಿಯು ಮೂಲಕ ಪೂರ್ಣಯ್ಯನ ಊಹೆಯು ಮೇರೆಗೆ ಮುಂದೆ ಹೈದರನ ತರುವಾಯು ಟೀಪುವು ಮೈಸೂರರಾಜ್ಯಕ್ಕೆ ಅಧಿಪತಿಯಾದನು. ಆತನು ಮಹಾ ಪರಾಕ್ರಮಿಯಾಗಿದ್ದದರಿಂದ, ತಾರುಣ್ಯದಲ್ಲಿ ಅವನು ಬಹು ದೊಡ್ಡ ರಾಜ್ಯವನ್ನು ಸಂಪಾದಿಸಿದನು; ಮತ್ತು ಮೊದಲಿನಂತೆ ಆತನು ಕಡೆತನಕ ಪ್ರಜಾನುರಾಗಿಯಾಗಿದ್ದರೆ, ಆತನ ರಾಜ್ಯವೂ ಶಾಶ್ವತವಾಗಿರುತ್ತಿತ್ತು; ಆದರೆ "ತೋಟ ಕೆಡಲಿಕ್ಕೆ ಮಂಗಮೋತೀಕಾಯಿಯೇ ಮೂಲ" ಎಂಬಂತೆ, ಆತನ ಪರಧರ್ಮೋಚ್ಛಲನವೂ, ಕ್ರೂರತನವೂ, ಮಹಾ ಗರ್ವವೂ ಆತನ ರಾಜ್ಯನಾಶಕ್ಕೆ ಕಾರಣಗಳಾದವು

ಸುಲ್ತಾನನಾದ ಟೀಪುವೇ ಈ ಪ್ರಕಾರ ಅನನ್ವಿತ ಕೃತ್ಯಗಳನ್ನು ಮಾಡಹತ್ತಿದ ಬಳಿಕ, ಆತನ ಚಾಕರರಾದ ಜಾಫರನಂಥ ನೀಚ ಜನರು ಪೂರ್ಣಯ್ಯನ ಅಪಮಾನ ಮಾಡಿದರೆಂದು ಹೇಳುವ ಅವಶ್ಯಕತೆಯೇನು? ಯಾವ ಪೂರ್ಣಯ್ಯನ ಸಹಾನುಭೂತಿಯ ಮೂಲಕ ಟೀಪುವು ಸಿಂಹಾಸನಾಧಿಷ್ಠಿತನಾಗಿ, ಮೈಸೂರಹುಲಿ! ಎಂದು ಮೆರೆದನೋ, ಅದೇ ಪೂರ್ಣಯ್ಯನ ರಾಜಕಾರಣದ ಮೂಲಕ ತುಸ ದಿನಗಳಲ್ಲಿಯೇ ಆತನು ರಣದಲ್ಲಿ ಬಿದ್ದು ಸತ್ತು ಹೋಗಬೇಕಾಯಿತು. ಈ ಟೀಪೂಸುಲ್ತಾನನ ಅಭ್ಯುದಯ-ಅವನತಿಗಳನ್ನು ಕುರಿತು ಒಬ್ಬ ಕವಿಯು ಮಾಡಿದ ಕವನವನ್ನು ಇದರಡಿಯಲ್ಲಿ ಕೊಡುತ್ತೇವೆ:—

ಟೀಪೂಸುಲ್ತಾನ ಸಾಹೇಬರ ಸಮರ ಕೇಳಿರಿ ಮನಪೂರಾ ||ಪಲ್ಲ||
ಟೀಪುಸುಲ್ತಾನ ಸಾಹೇಬರ| ಪಾಪ ಇನ್ನು ಸಣ್ಣವರಾ| ಆ ಪೂರ್ಣ
ಯ್ಯನ ಮನೆಯು ದನ-ಕರಾ ಕಾಯುತ್ತಿದ್ದ ಸುಕುಮಾರಾ| ಬಿಸಿಲಿನ
ತಾಪದಿಂದ ಕಾಡಿನಲ್ಲಿ ಮಲಗಿದನೋ ಚದುರಾ||೧|| ಆಗ ಮಧ್ಯಾಹ್ನ
ಆರು ತಾಸಿಗೆ ನಿದ್ದೆಯು ಹತ್ತಿತು ಭರಪೂರಾ | ಆಗ ಬಂದಿತು ಏಳು
ಹೆಡಿ| ನಾಗರಹಾವಾತನ ನೋಡಿ | ಬೇಗ ತನ್ನ ಹೆಡೆಗಳ ತೆಗೆದು
ಅಡ್ಡ ಬಿಸಿಲಿಗೆ ಹಿಡಿದು ಮುಖದ ಮ್ಯಾಲೆ ನೆರಳ ಮಾಡಿತಣ್ಣಾ
ಸುಲ್ತಾನ ಸಾಹೇಬರ || ೨ || ಅಲ್ಲಿಗೆ ಬಂದು ಪೂರ್ಣಯ್ಯನವರು
ನೋಡಿದರಾ ವಿವರಾ| ಗುಲ್ಲು ಕೇಳುತ ಮಾನವರಾ| ಸರ್ಪವಾದಿತು
ಹತಿಯಾರಾ|ಮೆಲ್ಲಗಾತನ ಎಬ್ಬಿಸಿ ಅವನಿಗೆ ಹೇಳಿದರಾ ಮಜಕೂರಾ|
ನಿನಗೆ ಸಲ್ಲುವದು ಮುಂದೆ ದೊಡ್ಡ ರಾಜ್ಯದ ಅಧಿಕಾರಾ ||೩||
ಗುರುವಿನ ಮಾತಿನಂತೆ ಮುಂದಕವನು ಆಳಿದ ಮೈಸೂರಾ| ಸರಸದಿ
ಮಂತ್ರಿಯ ಅಧಿಕಾರಾ | ಪೂರ್ಣಯ್ಯಗೆ ನೇಮಿಸಿಕಾರಾ | ಹರೂಷ
ದಿಂದ ರಾಜ್ಯವಾಳುತ ಮೆರೆಯುತಿರಲು ಗಂಭೀರಾ | ಅರಸಿನ ಬಲದಿ
ಪೂರ್ಣಯ್ಯನ ಮಗಳ ಕೆಡಿಸಲು ಜಾಫರಾ||೪|| ಖಟ್ಲೆ ಮಾಡಿ ಪೂರ್ಣ
ಯ್ಯನವರು ತಿಳಿಸಲು ಮಜಕೂರಾ | ಕಟ್ಟಮಾತನು ಕೇಳಿ ಜರಾ|
ಸಿಟ್ಟಗ ಬಂದನು ಸರದಾರಾ | ದುಷ್ಟನಾಯಿ ಮುಟ್ಟದ ಗಡಿಗೆಯು
ಬಿಟ್ಟು ಬಿಡೋ ನೀ ಪೂರಾ | ಎಟ್ಟ ಮಾತು ತನ್ನ ಹೊಟ್ಟಯೊಳು
ಇಟ್ಟನು ಮಂತ್ರಿವರಾ|| ೫ || ಒಳಗಿಂದೊಳಗೆ ಮದ್ರಾಸಕ್ಕೆ ಕಳಿಸಿ
ದನೋ ತಾರಾ | ದಳವು ಕೂಡಿತು ಇಂಗ್ಲಿಷರಾ | ಕಾಳಗವಾದಿತು
ಘೋರತರಾ| ತಿಳಿಯದ ಹಾಗೆ ಮದ್ದಿನ ಕೋಣೆಗೆ ಎಣ್ಣಿ ಹೊಯಿಸಿ
ದನೋ ಪೂರಾ | ಬಹಳ ಮೋಸವಾಯಿತು ಸುಲ್ತಾನರಿಗೆ ಮಂತ್ರಿ
ಕಾರಭಾರಾ||೬|| ಟೀಪೂಸುಲ್ತಾನನು ಹತಿಯಾರಾ ಹಿಡಿದು ಮಾಡಿ
ದನೋ ಸಮರಾ| ಸರ್ಪವಾದಿತು ಹತಿಯಾರಾ| ತಪ್ಪಲಿಲ್ಲವನ ಹಣೆ

ಯಂಬರಾ| ಸಪ್ಪಗೆ ಮಾಡಿದನೋ ಮಾರಿ ಕಣ್ಣಿಗೆ ತಂದನೊ ನೀರಾ|
ಆಗ ನೆಪ್ಪ ಮಾಡಿ ಮದ್ದಿನ ಕೋಣೆಗೆ ಹೋದನು ರಣಶೂರಾ|| ೭ ||
ಎಣ್ಣಿ ಹೊಯ್ದು ಮದ್ದನ್ನು ಕಂಡು ಚಿಂತಿಸಿದನು ಪೂರಾ| ತಣ್ಣಗಾ
ದವ್ರೋ ಕಾಲನರಾ | ನಮಗಿನ್ಯಾತಕೆ ಸಂಸಾರಾ | ಕಣ್ಣು ಮುಚ್ಚಿ
ದೇವರ ಧ್ಯಾನಾ ಮಾಡುತಿರಲು ಗಂಭೀರಾ | ಕೇಳಿರಣ್ಣಾ ಗುಂಡು
ಬಂದು ಎದೆಗೆ ಬಡಿದವು ಐದಾರಾ ||೮|| ಪ್ರಾಣ ಬಿಟ್ಟರಾಗ ದೇವರ
ನೆನಿಸಿ ಸುಲ್ತಾನ ಸಾಹೇಬರ| ಕ್ಷೋಣಿಯಲ್ಲಿ ಶ್ರೀರಂಗಪುರ | ಸ್ಥಾನ
ದಲ್ಲಿ ನಡೆದಿತು ಸಮರಾ | ಜಾಣತನದಿ ಗೋರಿಯು ಕಟ್ಟಿ ಮೇಣ
ಬತ್ತಿಯು ಜುಮರಾ | ಹಚ್ಚಿ ಜಾಣ ಕೃಷ್ಣ ರಾಜ ಕನವಳ್ಳೀಶನ
ದರ್ಬಾರಾ || ೯ ||

....0....

## ಟೀಪುವಿನ ಅಳಿಗಾಲ!

ಹಿಂದೆ ವಿವರಿಸಿದಂತೆ ಟೀಪೂಸುಲ್ತಾನನ ರಾಜ್ಯದಲ್ಲಿ ಎಲ್ಲ ಬಗೆಯ ಅನ್ಯಾಯಗಳೂ ಭರದಿಂದ ಜರುಗಹತ್ತಿದ ಬಳಿಕ ಈತನ ಅಳಿಗಾಲವು ಸಮೀಪಿಸಿದ್ದರಿಂದಲೇ ಈ ಬಗೆಯ ಅನಾಹೂತಗಳು ಈ ರಾಜ್ಯದಲ್ಲಿ ಏಕೋಪ್ರಕಾರವಾಗಿ ನಡೆದಿರುವವೆಂದು ಧೋರಣೀಪುರುಷರು ತರ್ಕಿಸಿದರು. ಇಂಗ್ಲಿಷರ ದಂಡು ಸುತ್ತೆಲ್ಲ ಕಡೆಯಿಂದ ಏರಿ ಬರಹತ್ತಿದ ಸುದ್ದಿಗಳು ಆಗಾಗ್ಗೆ ಬರತೊಡಗಿದವು ಯಾವ ಕಡೆಗೆ ಹೇಗೆ ಸನ್ನದ್ಧವಾಗಬೇಕೆಂಬದು ಟೀಪುವಿಗೆ ಹೊಳೆಯದಾಯಿತು. ಆಗ ಅವನು ಆ ಬಗ್ಗೆ ಯೋಚಿಸುವದಕ್ಕೆಂದು ಒಂದು ಪ್ರಚಂಡವಾದ ದರ್ಬಾರು ಕೂಡಿಸಿದನು. ಇದೇ ಆತನ ಆಳಿಕೆಯೊಳಗಿನ ಕಡೆಯ ದರ್ಬಾರವು! ಅಂದು ಆತನು ಒಳ್ಳೇ ಗಂಭೀರ ದನಿಯಿಂದ:—ಸರದಾರ-ದರಕ ದಾರರೇ, ಫಿರಂಗಿಗಳ ಉಪಟಳವು ದಿನೇ-ದಿನೇ ಹೆಚ್ಚುತ್ತ ನಡೆದುದರಿಂದ, ನಾವಿನ್ನು ಸುಮ್ಮನೆ ಕುಳಿತು ಪ್ರಯೋಜನವಿಲ್ಲ. ಇನ್ನು

ಯಾರನ್ನಾದರೂ ಒಬ್ಬ ಸೇನಾನಾಯಕನನ್ನಾಗಿ ನಿಯಮಿಸಿ, ಅವನ ಕೈಯೊಳಗೆ ದೊಡ್ಡ ದಂಡು ಕೂಡಿಸಿ ಕೊಟ್ಟು, ಅವನಿಂದ ಆ ಬ್ರಿಟಿಶರ ಮಗ್ಗಲು ಮುರಿಸಬೇಕೆಂದಿರುತ್ತೇನೆ. ಹೇಳಿರಿ, ಯಾರು ಆ ಇಂಗ್ಲಿಷರೊಡನೆ ಕಾದಲಿಕ್ಕೆ ಸಿದ್ಧರಿರುತ್ತೀರೆಂಬದನ್ನು........ ಎಂದು ನುಡಿದು ಸುಮ್ಮನಾಗುವಷ್ಟರಲ್ಲಿ—ಸರಕಾರ, ನಾನು ಹೋಗುವೆನು-ನಾನು ಹೋಗುವೆನು, ಎಂದು ಹಲಕೆಲವು ಸರದಾರರು ರಭಸದಿಂದ ನುಡಿದ ಶಬ್ದಗಳು ಸಭಾಮಂಟಪದಲ್ಲಿ ಪ್ರತಿಧ್ವನಿಗೊಡಹತ್ತಿದವು. ಆ ಧ್ವನಿಗಳಲ್ಲಿ ಇಬ್ಬರ ಬಾಯಿಂದ ಹೊರಟ ಶಬ್ದಗಳು ಒಳ್ಳೇ ಸ್ಪಷ್ಟವಾಗಿ ಕೇಳಿಸುತ್ತಿದ್ದವು; ಆ ಶಬ್ದಗಳು ನಮ್ಮ ನರವೀರ-ಕಾಸೀಮನಲ್ಲಿ ಹಾಗು ಅಬ್ದುಲ್‌ರಹಿಮಾನಖಾನರವೇ ಆಗಿದ್ದವೆಂಬದನ್ನು ಬೇರೆ ತಿಳಿಸುವ ಕಾರಣವಿಲ್ಲ. ಯಾಕಂದರೆ ಅವರಷ್ಟು ಸ್ವಾಮಿನಿಷ್ಠ ಸೇವಕರು ಟೀಪುಸುಲ್ತಾನನ ಅವನತ ಕಾಲದಲ್ಲಿ ಬೇರೊಬ್ಬರಿರಲಿಲ್ಲ. ಉಳಿದವರೆಲ್ಲರೂ 'ಹೌದ್ದೇವರೂ' ಎಂದು ಟೀಪುವಿನ ದನಿಗೆ-ದನಿ ಕೊಡುವವರೇ ಆಗಿದ್ದರು.

ಖಾನನಾಗಲಿ, ಕಾಸೀಮನಾಗಲಿ ಅಂದು ಅಷ್ಟು ಗಟ್ಟಿಯಾಗಿ "ನಾನು ಹೋಗುವೆನು-ನಾನು ಹೋಗುವೆನು'' ಎಂದು ನುಡಿಯಲಿಕ್ಕೆ ಅವರಲ್ಲಿಯ ಸ್ವಾಮಿನಿಷ್ಠತೆಯೊಂದೇ ಕಾರಣವಾಗಿರಲಿಲ್ಲ; ಆ ದಿನ ಅವರೀರ್ವರೂ ತಮ್ಮ ತಮ್ಮ ಜೀವಕ್ಕೆ ಬೇಸತ್ತು ಹೋಗಿದ್ದರು. ಚೆನ್ನಾಗಿ ವಿಚಾರ ಮಾಡದೆ ಉತಾವಳಿತನದ ಮೂಲಕ ತಾನು ಕಾಸೀಮನಲ್ಲಿ ಅವಿಶ್ವಾಸವನ್ನು ತಾಳಿ, ಅವನೊಗೆ ಕತ್ತಿಯ ಪೆಟ್ಟು ಹಾಕಿ, ತನ್ನ ಕೈಗೆ ಕಲಂಕವನ್ನುಂಟು ಮಾಡಿಕೊಂಡಿರುವದರಿಂದ, ತಾನು ಇನ್ನು ಈ ಲೋಕದಲ್ಲಿ ವ್ಯರ್ಥವಾಗಿ ಬಾಳುವದಕ್ಕಿಂತ ಸುಲ್ತಾನನ ಪ್ರೀತ್ಯರ್ಥವಾಗಿ ರಣದಲ್ಲಿ ಮಡಿದು ಹೋಗುವದೇ ವಿಹಿತವೆಂದು ಬಗೆದು ಖಾನನು ಅಷ್ಟು ಗಟ್ಟಿಯಾಗಿ 'ನಾನು ಹೋಗು

ವೆನೆ'ಂದು ನುಡಿದಿದ್ದರೆ; ಖಾನನ ನೆರವಿನಿಂದ ಘನತೆಗೇರಿ ಮಾನ-ಮರ್ಯಾದೆಗಳನ್ನು ಪಡೆದಿದ್ದರೂ, ಕಡೆಗೆ ತನ್ನ ವಿಷಯವಾಗಿ ಆತನಿಗೆ ಸಂಶಯವುಂಟಾಯಿತಲ್ಲದೆ, ತನ್ನ ಸಲುವಾಗಿ ಆ ಅಭಾಗಿನಿ ಅಮೀನೆಗೂ ಪ್ರಾಣಾಂತ್ಯದ ಸಂಕಟವುಂಟಾಯಿತಾದ್ದರಿಂದ ತಾನಿನ್ನು ಈ ಭುವಿಯೊಳಗೆ ಇದ್ದು ಪ್ರಯೋಜನವಿಲ್ಲೆಂದೂ, ಈ ಸಮಯದಲ್ಲಿ ಸುಲ್ತಾನನ ಸಲುವಾಗಿ ಕಾದಿ ರಣದಲ್ಲಿ ಮಡಿದು ಬಿಡಬೇಕೆಂದೂ ಆತುರದಿಂದ ಕಾಸೀಮನೂ 'ನಾನು ಹೋಗುವೆನೆ'ಂದು ಗಟ್ಟಿಯಾಗಿ ನುಡಿದಿದ್ದನು.

ಸುಲ್ತಾನನು ನಾನಾ ಬಗೆಯಿಂದ ಅವರಿಗೆ ತಡೆಯನ್ನುಂಟು ಮಾಡಿದನು; ಆದರೂ ಅವರು ಕೇಳಲಿಲ್ಲ. ಕಡೆಗೆ ಅವರಿಬ್ಬರಿಗೂ ಸಾಗಿ ಹೋಗಲಿಕ್ಕೆ ಅಪ್ಪಣೆಯಿತ್ತನು. ಮನುಷ್ಯನು ಸಾಯಲಿಕ್ಕೆ ಸಿದ್ಧನಾದ ಬಳಿಕ ಅವನಿಗೆ ಅಂಜಿಕೆಯು ಏತರಿಂದುಂಟಾಗಬೇಕು? ಇಂಗ್ಲಿಷರ ಸೈನ್ಯವು ಕಾಣುವದೆಂದೋ, ತಾವು ಅವರ ಮೇಲೆ ಬಿದ್ದು ಅವರ ಖಡ್ಗಕ್ಕೆ ಆಹುತಿಯಾಗುವದೆಂದೋ ಎಂದು ಅವರಿಬ್ಬರೂ ನೆನೆಯುತ್ತ ಇಂಗ್ಲಿಷರ ಮೇಲೆ ಸಾಗಿ ಹೋದರು. ಅಂದು ಶತ್ರುಗಳ ಸೈನ್ಯವು ಅಪರಂಪಾರವಾಗಿದ್ದದರಿಂದ ತುಸಹೊತ್ತಿನಲ್ಲಿಯೇ ಖಾನನ ದಂಡುಸೋತು ಖಾನನೂ ರಣದಲ್ಲಿ ಮಡಿದನೆಂಬ ಸುದ್ದಿಯು ಕೇಳಸ ಹತ್ತಿತು ಕಾಸೀಮನು ತನ್ನ ದಂಡಾಳುಗಳಿಗೆ ಧೈರ್ಯ ಹೇಳಿ, ಪುನಃ ಸಾಗಿ ಹೋಗಲು ಪ್ರಯತ್ನಿಸಿದನು; ಆದರೆ ಮೊದಲೇ ಎದೆಗೆಟ್ಟಿದ್ದ ಆ ದಂಡಾಳುಗಳು ಖಾನನ ಅವಸಾನದಿಂದ ಮತ್ತಿಷ್ಟು ಹೌಹಾರಿ, ದಾರಿ ಸಿಕ್ಕತ್ತ ಓಡಿ ಹೋದರು. ಇಷ್ಟರಲ್ಲಿಯೇ ಇಂಗ್ಲಿಷರ ದಂಡಿನದೊಂದು ತುಕ್ಕಡಿಯು ಭರದಿಂದ ಸಾಗಿ ಬಂದು ಕಾಸೀಮನನ್ನು ಮುತ್ತಿಬಿಟ್ಟಿತು. ಇನ್ನು ಅವನು ಅವರೊಡನೆ ಕಾದಲಿಕ್ಕನುವಾಗುವವನು; ಅಷ್ಟರಲ್ಲಿ ಆ ಇಂಗ್ಲಿಷರ ದಂಡಿನೊಳಗಿನ ಹಿಬ್ಬ ಸಿಪಾಯಿಯು

ಹಿಂದಿನಿಂದ ಬಂದು ತನ್ನ ಕತ್ತಿಯನ್ನು ಕಾಸೀಮನ ರುಂಡದ ಮೇಲೆ ಹೊಡೆಯುತಕ್ಕವನಿದ್ದನು; ಇಷ್ಟರಲ್ಲಿ ಆವರ ದಂಡಿನ ಮುಖ್ಯಸ್ಥನು ಹತ್ತರದಿಂದ ಬಂದು ಅವನ ಕೈಗತ್ತಿಯನ್ನು ನಡುವೇ ಹಿಡಿದು:— "ಹಾ! ಇವನು ಆವರ ದಂಡಿನ ಆಫೀಸರನಾಗಿ ತೋರುತ್ತಾನೆ. ಇವನ ಮೇಲೆ ಶಸ್ತ್ರವನ್ನೆತ್ತಬೇಡಿರಿ ಈತನ ಶಸ್ತ್ರಗಳನ್ನಷ್ಟು ಕಸಿಯಿರೆಂದರಾಯಿತು" ಎಂದು ಹೇಳಿದನು.

ಆ ಹುಕುಮಿನ ಪ್ರಕಾರ ಕಾಸೀಮನು ಕ್ಷಣದಲ್ಲಿ ಇಂಗ್ಲಿಷರ ಸೆರೆಯಾಳಾದನು ಕಾಸೀಮನನ್ನು ಕೈದು ಮಾಡಿಸಿದವನು ನಮ್ಮ ವಾಚಕರ ಚಿರಪರಿಚಿತನಾದ ಹರ್ಬರ್ಟ ಕ್ಯಾಂಪ್ಬನ್ನನ ಜೀವದ ಗೆಳೆಯನು. ಕ್ಯಾಂಪ್ಬನ್ನನು ಸತ್ತಿಲ್ಲವೆಂದೂ, ಟೀಪುವು ಆತನನ್ನೆಲ್ಲಿಯೋ ಅಜ್ಞಾತವಾದ ಕಾರಾಗೃಹದಲ್ಲಿಟ್ಟಿರುವನೆಂದೂ ಅವನಿಗೆ ತಿಳಿದಿತ್ತು. ಈ ಸೇನಾಪತಿಯು ಮೊದಲು ಕ್ಯಾಂಪ್ಬನ್ನನ ಗೆಳೆಯನಾಗಿದ್ದನು ಮಾತ್ರ; ಆದರೆ ಈಚೆಗೆ ಆತನು ಕ್ಯಾಂಪ್ಬನ್ನನ ತಂಗಿಯ ಕೂಡ ಪಾಣಿಗ್ರಹಣ ಮಾಡಿದ್ದನಾದ್ದರಿಂದ, ಅವನಿಗೆ ಭಾವ-ಮೈದುನನೂ ಆಗಿದ್ದನು. ಆದರಿಂದ ಅವನು ಕ್ಯಾಂಪ್ಬನ್ನನ ಪತ್ತೆ ಹಚ್ಚುವದಕ್ಕಾಗಿ ವಿಶ್ವಪ್ರಯತ್ನ ನಡಿಸಿದ್ದನು ದೊಡ್ಡಬಳ್ಳಾಪುರದ ಹತ್ತರ ಯಾವ ಫಕೀರನಿಂದ ಕ್ಯಾಂಪ್ಬನ್ನನು ವಾಸಿಯಾಗಿದ್ದನೋ, ಆತನ ಕೈಗೊಂದು ಪತ್ರವನ್ನು "ಯಾವನಾದರೊಬ್ಬ ಇಂಗ್ಲಿಷ ಆಫೀಸರನು ಭೇಟಿಯಾದಾಗ ಇದನ್ನು ನೀನು ಅವನ ಕೈಯಲ್ಲಿ ಕೊಡಬೇಕೆಂದು ಬೇಡಿಕೊಂಡು" ಗುಪ್ತವಾಗಿ ಕೊಟ್ಟಿದ್ದನು. ಆ ಪತ್ರವೂ ಕ್ಯಾಂಪ್ಬನ್ನನ ಈ ಭಾವ-ಮೈದುನನ ಹಸ್ತಗತವಾಗಿತ್ತು; ಆದರೆ ಮುಂದಿನ ಸಂಗತಿಯು ಮಾತ್ರ ಅವನಿಗೆ ತಿಳಿಯದಂತಾಗಿತ್ತು. ಆದರಿಂದ ಟೀಪುವಿನ ಕಡೆಯ ಯಾವನೊಬ್ಬ ಪ್ರಮುಖನು ಭೇಟಿಯಾದ ಕೂಡಲೆ ಅವನು ಕ್ಯಾಂಪ್ಬನ್ನನ ವಿಷಯವಾಗಿ ಪ್ರಶ್ನ ಮಾಡುತ್ತಿದ್ದನು.

ಪದ್ಧತಿಯಂತೆ ಅವನು ಕಾಸೀಮಅಲ್ಲಿಯನ್ನು ತನ್ನ ಡೇರೆಗೆ ಸನ್ಮಾನಪೂರ್ವಕವಾಗಿ ಬರಮಾಡಿಕೊಂಡು, ಇವನಿಗೂ ಕ್ಯಾಂಪ್ಬನ್ನನ ವಿಷಯವಾಗಿ ಪ್ರಶ್ನೆ ಮಾಡಿದನು. ಕಾಸೀಮನು ಸ್ವಭಾವತಃ ಉದ್ಧಟನಲ್ಲ; ಅದರಿಂದ ಆತನು ಆ ಕಠಿಣಪ್ರಸಂಗದಲ್ಲಿಯೂ ದೇಹಭಾನಗೆಟ್ಟು ಅವಿಚಾರದಿಂದ ನಡೆಯಲಿಲ್ಲ. ಆ ಹುದ್ದೆದಾರನಿಗೆ ಬೇಕಾಗಿದ್ದ ಮಾಹಿತಿಯನ್ನು ತನಗೆ ಗೊತ್ತಿದ್ದಮಟ್ಟಿಗೆ ಸೌಮ್ಯಶಬ್ದಗಳಿಂದ ತಿಳಿಸಿದನು. ಟೀಪುವಿನ ದಂಡಾಳುಗಳಲ್ಲಿ, ಅದರಲ್ಲಿಯೂ ಕಾಸೀಮನಂಥ ಶ್ರೇಷ್ಠ ಅಮಲದಾರನಲ್ಲಿ ಇಷ್ಟು ಸೌಜನ್ಯವಿರಬಹುದೆಂದು ಆ ಫಿರಂಗಿಯು ಭಾವಿಸಿರಲಿಲ್ಲ. ಕಾಸೀಮನ ಮಧುರಭಾಷಣವನ್ನು ಕೇಳಿ ಆತನು ಸಂತುಷ್ಟನಾದನು. ಆತನ ನೆರವಿನಿಂದಲೇ ಕಾಸೀಮ ಅಲ್ಲಿಯ ಖಾನನ ಪ್ರೇತವನ್ನು ಹುಡುಕಿಸಿ, ಅದಕ್ಕೆ ಮಣ್ಣುಕೊಡುವ ಶಾಸ್ತ್ರ ಮಾಡಿದನು. ಕಾಸೀಮನು ತಮ್ಮ ಹರ್ಬರ್ಟಕ್ಯಾಂಪ್ಬೆಲ್ನ ಪರಿಚಯದವನಿರುತ್ತಾನಷ್ಟೇ ಅಲ್ಲ; ಪ್ರಸಂಗದಲ್ಲಿ ಈತನು ಟೀಪುವಿನ ದರ್ಬಾರದಲ್ಲಿ ಅವನಿಗೆ ನೆರವಾಗಿ, ಅವನ ಪ್ರಾಣವುಳಿಸಿರುವನೆಂಬದನ್ನು ಕೇಳಿಯಂತೂ ಆ ಇಂಗ್ಲಿಷ ಅಧಿಕಾರಿಯ ಅಂತಃಕರಣವು ಸದ್ಗದಿತವಾಯಿತು. ಆಗ ಆತನು ಕಾಸೀಮನನ್ನು ತೀರ ಸಮೀಪಕ್ಕೆ ಕರೆದು ಕುಳ್ಳಿರಿಸಿಕೊಂಡು:— "ಕಾಸೀಮಸಾಹೇಬ, ನಾನು ಸ್ವತಂತ್ರ ಅಮಲ್ದಾರನಾಗಿದ್ದರೆ ನಿನ್ನನ್ನು ಈಗಲೆ ಬಂಧಮುಕ್ತಮಾಡಿಬಿಡುತ್ತಿದ್ದೆನು; ಆದರೆ ಸದ್ಯಃಕಾಲದಲ್ಲಿ ನಾನು ಹಾಗೆ ಮಾಡಲಾರದವರಾಗಿರುತ್ತೇವೆ ಆ ಬಗ್ಗೆ ನನ್ನನ್ನು ಕ್ಷಮಿಸು. ಈಗ ನೀನು ನಮ್ಮ ಸೆರೆಯಾಳೆಂದು ಸ್ಪಷ್ಟವಾಗಿರಬೇಕು; ಇಲ್ಲವೆ ನಮ್ಮ ಚಾಕರಿಗೆ ಒಪ್ಪಿಕೊಂಡು ನಮ್ಮ ದಂಡಿನಲ್ಲಿ ನಿನ್ನ ಯೋಗ್ಯತೆಗೆ ತಕ್ಕ ಕೆಲಸವನ್ನು ಮಾಡಬೇಕು; ಆದರೆ ನೀನು ನಮ್ಮ ಚಾಕರಿ ಮಾಡಲಿಕ್ಕೆ ಒಪ್ಪಲಾರೆಯೆಂಬುದು ನಿನ್ನ ಮುಖದ ಮೇಲಿನ ನಿಶ್ಚಯೊ ಕಳೆಯ

ಮೇಲಿಂದ ನಾನಾಗಲೇ ಕಂಡು ಹಿಡಿದಿರುತ್ತೇನೆ ಆ ನೀಚ ಸುಲ್ತಾ ನನ ಚಾಕರಿಗಿಂತ ನಮ್ಮ ಸೈನ್ಯದ ಚಾಕರಿಯು ಕೀಳುತರದ್ದಲ್ಲ ವೆಂದು ನೆನಪಿನಲ್ಲಿಡು'' ಎಂದು ನುಡಿದನು. ಅದನ್ನು ಕೇಳಿ ಕಾಸೀಮ ನಲ್ಲಿ ಸ್ವಾಭಿಮಾನದ ಮೂಲಕ ತುಸ ತ್ವೇಷವೂ, ಪರಾಧೀನತೆಯ ಮೂಲಕ ಹೆಚ್ಚಾದ ವಿಷಾದವೂ ಉಂಟಾದವು; ಆದರೆ ಉಪಾಯ ಗಾಣದೆ ಆತನು ಕೆಲಕಾಲ ಆ ಇಂಗ್ಲಿಷರ ದಂಡಿನಲ್ಲಿಯೇ ಸೆರೆಯಾ ಳಾಗಿ ಇರಬೇಕಾಯಿತು.

ಖಾನನು ಸತ್ತು ಹೋದದ್ದೂ, ಕಾಸೀಮನು ವೈರಿಗಳ ಸೆರೆ ಯಾಳಾದದ್ದೂ ಸುಲ್ತಾನನಿಗೆ ಕ್ರಮವಾಗಿ ತಿಳಿಯಲು, ಅವನ ಹೌ- ಹಾರಿತು. ಇನ್ನು ಇಂಗ್ಲಿಷರು ತನ್ನ ಶ್ರೀರಂಗಪಟ್ಟಣವನ್ನೇ ಮುತ್ತು ವರೆಂದು ಅವನ ಖಾತ್ರಿಯಾಯಿತು. ಮುಂದೇನು ಮಾಡಬೇಕೆಂಬ ದನ್ನು ಕುರಿತು ಆಲೋಚಿಸುವ ಸಲುವಾಗಿ ಆತನು ಮತ್ತೊಂದು ದರ್ಬಾರನ್ನು ಕೂಡಿಸುವವನಿದ್ದನು. ಆ ದರ್ಬಾರವು ಕೂಡುವ ಮುನ್ನಾದಿನವೇ ಇಂಗ್ಲಿಷರ ಬಹು ದೊಡ್ಡ ಸೈನ್ಯವು ಕಾವೇರೀ ಹೊಳೆಯನ್ನು ದಾಟ ಬಂದ ಸುದ್ದಿಯು ಟೀಪುವಿಗೆ ಹತ್ತಿತು. ಆಗ ಆತನು ಆ ಸುದ್ದಿ ತಂದವನಿಗೆ:—ಏನೆಂದಿ? ಆ ಕಾಫರರು ಹೊಳೆ ದಾಟ ಬಂದರೇ? ಛೇ! ನೀನು ತಂದ ಸುದ್ದಿಯು ಸುಳ್ಳಾಗಿರಬೇಕು. ಅವರು ನನ್ನ ಸಮೀಪಕ್ಕೆಂದೂ ಬರಲಾರರು. ಎಷ್ಟೇ ಬಲವಾಗಿದ್ದ ರೂ ನರಿಯು ಹುಲಿಯ ಪೆಳೆಯನ್ನು ನುಗ್ಗುವದು ಹೇಗೆ ಅಶಕ್ಯವೋ, ಅದರಂತೆಯೇ ಆ ನೀಚ ಫಿರಂಗಿಗಳು ಎಷ್ಟು ಬಲಾಢ್ಯರಾದರೂ ಈ ಮೈಸೂರಹುಲಿಯ ವಾಸಸ್ಥಳವಾದ ಈ ಕಾವೇರಿ ಹೊಳೆಯ ಇಬ್ಭಾ ಗದೊಳಗೆ ಬಹು ಭದ್ರವಾಗಿ ನೆಲೆಸಿರುವ ಈ ನನ್ನ ಪಟ್ಟಣವನ್ನು ಅವರು ಎಂದೂ ಮುತ್ತಲಾರರು, ಎಂದು ''ಭಾವೀ ಬಿದ್ದರೂ ಭಾಂಚೋದ'' ಎನ್ನುವಂತೆ, ಆ ತನ್ನ ಸ್ವಭಾವಸಿದ್ಧವಾದ ಉದ್ದಾಮ

ತನದಿಂದ ನುಡಿದನು.

ಮರುದಿನ ಬೆಳಗಾಗುವಷ್ಟರಲ್ಲಿ ಇಂಗ್ಲಿಷರ ದಂಡು ಸೋಸಲೆಯ ನಿಟ್ಟಿನಿಂದ ಪಟ್ಟಣದ ಕಡೆಗೆ ಧಾವಿಸಿ ಬರಹತ್ತಿತು. ಅದನ್ನು ಕಂಡು ಸುಲ್ತಾನನು:-ಈ ಕಡೆಯಿಂದ ಇವರು ನನ್ನ ರಾಜಧಾನಿಯನ್ನು ನುಗ್ಗಬೇಕಾದರೆ, ನಮ್ಮಲ್ಲಿಯ ಯಾವನೊಬ್ಬ ಕಾರಭಾರಿಯು ಇವರಿಗೆ ಫಿತೂರಾಗಿರಲಿಕ್ಕೆಬೇಕು. ಹಾಗಿಲ್ಲದಿದ್ದರೆ ಈ ಮುಂಡೇಮಕ್ಕಳಿಂದ ಈ ದುರ್ಭೇದ್ಯಕೋಟೆಯನ್ನು ಎಂದೂ ಕೈವಶ ಮಾಡಿಕೊಳ್ಳುವದಾಗುತ್ತಿರಲಿಲ್ಲ, ಎಂದು ನುಡಿಯಲು, ಅಲ್ಲಿಯೇ ಸಮೀಪದಲ್ಲಿದ್ದ ಒಬ್ಬ ಶಿಪಾಯಿಯು ಗಟ್ಟಿ ದನಿಯಿಂದ:—ಸರಕಾರ, ಆ ನಿಮ್ಮ ವಿಶ್ವಾಸಿಗೆ ಕಾಸೀಮುಅಲ್ಲಿಯೇ ವೈರಿಗಳಿಗೆ ಅನುಕೂಲಾಗಿರುವನೆಂದು ನಾನು ಕೇಳಿರುತ್ತೇನೆ, ಎಂದು ಕಾಸೀಮನ ಮೇಲಿನ ದ್ವೇಷ ತೀರಿಸಿಕೊಳ್ಳುವದಕ್ಕಾಗಿ ಆ ನೀಚನು ನುಡಿದನು. ಹೀಗೆ ನುಡಿದವನು ಕಾಸೀಮನನ್ನು ಮನಃಪೂರ್ವಕವಾಗಿ ದ್ವೇಷಿಸುತ್ತಿದ್ದ ಜಾಫರಜಮಾದಾರನ ಹಸ್ತಕನಾದ ಮಾದರನೆಂಬ ಶಿಪಾಯಿಯೇ. ಜಾಫರನನ್ನು ಬೇರೆ ಕಡೆಗೆ ವರ್ಗ ಮಾಡಿದ ಬಳಿಕ ಯಾವ ಬಗೆಯಿಂದಲೋ ಆ ಮಾದರ ಚೋದನು ಸುಲ್ತಾನನ ಖಾಸ ಸೈನ್ಯಾತಿಯ ಶಿಪಾಯಿಯಾಗಿದ್ದನು.

ಸುಲ್ತಾನನಿಗೆ ಆ ಶಿಪಾಯಿಯ ಮಾತು ಮೊದಮೊದಲು ನಿಜವೆಂದು ತೋರಿತು; ಆದರೆ ಕಾಸೀಮನ ಚರಿತ್ರವೆಲ್ಲ ನೆನಪಿಗೆ ಬಂದ ಮೇಲೆ ಅವನ ವಿಷಯವಾಗಿ ಆತನಲ್ಲುಂಟಾದ ದುರ್ಭಾವನೆಯು ಅಳಿದು ಹೋಯಿತು. ನಂತರ ಆತನು ತನ್ನ ಹಸ್ತಕರಾದ ಕೆಲವು ಪ್ರಮುಖ ಅಧಿಕಾರಿಗಳನ್ನು ತಾನಿದ್ದಲ್ಲಿಗೆ ಕರೆಸಿಕೊಂಡು:—ನೀವೆಲ್ಲರೂ ನನ್ನ ನಿಜವಾದ ಹಿತಚಿಂತಕರಾಗಿದ್ದರೆ, ಇಂದು ನೀವು ನನ್ನ ಸಲುವಾಗಿ ಪ್ರಾಣಕೊಡಲಿಕ್ಕೆ ಸಿದ್ಧರಿರುವೆವೆಂದು ಈ ನನ್ನ ಖಡ್ಗವನ್ನು ಮುಟ್ಟಿ ಆಣೆ ಮಾಡಿರಿ. ಇದಕ್ಕೆ ಸಮ್ಮತಿಸದವರು ನನ

ಕಣ್ಣೆದುರಿಗೆ ಕೂಡ ನಿಲ್ಲಬೇಡಿರಿ. ಅಂದರೆ ನಾನೂ ನನ್ನ ದೈವವೂ ಕೂಡಿ ಮನಬಂದಂತೆ ನಡೆಯುಲಿಕ್ಕೆ ಅನುಕೂಲವಾದೀತು. ನಿಮ್ಮೆಲ್ಲರ ಮಾತು ಕೇಳಿ ಈ ವರೆಗೆ ನಾವು ಆ ಇಂಗ್ಲಿಷರ ಮೇಲೆ ಸ್ವತಃ ಏರಿ ಹೋಗದಿದ್ದದ್ದೇ ತಪ್ಪಾಗಿದೆ. ನಮ್ಮ ಆ ತಪ್ಪಿನ ಪ್ರಾಯಶ್ಚಿತ್ತವನ್ನು ನಮಗೆ ಕೊಡುವದರ ಸಲುವಾಗಿಯೇ ಅವರು ಇಂದು ನಮ್ಮ ರಾಜಧಾನಿಯನ್ನು ಮುತ್ತಿ ಬಂದಿದ್ದಾರೆ. ನಿಮ್ಮಲ್ಲಿ ಇಮಾನವಿದ್ದರೆ, ಜಾತಿ, ಧರ್ಮ, ದೇಶಗಳ ಬಗ್ಗೆ ಕಿಂಚಿತ್ತಾದರೂ ಅಭಿಮಾನವಿದ್ದರೆ, ನೀವು ಈಗಿಂದೀಗಲೇ ವೈರಿಗಳನ್ನು ತುಂಡರಿಸಲು ಸನ್ನದ್ಧರಾಗಿರಿ. ಇಲ್ಲದಿದ್ದರೆ ಕೈಗಳಲ್ಲಿ ಬಳೆಗಳನ್ನಿಟ್ಟುಕೊಂಡು ಬುರುಕೆಗಳಲ್ಲಿ ಅಡಗಿ ಬೀಬಿಗಳಾಗಿ ಕೂತುಕೊಳ್ಳಿರಿ. ನಾವು ನಿಮ್ಮಂಥ ಹೇಡಿಗಳ ಬೆನ್ನು ಕಟ್ಟಿ ಸುಮ್ಮನೆ ಕುಳಿತದ್ದರಿಂದಲೇ ಆ ಕಾಫರರು ಇಂದು ಹೊಳೆ ದಾಟಿ ಇಲ್ಲಿಗೆ ಬಂದಿರುವರು, ಎಂದು ರೊಚ್ಚಿನಿಂದ ನುಡಿದನು.

ಸುಲ್ತಾನನ ಆ ಸ್ಫೂರ್ತಿದಾಯಕ ಭಾಷಣವನ್ನು ಕೇಳಿದ ಕೂಡಲೆ ಅಲ್ಲಿ ಕೂಡಿದ ಜನರಲ್ಲಿ ಬಹು ಜನರು ಸುಲ್ತಾನನ ಪಾದ ಮುಟ್ಟಿ ಆಣೆ ಮಾಡಿ ಪ್ರಾಣ ಕೊಡಲಿಕ್ಕೆ ತತ್ಪರರಾದರು. ಇಷ್ಟಾಗುವದರೊಳಗೆ ಪಟ್ಟಣದ ಕಿಲ್ಲೆಯು ಉತ್ತರ ದಿಕ್ಕಿನಿಂದ ಇಂಗ್ಲಿಷರ ತೋಪುಗಳ ಸಪ್ಪಳವು ಕೇಳಲಾರಂಭಿಸಿತು. ತುಸ ಹೊತ್ತಿನಲ್ಲಿಯೇ ಆ ಪ್ರಚಂಡ ತೋಪುಗಳ ಸುರಿಮಳೆಯಿಂದ ಶ್ರೀರಂಗಪಟ್ಟಣದ ಆ ಕಡೆಯು ಕೊತ್ತಳಗಳು ನೆಲಸಮವಾಗುವ ಪ್ರಸಂಗವೇ ಒದಗಿತು! ಇದನ್ನೆಲ್ಲ ಕಣ್ಮುಟ್ಟ ನೋಡುತ್ತಿದ್ದರೂ ಸುಲ್ತಾನನೂ, ಆತನ ಹಸ್ತಕರೂ ಸುಮ್ಮನೆ ಕೈಮುಚ್ಚಿಕೊಂಡು ಕುಳಿತಿದ್ದರು. ಯಾವ ಮೈಸೂರ ಹುಲಿಯ ಗುಡುಗನ್ನು ಕೇಳಿಯೇ ಎಷ್ಟೋ ಗಾವುದ ದೂರದಲ್ಲಿದ್ದ ಶತ್ರುಗಳ ಸೈನ್ಯವು ಹತವೀರ್ಯವಾಗುತ್ತಿತ್ತೋ, ಅದೇ ಆ ಮೈಸೂರ ಹುಲಿಯ ಸಮಕ್ಷಮದಲ್ಲಿ,- ಆ ಹುಲಿಯು ಪೆಳೆಯುಂತಿರುವ ಪಟ್ಟಣದ

ಕೊತ್ತಳಗಳು ವೈರಿಗಳಿಂದ ನೆಲಸಮವಾಗುತ್ತಿದ್ದರೂ, ಆ ಹುಲಿಯು ಮುಂದುಗಾಣದೆ ಸ್ತಬ್ಧವಾಗಿ ಕುಳಿತಿತ್ತು. "ಕಾಲಾಯ ತಸ್ಮೈ ನಮಃ'' ಎಂಬಂತೆ, ಪ್ರತಿಕೂಲ ಕಾಲವೊದಗಿದಾಗ ಎಂಥ ಬಲಿಷ್ಠನ ಗತಿಯಾದರೂ ಹೀಗೆಯೇ ಆಗುತ್ತಿರುವದು ಲೋಕರೂಢಿಯಾಗಿದೆ ಯೆಂದು ಹಿರಿಯರನ್ನುವ ಮಾತು ಸುಳ್ಳಲ್ಲ.

ನಿಜಾಮನ ಸಹಾಯ ಬೇಡುವದು, ಮರಾಟರಿಗೆ ಆಶೆ ಹಚ್ಚಿ ತನ್ನ ಕಡೆಗೆ ಎಳಿಸಿಕೊಳ್ಳುವದು ಇವೇ ಮೊದಲಾದ ಸುಲ್ತಾನನ ಕಾರಸ್ಥಾನಗಳಿಗೆ ಈ ಮೊದಲೇ ಅಪಯಶವುಂಟಾದದ್ದರಿಂದ, ಈಗ ತಾನು ಯಾವ ಮಾರ್ಗದಿಂದ ನಡೆಯಬೇಕೆಂಬದೇ ಅವನಿಗೆ ತಿಳಿಯ ದಾಯಿತು. ಫ್ರೆಂಚರ ಸಹಾಯವು ತನಗೆ ಖಾತ್ರಿಪೂರ್ವಕ ದೊರೆ ಯುವದೆಂದೂ, ಕಾಬೂಲದ ಅಮೀರ, ತುರ್ಕಸ್ತಾನದ ಸುಲ್ತಾನ, ಇಜಿಪ್ತದ ಪಾಚ್ಛಾ ಮುಂತಾದವರು ಪ್ರಸಂಗದಲ್ಲಿ ತನಗೆ ಕುಮುಕು ಮಾಡೇ ಮಾಡುವರೆಂದೂ ಆತನು ಈ ವರೆಗೆ ನಿರ್ಧರಿಸಿದ್ದನು; ಆದರೆ ಪ್ರಸಂಗದಲ್ಲಿ ತನ್ನ ದೈವದ ಹೊರತು ಅವನಿಗಾರೂ ನೆರವಾಗುವವ ರಿರಲಿಲ್ಲ. ಹೀಗೆ ಎಲ್ಲ ಕಡೆಯಿಂದಲೂ ನಿರಾಶಾಸ್ಥಿತಿಯುಂಟಾದ ಬಳಿಕ ಎಂಥ ಶೂರ ಮನುಷ್ಯನಿದ್ದರೂ ಮಾಡುವದೇನು? ಕಡೆಗೆ ಕೊತ್ತಳಗಳು ನೆಲಸಮವಾದವು. ಅಷ್ಟರಲ್ಲಿ ಸಂಜೆಯಾದ್ದರಿಂದ, ಇಂಗ್ಲಿಷರು ಅಂದಿನ ಕಾಳಗವನ್ನು ನಿಲ್ಲಿಸಿದರು. ಮರುದಿವ ಅವರು ಖಂಡಿತವಾಗಿ ಕಿಲ್ಲೆಯನ್ನು ಮುತ್ತಿ ಕೈವಶ ಮಾಡಿಕೊಳ್ಳತಕ್ಕವರು. ಇದನ್ನು ಕಂಡು ಸುಲ್ತಾನನು ಅವರಿಗೆದುರಾಗುವ ಸಿದ್ಧತೆ ನಡಿಸಿ ದನು ಪಟ್ಟಣದ ಕಿಲ್ಲೆದಾರನು ಅಂದು ಸಂಜೆಯ ಮುಂದೆಯೇ ಸುಲ್ತಾನನೆಡೆಗೆ ಬಂದು:—ಸರಕಾರ, ಉತ್ತರ ದಿಕ್ಕಿನ ಕೊತ್ತಳವು ಪೂರಾ ಬಿದ್ದಂತಾಗಿದೆ. ಹಾಗೆಯೇ ಬಿಟ್ಟರೆ ನಾಳೆ ಬೆಳಿಗ್ಗೆ ಇಂಗ್ಲಿಷರ ದಂಡು ಒಳನುಗ್ಗುವದು ಖಂಡಿತವು. ಆದುದರಿಂದ ಅದನ್ನು

ಬೆಳಗಾಗುವಷ್ಟರಲ್ಲಿ ಮೊದಲಿನಂತೆ ಭದ್ರವಾಗಿ ಕಟ್ಟಿಸದಿದ್ದರೆ, ಈ ಸಯ್ಯದಖಾನನ ಹೆಸರು ಬದಲಾಗಿಡುವಿರಂತೆ, ಎಂದು ಅಂಗಲಾಚಿ ಬೇಡಿಕೊಂಡರೂ, ತನ್ನ ದುರ್ದೈವದ ಮೂಲಕ ಸುಲ್ತಾನನು ಅದಕ್ಕೆ ಸಮ್ಮತಿಸದೆ:— ನಾವು ಆ ನೀಚ ಫಿರಂಗಿಗಳಿಗೆ ಹೆದರುತ್ತೇವೆಂದು ತಿಳಿದಿರುವಿಯಾ? ನಾಳೆ ಬೆಳಿಗ್ಗೆ ನಾವು ಅವರನ್ನೆಲ್ಲ ಕಾಫಂಲೋಕಕ್ಕೆ ಕಳಿಸಿಬಿಡುವೆವು. ಆ ಬಗ್ಗೆ ನೀನು ಕೊಂಚವೂ ಚಿಂತಿಸಬೇಡ, ಹೋಗೆಂ, ಎಂದು ಹೇಳಿ ಕಳಿಸಿಬಿಟ್ಟನು.

ತಾನು ಜೀವಂತನಿರಲಿಕ್ಕೆ ತನ್ನ ರಾಜಧಾನಿಯನ್ನು ಮುತ್ತಿ ಬರುವಷ್ಟು ಸಾಹಸವನ್ನು ಇಂಗ್ಲಿಷರು ಮಾಡಿದರೂ, ಸುಲ್ತಾನನು ಕಡೆಯ ವರೆಗೂ ಅವರನ್ನು ಕಃಪದಾರ್ಥವೆಂದೇ ಭಾವಿಸುತ್ತಿದ್ದನು! ಮರುದಿನ ಬೆಳಿಗ್ಗೆ ಸುಲ್ತಾನನು ಸ್ವತಃ ಉತ್ತರ ದಿಕ್ಕಿನ ಕೊತ್ತಳದ ಬಳಿಗೆ ಹೋಗುವಷ್ಟರಲ್ಲಿ, ಕುಸ ನಿಮಿಷಗಳ ಮೊದಲೇ ಸಯ್ಯದ ಕಿಲ್ಲೇದಾರನು ಇಂಗ್ಲಿಷರ ತೋಫಿನ ಗುಂಡಿಗೆ ತುತ್ತಾದನೆಂಬದು ತಿಳಿಯಿತು. ಯಾವ ಕಡೆಗೆ ಕೊತ್ತಳಕ್ಕೆ ಖಿಂಡಿ ಬಿದ್ದಿತ್ತೋ, ಅವನು ಅಲ್ಲಿಗೆ ಬರಲಿಕ್ಕೂ, ಇಂಗ್ಲಿಷರ ಕಡೆಯ ಜನರಲ್ ಬೇರ್ಡನೆಂಬ ಸೇನಾನಿಯು ಸ್ವಸೈನ್ಯದೊಡನೆ ಒಳನುಗ್ಗಲಿಕ್ಕೂ ಗಂಟೇ ಬಿದ್ದಿತು. ಆಗ ಸುಲ್ತಾನನು ತನ್ನ ದಂಡಿಗೂ ಅತ್ತ ಕಡೆಗೇ ಬರಲು ಹುಕುಮು ಮಾಡಿದನು. ಶ್ರೀರಂಗಪಟ್ಟಣದೊಳಗಿನ ಶ್ರೀರಂಗನಾಥ ದೇವಾಲಯದಿಂದ ಉತ್ತರದ ಕಡೆಯ ಹೊಳೆಗೆ ಈಗಿರುವ ಘಾಟನ ಹತ್ತರದಲ್ಲಿ ಉಭಯ ಸೈನ್ಯಗಳ ನಡುವೆ ತುಮುಲವಾದ ಕಾಳಗವಾಯಿತು. ಆಗ ಇತ್ತಂಡದಲ್ಲಿಯೂ ವೀರಾವೇಶವು ಥೈ-ಥೈ ಎಂದು ಕುಣಿಯುತ್ತಿತ್ತು. ಮೈಸೂರ ಹುಲಿಯಾಗಿದ್ದ ಟೀಪೂಸುಲ್ತಾನನು ಕೈಮುಟ್ಟಿ ಗುಂಡು ಹೊಡೆಯುತ್ತಿದ್ದನು. "ತಾವು ಇಲ್ಲಿ ಇರಬಾರದು; ಹಿಂದೆ ನಿಂತು ನಮಗೆ ಪ್ರೋತ್ಸಾಹನ ಕೊಡಬೇಕು. ನಾವೇ ಕಾಳಗಕ್ಕೆ ಎದುರಾಗು

ವೆವು'' ಎಂದು ಅವನ ಹಿತಚಿಂತಕರು ಅವನಿಗೆ ಪರಿಪರಿಯಾಗಿ ತಿಳಿಸಿದರೂ, ಆ ದುರಭಿಮಾನಿಯಾದ ಸುಲ್ತಾನನು ಆಗ ಯಾರ ಮಾತನ್ನೂ ಕಿವಿಯ ಮೇಲೆ ಹಾಕಿಕೊಳ್ಳದೆ:—ಛೇ; ನಾನು ಎಂದೂ ಹಿಂಜರಿಯಲಾರೆನು. ಈ ಫಿರಂಗಿಗಳನ್ನೆಲ್ಲ ಯಮಸದನಕ್ಕೆ ಅಟ್ಟಿಯೇ ಪಟ್ಟಣದೊಳಗೆ ಕಾಲಿಡತಕ್ಕವನು. ಇವರು ನನ್ನನ್ನು ರಣದಲ್ಲಿ ಮಲಗಿಸಿದರೇ ಇವರಿಗೆ ಒಳಗೆ ಹೋಗಲಿಕ್ಕೆ ದಾರಿ ಸಿಕ್ಕೀತು; ಇಲ್ಲದಿದ್ದರೆ ಇಲ್ಲ, ಎಂದೆನ್ನುತ್ತ ಕಾದುತ್ತಿದ್ದನು.

ಎರಡೂ ಕಡೆಯ ಜನರ ಪ್ರೇತಗಳಿಂದ ಉತ್ತರ ಕಡೆಯ ಬಹು ದೊಡ್ಡ ಕಂದಕವು ತುಂಬಿ ತುಳುಕಹತ್ತಿತು. ಅಂದಿನಂಥ ತುಮುಲ ಕಾಳಗವು ಜನರಲ್ ವೇರ್ಡನ ಜನ್ಮದಲ್ಲಿ ಅದೇ ಮೊದಲಿನದಾಗಿತ್ತು. ಅದರಿಂದ ಆತನೂ ಕ್ಷಣಕಾಲ ಮುಂದುಗಾಣದಾದನು. ಕೊತ್ತಳಕ್ಕೆ ತೋಫಿನಿಂದ ಖಿಂಡಿ ಬಿದ್ದಿದ್ದರೂ ಅದರೀಚಗಿದ್ದ ಮ-ತ್ತೊಂದು ಚಿಕ್ಕ ಕಂದಕವನ್ನು ದಾಟಿ ಪಟ್ಟಣವನ್ನು ಸೇರಬೇಕಾಗಿತ್ತು. ಆ ಕಂದಕದಲ್ಲಿ ಆಳವಾದ ನೀರು ನಿಂತಿತ್ತು. ಆಗ ಇಂಗ್ಲಿಷ ದಂಡಿನವರು ಸಮೀಪದಲ್ಲಿದ್ದ ಕೋಟೆಯ ಬಾಗಿಲವೊಂದನ್ನು ಮುರಿದು ಅದರ ಉದ್ದಾಗ ಹಲಿಗೆಗಳನ್ನು ಎಳೆದು ತಂದು, ಆ ಚಿಕ್ಕ ಕಂದಕದ ಮೇಲೆ ಚಲ್ಲಿದರು. ಕೂಡಲೆ ದಂಡಾಳುಗಳು ಆ ಕಂದಕ ದಾಟ ಸಾಗಹತ್ತಿದರು. ಹೀಗೆ ಇಂಗ್ಲಿಷರ ದಂಡು ಆ ಚಿಕ್ಕ ಕಂದಕ ದಾಟಿದ್ದನ್ನು ನೋಡಿದ ಕೂಡಲೆ ಟೀಪುಸುಲ್ತಾನನ ಸೊಂಡೆಯೊಣಗಿತು! ಅವನು ತೀರ ಹತವೀರ್ಯನಾದನು ಆಗ ಆತನು ಕರ್ಕಶದನಿಯಿಂದ: — ಎಲೆ ನಡೆಯಿರಿ, ಇನ್ನೇತಕ್ಕೆ ಕಾಳಗವು? ಮೊದಲು ಎಲ್ಲ ಬೀಬಿಗಳನ್ನು ಕೊಂದು ಬಿಡೋಣ. ಅವರನ್ನು ಈ ನೀಚರ ಕೈವಶವಾಗಗೊಡಬಾರದು ನಡೆಯಿರಿ, ಬೇಗನೆ ನಡೆಯಿರಿ. ತುಸ ವಿಲಂಬವಾದರೆ ಆ ಕೆಲಸವೂ ನಮ್ಮ ಕೈಮೀರಿ ಹೋದೀತು, ಎಂದು

ಅನ್ನುತ್ತ, ನನ್ನ ಮೇಣೆಯುಎಲ್ಲಿದೆ? ಎಂದು ಕೂಗುತ್ತ ಅತ್ತಿಂ ದಿತ್ತ-ಇತ್ತಿಂದತ್ತ ಧಾವಿಸಹತ್ತಿದನು; ಆದರೆ ಅಂಥ ಆ ಇಕ್ಕಟ್ಟಿನ ಪ್ರಸಂಗದಲ್ಲಿ ಅವನಿಗೆ ಮೇಣೆಯು ದೊರೆಯುವ ಬಗೆ ಹೇಗೆ? ಆಗೆ ರ್ರಾಜಾಖಾನನೆಂಬ ಆತನ ಕೇವಲ ಹಿತಚಿಂತಕನು:— ಸರಕಾರ, ತಾವು ಇನ್ನು ಮಾತ್ರ ಇಲ್ಲಿ ನಿಲ್ಲಬಾರದು. ಪಶ್ಚಿಮ ಕಡೆಯ ಬಾಗಿಲಿ ನಿಂದ ದಾರಿ ಹಿಕ್ಕತ್ತ ಓಡಿ ಹೋಗಿ ಜೀವವುಳಿಸಿಕೊಳ್ಳಬೇಕು. ಮುಂದಿನ ವಿಚಾರ ಮುಂದೆ, ಎಂದಂದನು.

ಆದರೆ ದುರ್ದೈವಿಯಾದ ಆ ಮುತ್ಮಾಳ ಸುಲ್ತಾನನು ಇಂಥ ಹಿತೋಕ್ತಿಗಳನ್ನು ಕೇಳುವವನೇ? ಅವನು ಮಂಕು ಹಿಡಿದ ನಾಯಿ ಯಂತೆ ಅವನ ಮೈ ಮೇಲೆ ಹೋಗಿ:— ಚೂಪ ರಹೊ! ಝುನಾ ನಾದ ಜನರು ಅತಿ ಪವಿತ್ರರು. ಅವರನ್ನು ಮೊದಲು ದಾಟಿಸಬೇಕು. ದಾಟಿಸುವದಾಗದಿದ್ದರೆ ಅವರನ್ನೆಲ್ಲ ಈ ಖಡ್ಗದಿಂದ ತುಂಡರಿಸು ತ್ತೇನೆ, ಎಂದಂದು ತನ್ನ ಹಿರಿದ ಕತ್ತಿಯಿಂದ ಅರಮನೆಯ ಕಡೆಗೆ ಧಾವಿಸಹತ್ತಲಿಕ್ಕೂ, ಎತ್ತ ಕಡೆಯಿಂದಲೋ ಹಿಂದು ಗುಂಡು ಬಂದು ಅವನ ಬೆನ್ನಲ್ಲಿ ನಡಲಿಕ್ಕೂ ಗಂಟೇಬಿದ್ದಿತು. ಕೂಡಲೆ: ಅಲ್ಲಾ ಯಾರ! ಏ ರಂಡೀಕೇ ಅವಲಾದ! ಸೈತಾನ ಲೇಜಾವೋ ತುಮುಕೂ, ಎಂದು ಒದರುತ್ತ ಅವನು ನೆಲಕ್ಕೆ ಬಿದ್ದನು. ಆತನು ಹಳ್ಳೀ ಕಠಿಣ ಶರೀರದವನಾದ್ದರಿಂದ, ಅಂಥ ಸ್ಥಿತಿಯಲ್ಲಿಯೂ ತನ್ನವರ ಸಹಾಯ ದಿಂದ ಅಲ್ಲಿಂದೆದ್ದು ಪಟ್ಟಣದ ಕಡೆಗೆ ನಡೆಯಲುಪಕ್ರಮಿಸಿದನು. ಅಷ್ಟರಲ್ಲಿ ಮತ್ತೂ ಹಿಂದು ಗುಂಡು ಬಂದು ಅವನಿಗೇ ತಾಕಿತು. ಆದರೂ ಸುಲ್ತಾನನು ಅಸಾವಧನಾಗಲಿಲ್ಲ. ಆತನ ಜನರು ಆತ ನನ್ನು ಎತ್ತಿಕೊಂಡೊಯ್ದು ಸಮೀಪದಲ್ಲಿಯೇ ಇದ್ದ ಹಿಂದು ಪಲ್ಲಕ್ಕಿ ಯಲ್ಲಿ ಹಾಕಿದ್ದರು. ಇನ್ನು ಅವರು ಆ ಪಲ್ಲಕ್ಕಿಯನ್ನು ಹೊರುವವ ರಿದ್ದರು. ಅಷ್ಟರಲ್ಲಿ ಸುಲ್ತಾನನು:—ನೀರು-ನೀರು, ಬೇಗನೆ ನೀರು

ಕೊಡಿರಿ; ತುಸ ಗಾಳಿ ಬೀಸಿರಿ, ಆ ಮೇಲೆ ನನ್ನನ್ನು ಬೇರೆ ಕಡೆಗೆ ಒಯ್ಯಿರಿ, ಎಂದು ಹಿಂದೇಸವನೆ ಕೂಗಲಾರಂಭಿಸಿದನು. ಆತನ ಜನರು ಅವನಿಗೆ ನೀರು ಕೊಡುತ್ತ ಕಳಿಕು ಕಾಲಹರಣ ಮಾಡದೆ, ಆ ಪಲ್ಲಕ್ಕಿಯನ್ನು ಭರದಿಂದ ಅರಮನೆಯ ಕಡೆಗೆ ಸಾಗಿಸಿದರು. ಇಷ್ಟರಲ್ಲಿ ಏಳೆಂಟು ಜನ ಇಂಗ್ಲಿಷದಂಡಾಳುಗಳು ಓಡುತ್ತ ಬಂದು: "ಇಗೋ ನೋಡಿರಿ; ಯಾವನೋ ಒಬ್ಬ ಅರಸನು ಓಡಿ ಹೋಗುತ ಲಿದ್ದಾನೆ. ಹಿಡಿಯಿರಿ ಈತನನ್ನು; ಇವನಲ್ಲಿರುವದನ್ನೆಲ್ಲ ಸುಲಿಯಿರಿ. ಬಳಿಕ ಇವನನ್ನು ತುಂಡರಿಸಿ ಬಿಡಿರಿ, ಎಂದಂದರು. ಕೂಡಲೆ ಅವರೊ ಳಗಿನವನೊಬ್ಬನು ಟೀಪುವಿನ ಕೊರಳೊಳಗಿನ ಬಹು ಮೂಲ್ಯವಾದ ಕಂಠಾಭರಣವನ್ನು ಸೆಳೆದುಕೊಳ್ಳಹತ್ತಲು, ಆಗಲೂ ಸುಲ್ತಾನನು ಕೆಂಗಣ್ಣಿನಿಂದ ಅವನನ್ನು ನೋಡುತ್ತ:—ಏ ಕುತ್ತೇಕೇ ಅವಲಾದ! ಕಾಫೀರ!! ಎಂದು ಚೀರಿ, ತನ್ನ ಕಠಾರಿಯನ್ನು ಆ ಶಿಪಾಯಿಯ ಎದೆಯಲ್ಲಿ ಚುಚ್ಚಿ ಬಿಟ್ಟನು!

ಕೂಡಲೆ ಉಳಿದ ಇಂಗ್ಲಿಷ ಶಿಪಾಯಿಗಳು ಮತ್ತಿಷ್ಟು ಸಿಟ್ಟಿ ಗೆದ್ದರು. ಟೀಪುವಿನ ಜನರಿಗೂ ಅವರಿಗೂ ಯುದ್ಧಕ್ಕೆ ಪ್ರಾರಂಭ ವಾಯಿತು. ಅಷ್ಟರಲ್ಲಿ ಇಂಗ್ಲಿಷರ ಕಡೆಯ ೧೦೦-೧೫೦ ಜನ ಸೋಲ್ಜರರದೊಂದು ಟೋಳಿಯು ಅಲ್ಲಿಗೇ ಬಂದಿತು. ಆ ಬಂದವ ರಲ್ಲಿಯ ಒಬ್ಬಿಬ್ಬರಿಗೆ ಟೀಪುವಿನ ಗುರುತು ಹತ್ತಿತು. ಸೋಲ್ಜರ ರೆಂದರೆ ದ್ವಿಪಾದ ಹಿಂಸ್ರಪಶುಗಳೆಂದೇ ಇಂಗ್ಲಿಷರು ತಿಳಿಯುತ್ತಾರೆ. ಅದರಲ್ಲಿ ಟೀಪುಸುಲ್ತಾನನು ತಮ್ಮ ಜನರನ್ನು ಬಹು ನಿಷ್ಠುರತನದಿಂದ ಕೊಲ್ಲಿಸುತ್ತಾನೆಂಬ ಸಂಗತಿಯೂ ಅವರಿಗೆ ತಿಳಿದಿತ್ತು. ಅಂದಬಳಿಕ ಕೇಳುವದೇನು? ಹೆಂಡ ಕುಡಿದ ಮಂಗನಿಗೆ ಚೇಳು ಕಚ್ಚಿದಂತಾ ಯಿತು. ಕೂಡಲೆ ಒಬ್ಬ ಸೋಲ್ಜರನು ತನ್ನ ರಾಯಫಲನಿಂದ ಟೀಪು ವಿಗೆ ಗುಂಡು ಹಾಕಿ, ಅವನನ್ನು ಕೊಂದೇ ಬಿಟ್ಟನು!

ಸುಲ್ತಾನನು ಮಡಿದ ಬಳಿಕ ಅಂದು ಆ ಶ್ರೀರಂಗಪಟ್ಟಣದಲ್ಲಿ ಉಂಟಾದ ಗೊಂದಲವನ್ನು ಯಾರು ಹೇಳಬೇಕು? ಎಲ್ಲ ಕಡೆಗೂ ಅಲ್ಲೋಲ-ಕಲ್ಲೋಲವಾಯಿತು! ಆತನ ಶವವನ್ನು ಅದೇ ಪಲ್ಲಕ್ಕಿಯೊಳಗಿಂದ ಅರಮನೆಗೆ ಒಯ್ದರು. ಸುಲ್ತಾನನ ಮಹಾಲಿನಲ್ಲಿ ಆಗ ಉಂಟಾದ ಶೋಕವನ್ನು ಅದಾವ ಕಠಿಣ ಹೃದಯನು ವರ್ಣಿಸುತ್ತ ಕುಳಿತಾನು? ಸುಲ್ತಾನನ ವೃದ್ಧ ತಾಯಿಗೂ, ಆತನ ಪ್ರಿಯ ಪತ್ನಿಯಾದ ಫರೀದಾ ಬೀಬಿಗೂ ವಿಶೇಷವಾಗಿ ದುಃಖವಾಯಿತು. ಮಕ್ಕಾದಿಂದ ಈ ಮೊದಲೇ ತರಿಸಿಟ್ಟದ್ದ ಪವಿತ್ರ ಪ್ರೇತವಸ್ತ್ರಗಳನ್ನು ಟೀಪುವಿನ ಪ್ರೇತಕ್ಕೆ ತೊಡಿಸಿದರು. ಮುಲ್ಲಾಜಿಯು ಬಂದು ನಮಾಜ ಹೇಳಹತ್ತಿದನು. ಆ ಕಾಲಕ್ಕೆ ಇಂಗ್ಲಿಷರು ಒಳ್ಳೇ ಸೌಜನ್ಯದಿಂದ ನಡೆದರು. ಅವರು ತಮ್ಮ ಬೇಂಡಬಾಜಾವಾದ್ಯವನ್ನು ಸುಲ್ತಾನನ ಸನ್ಮಾನಾರ್ಥವಾಗಿ ಆತನ ಅಂತ್ಯವಿಧಿಗೆ ಕಳಿಸಿದ್ದರಲ್ಲದೆ, ದುಃಖ ಪ್ರದರ್ಶನಕ್ಕೆಂದು ಕೆಲ ತೋಫುಗಳನ್ನೂ ಹಾರಿಸಿದರು. ಹೀಗೆ ಸುಲ್ತಾನನ ಅಂತ್ಯವಿಧಿಯು ಬಹು ಸಂಭ್ರಮದಿಂದಲೂ, ಶಾಂತತೆಯಿಂದಲೂ ಪಟ್ಟಣದಲ್ಲಿ ಜರುಗಿತು.

——0——

## ಉಪಸಂಹಾರ.

ಟೀಪುಸುಲ್ತಾನನು ಸತ್ತು ಹೋದ ಬಳಿಕ ಶ್ರೀರಂಗಪಟ್ಟಣವನ್ನು ಹಸ್ತಗತ ಮಾಡಿಕೊಳ್ಳಲಿಕ್ಕೆ ಬ್ರಿಟಿಶರು ಆಯಾಸಪಡುವ ಕಾರಣವೇ ಉಳಿಯಲಿಲ್ಲ. ಟೀಪುವಿನ ಉಪದ್ರವಕ್ಕೆ ಬೇಸತ್ತಿದ್ದ ಜನರು ಇಂಗ್ಲಿಷರಿಗೆ ತಾವಾಗಿಯೇ ಸಹಾಯಕರಾದರು. ಪಟ್ಟಣದ ಕಾಳಗದಲ್ಲಿ ಟೀಪುವಿಗೆ ಸೋಲು ಉಂಟಾಗಲಿಕ್ಕೆ ಕಾರಣವೆಂದರೆ: ಟೀಪುವಿನ ಕಡೆಯ ಮುಖ್ಯಸ್ಥನೊಬ್ಬನು ಇಂಗ್ಲಿಷರಿಗೆ ಫಿತೂರಾಗಿ, ಆಯುತ ಸಮಯದಲ್ಲಿ ಅವನ ಮದ್ದಿನ ಕೋಣೆಗಳಲ್ಲಿ ಎಣ್ಣೆ ಸುರುವಿಸಿದನೆಂದು

ಅನ್ನುವರು. ಆ ಮದ್ದಿನ ಕೋಣೆಗಳ ಅವಶೇಷಗಳನ್ನು ಈಗಲೂ ಶ್ರೀರಂಗಪಟ್ಟಣ ರೇಲ್ವೆ ಸ್ಟೇಶನ್ನಿನ ಹತ್ತರ ಪಶ್ಚಿಮ ದಿಕ್ಕಿಗೆ ಕಾಣ ಬಹುದು ಇಂಗ್ಲಿಷರಿಗೆ ಹಿತಕಾರಾದ ಗೃಹಸ್ಥರಲ್ಲಿ ಮೈಸೂರದೇಶದ ಅಭ್ಯುದಯಕ್ಕೆ ಕಾರಣನಾಗಿದ್ದ ಪೂರ್ಣಯ್ಯನ ಹೆಸರನ್ನು ಹಲಕೆಲವು ಇತಿಹಾಸಜ್ಞರಾಗಲಿ, ಕವನೆಗಾರರಾಗಲಿ ಎತ್ತಿರುತ್ತಾರಂತೆ; ಆದರೆ ಆ ಸಂಗತಿಯು ಅಷ್ಟೊಂದು ವಿಶ್ವಸನೀಯವಾಗಿ ತೋರುವದಿಲ್ಲ. ಹೇಗೆಯೋ ಇರಲಿ; ದಕ್ಷಿಣ ಹಿಂದುಸ್ತಾನದಲ್ಲಿಯ ಒಂದು ಪ್ರಚಂಡ ವಾದ ಮುಸಲ್ಮಾನೀ ರಾಜ್ಯವು ಇಂಗ್ಲಿಷರ ಕಾರಸ್ಥಾನದ ಮೂಲಕ ನಾಮಶೇಷವಾಯಿತೆಂಬ ಸಂಗತಿಯು ಮಾತ್ರ ನಿರ್ವಿವಾದವಾಗಿದೆ.

ಟೀಪುವು ಸತ್ತು ಅವನ ರಾಜ್ಯವು ಹಸ್ತಗತವಾದ ಬಳಿಕ, ಇಂಗ್ಲಿಷರ ಕೈದಿನಲ್ಲಿದ್ದ ಟೀಪುವಿನ ಕಡೆಯ ಜನರು ಸ್ವಾಭಾವಿಕ ವಾಗಿಯೇ ಬಂಧಮುಕ್ತರಾದರು. ಆಗ ಕಾಸೀಮನು ಮನಸ್ಸು ಮಾಡಿದ್ದರೆ, ಅವನಿಗೆ ಇಂಗ್ಲಿಷರ ದಂಡಿನಲ್ಲಿ ಬಹು ಮರ್ಯಾದೆಯು ಚಾಕರಿಯು ಸಹಜವಾಗಿ ದೊರಕುತ್ತಿತ್ತು; ಆದರೆ ಅವನು ಆ ಮಾರ್ಗಕ್ಕೆ ಹತ್ತಲಿಲ್ಲ ಟೀಪುವಿನ ನಿಂದ್ಯಾಚರಣೆಯು ಅವನಿಗೆ ಎಳ್ಳಷ್ಟು ಸೇರುತ್ತಿದ್ದಿಲ್ಲವಾದರೂ ಅವನು ಅತನನ್ನು ಎಂದೂ ನಿಂದಿಸುತ್ತಿರ ಲಿಲ್ಲ ಅದಕ್ಕೆ ಸ್ವಧರ್ಮಾಭಿಮಾನದ ಕಾರಣದ ಹೊರತು ಬೇರೆ ಮಹತ್ವದ ನೆವವಿರಲಿಲ್ಲ. ಉಪ್ಪುಂಡವನ್ನು ನಿಂದಿಸುವದು ಮುಸ ಲ್ಮಾನೀ ಧರ್ಮದಲ್ಲಿ ಕೇವಲ ನಿಂದ್ಯವೆಂದು ಹೇಳಿದೆ ಆದುದರಿಂದ ಆ ಧರ್ಮಭೀರುವು ತನ್ನ ಅನ್ನದಾತೃವನ್ನು ಯಾವಾಗಲೂ ಪ್ರಶಂಸಿ ಸುತ್ತಲೇ ಇರುತ್ತಿದ್ದನು.

ಕಾಸೀಮನು ಹೀಗೆ ಟೀಪುವನ್ನು ಸದಾ ಹೊಗಳುವದನ್ನು ಕಂಡು ಹರ್ಬರ್ಟ್‌ಕ್ಯಾಂಪ್ಬೆಲ್ಲನ ಭಾವ-ಮೈದುನನು ಒಮ್ಮೆ ಅವನಿಗೆ: "ಕಾಸೀಮಅಲ್ಲೀ, ನೀನು ನಿನ್ನ ಒಡೆಯನನ್ನು ಬಹು ಸರಿಯಾಗಿ

ಸ್ತುತಿಸುತ್ತಿರುವೆ; ಆದರೆ ಅವನು ಅಷ್ಟು ಸ್ತುತಿಗೆ ಪಾತ್ರನಿರುವ ದಿಲ್ಲ ಆತನು ಬಡ ಹಿಂದುಗಳನ್ನೂ, ಇತರ ಧರ್ಮೀಯರನ್ನೂ ಗೋಳಾಡಿಸಿದುದು ಆತನ ಕೀರ್ತಿಗೆ ಕಲಂಕವನ್ನುಂಟು ಮಾಡುವ ದಿಲ್ಲವೇ?'' ಎಂದು ಪ್ರಶ್ನೆ ಮಾಡಲು, ಕೂಡಲೆ ಕಾಸೀಮನು:— ನೀವನ್ನುವದು ಕೆಲಮಟ್ಟಿಗೆ ನಿಜವಾಗಿದ್ದರೂ, ಟೀಪುವಿನಂಥ ಶೂರ ನೂ, ಮುತ್ಸದ್ದಿಯೂ ಇನ್ನು ಈ ಹಿಂದುಸ್ತಾನದಲ್ಲಿ ತೀವ್ರವೇ ಜನ್ಮ ವೆತ್ತಲಾರನೆಂಬದಕ್ಕೆ ನೀವಾದರೂ ಸಮ್ಮತಿಸಬಹುದು. ಯಾಕಂ ದರೆ ಆತನು ಬಹು ಸಾಹಸಿಗನಿದ್ದನು. ಆತನ ಕಾರಸ್ಥಾನವು ಬಹು ದೂರದ ವರೆಗೆ ನಡೆದಿತ್ತು. ಮನುಷ್ಯರನ್ನು ಒಲಿಸಿಕೊಳ್ಳುವ ವಿಷಯ ದಲ್ಲಂತೂ ಅವನನ್ನು ಹೋಲುವವರು ವಿರಳವೆಂದೇ ಹೇಳಬಹುದು. ಆತನ ಇಡಿ ರಾಜ್ಯದಲ್ಲಿ ಯಾವದೊಂದು ಮೂಲೆಯೊಳಗಿನ ಕಡ್ಡಿ ಕೂಡ ಆತನ ಹುಕುಮಿನ ಹೊರತು ಅಲ್ಲಾಡುವಂತಿರಲಿಲ್ಲ. ತೀರ ಕ್ಷುಲ್ಲಕ ಮಾತೇ ಯಾಕಾಗಲೊಲ್ಲದು, ಅದು ಆತನ ಕಿವಿಯ ವರೆಗೆ ಹೋಗಿ ಅವನಿಂದಲೇ ಅದರ ಇತ್ಯರ್ಥವಾಗುತ್ತಿತ್ತು. ಆ ವರೆಗೆ ನಡುವಿನವರಾರೂ ಅದರಲ್ಲಿ ಬಾಯಿ ಹಾಕಲಿಕ್ಕೆ ಎಳ್ಳಷ್ಟೂ ಅಸ್ಪದ ವಿರಲಿಲ್ಲ ಆತನು ಮಹಾ ಮಹತ್ವಾಕಾಂಕ್ಷಿಯು. ಆತನ ಧೈರ್ಯ ಕ್ಕಂತೂ ಬೆಲೆಯೇ ಇರಲಿಲ್ಲ ಅಂತೇ ಅವನು ವೀರರಿಗೆ ತಕ್ಕ ಮರಣ ವನ್ನು ಪಡೆದಿರುತ್ತಾನೆ. ಆತನು ತನ್ನ ನೌಕರರನ್ನು ಬಹು ಪ್ರೇಮ ದಿಂದ ನಡೆಸಿಕೊಳ್ಳುತ್ತಿದ್ದನು ಯಾವನನ್ನು ತನ್ನವನೆಂದು ತಿಳಿಯು ತ್ತಿದ್ದನೋ, ಆತನ ಹಿತದ ಕಡೆಗೆ ಅವನು ಸದಾ ಲಕ್ಷ್ಯಗೊಡುತ್ತಿ ದ್ದನು. ಆತನಲ್ಲಿ ಕೆಲ ಅವಗುಣಗಳು ಇರಬಹುದು-ಇರಲಿಕ್ಕಿಲ್ಲೆಂದು ಅದಾರು ಹೇಳಬೇಕು? ಮನುಷ್ಯನು ಅನೀತಿಮಾನನೇ ಆಗಿರುವನು. ಅಂತೇ ಅವನು ಈ ಲೋಕದಲ್ಲಿ ಆಗಾಗ್ಗೆ ನಾನಾ ವಿಪತ್ತುಗಳಿಗೆ ಗುರಿಯಾಗಬೇಕಾಗುತ್ತದೆ; ಆದರೆ ನಮ್ಮ ಟೀಪೂಸುಲ್ತಾನಸಾಹೇಬ

ರಲ್ಲಿ ನಾಸು ಮೇಲೆ ವಿವರಿಸಿದ ಸುಗುಣಗಳು ಸಂಪೂರ್ಣವಾಗಿ ನೆಲೆಸಿ ದ್ದರಿಂದ, ಅವರು ಶ್ರೇಷ್ಠ ಕೋಟಿಯಲ್ಲಿ ಗಣ್ಯರಾಗತಕ್ಕವರೇ ಸರಿ'' ಎಂದು ಉತ್ತರ ಕೊಟ್ಟನು.

ಕಾಸೀಮನ ಆ ಮಾತಿಗೆ ಕ್ಯಾಂಪ್ಬೆನ್ನನ ಭಾವ-ಮೈದುನ ನಾದ ಆ ಸೇನಾಪತಿಯು ಮನಃಪೂರ್ವಕವಾಗಿ ಸಮ್ಮತಿಸಿದನು. ಪಟ್ಟಣವು ಇಂಗ್ಲಿಷರ ಹಸ್ತಗತವಾದ ಬಳಿಕ, ಆ ಸೇನಾಪತಿಯು ಕ್ಯಾಂಪ್ಬೆನ್ನನ ಶೋಧವನ್ನು ಹಿತ್ತರದಿಂದ ನಡೆಸಿದನು. ಕಾಸೀಮನೂ ಅಮೀನೆಯು ಹೈದರಾಬಾದಿಗೆ ಸುರಕ್ಷಿತವಾಗಿ ತಲುಪಿದಳೋ- ಇಲ್ಲವೋ ಎಂಬ ಸಂಗತಿಯನ್ನು ತಿಳಿಯುವದಕ್ಕಾಗಿ ಪ್ರಯತ್ನ ನಡಿಸಿ ದನು. ಅಲ್ಪಾವಕಾಶದಲ್ಲಿಯೇ ಕಾಸೀಮನಿಗೆ ವಿಶ್ವಸನೀಯವಾದ ಸಂಗತಿಯು ತಿಳಿಯಿತು. ಅದು ಎಂತೆಂದರೆ:-''ಅಮೀನೆಯು ಮೀರನ ಹಾಗು ಝುಲಫೀಕರ ಇವರೊಡನೆ ಕೆಲ ದಿನ ಬೆಂಗಳೂರ ಬಳಿಯ ಲ್ಲಿದ್ದು, ಔಷಧೋಪಚಾರ ಹೊಂದುತ್ತಿರಲಿಕ್ಕೆ ಖಾನನು ತೀರಿಕೊಂಡ ಸುದ್ದಿಯು ಅವಳಿಗೆ ಬಡಿಯಿತು. ಕೂಡಲೆ ಅವರೆಲ್ಲರು ವಿಹ್ವಲಚಿತ್ತ ರಾಗಿ ಅಲ್ಲಿಂದ ಎತ್ತೋ ಹೊರಟು ಹೋದರು. ಬಹುಶಃ ಅವರು ಹೈದರಾಬಾದದ ಕಡೆಗೇ ಹೋಗಿರಬಹುದಾಗಿದೆ.''

ಮುಂದೆ ಹಿಂದೆರಡು ದಿನಗಳಲ್ಲಿ ಕಾಸೀಮನು ಅಮೀನೆಯ ಶೋಧಕ್ಕಾಗಿ ಹೊರಡುವವನಿದ್ದನು. ಅಷ್ಟರಲ್ಲಿ ಜಾಫರ ಜಮಾದಾ ರನಿಗೆ ಖಾನನು ಸತ್ತ ಸುದ್ದಿ ಬಡಿದ ಮೂಲಕಅವನು ಅಮೀನೆಯ ಶೋಧ ಮಾಡುತ್ತ ಪಟ್ಟಣಕ್ಕೇ ಬಂದನು. ಆತನು ತನ್ನ ಮನಸ್ಸಿ ನಲ್ಲಿ ಯೋಚಿಸಿದ್ದೇನಂದರೆ: ಖಾನನ ಈ ಸುಂದರ ಸ್ತ್ರೀರತ್ನವನ್ನು ಹೇಗಾದರೂ ಮಾಡಿ ಸುಲ್ತಾನನ ಝನಾನಖಾನೆಯಲ್ಲಿ ಸೇರಿಸಿ, ಅವನನ್ನು ಪ್ರಸನ್ನೀಕರಿಸಿಕೊಳ್ಳಬೇಕು. ನಂತರ ಖಾನನ ಎಲ್ಲ ಧನ- ದೌಲತ್ತುಗಳನ್ನೂ, ಸಾಧ್ಯವಾದರೆ ಅವನ ಮಧ್ಯಮ ಹೆಂಡತಿಯಾದ

ಕುಲಸಮುಳನ್ನೂ ವಶಪಡಿಸಿಕೊಳ್ಳಬೇಕೆಂದು; ಆದರೆ ಜಾಫರನು ಪಟ್ಟಣವನ್ನು ತಲುಪುವಷ್ಟರಲ್ಲಿಯೇ ಸುಲ್ತಾನನೂ ಮಡಿದು, ಅತನ ರಾಜ್ಯವೆಲ್ಲ ಬ್ರಿಟಿಶರ ಹಸ್ತಗತವಾಗಿ ಹೋಗಿತ್ತು. ಇದರಿಂದ ಅವನ ಎಲ್ಲ ಬೇತುಗಳೂ ಮಣ್ಣು ಪಾಲಾಗಿ ಬಿಟ್ಟವು. ಜಾಫರನ ಆ ಎಲ್ಲ ಬೇತುಗಳು ಅವನ ಸಹಚರಿಣಿಯಾದ ಸೋಝುನಳ ಮುಖಾಂತರ ಝುಲಫೀಕರನಿಗೆ ತಿಳಿಯಲು, ಆತನು ತನ್ನ ಹಡತಿಯನ್ನು ಆ ನೀಚರ ಬಲೆಯಿಂದ ತಪ್ಪಿಸುವದಕ್ಕಾಗಿಯೇ ಅಂದು ರಾತ್ರಿಯಲ್ಲಿ ಕಾಸೀಮನು ತಡೆಯನ್ನುಂಟುಮಾಡಿದರೂ ಕೇಳದೆ, ಅವಳೊಡನೆ ಎಲ್ಲಿಯೋ ಹೊರಟು ಹೋದನು. ಅವರು ಎಲ್ಲಿಗೆ ಹೋದರೆಂಬದು ಮಾತ್ರ ಸೋಝುನ, ಜಾಫರ ಹಾಗು ಮಾದರಚೋದ ಈ ಚಾಂಡಾಲತ್ರಯ ರಿಗೆ ಗೊತ್ತಾಗಲಿಲ್ಲ; ಗೊತ್ತಾಗಿದ್ದರೆ ಅವರು ಎಂದಿಗೂ ಸುಮ್ಮನೆ ಬಿಡುವವರಲ್ಲ.

ಜಾಫರನೇ ಮೊದಲಾದವರನ್ನು ಠಕ್ಕಿಸುವ ಸಲುವಾಗಿ ಅವರು ಮೊದಲು ಬೇರೆ ದಾರಿ ಹಿಡಿದು ಹೋದಂತೆ ನಟಿಸಿದ್ದರೂ, ಅವರೆ ಲ್ಲರೂ ಹೈದರಾಬಾದಿಗೇ ಹೋಗಿರಬೇಕೆಂದು ಕಾಸೀಮನು ನಿರ್ಧರಿಸಿ ದನು. ಯಾಕಂದರೆ ತನ್ನ ತವರು ಮನೆಯ ಹೊರತು ಅಮೀನೆಗೆ ಇನ್ನು ಬೇರೆ ಆಶ್ರಯಸ್ಥಾನವೇ ಇರಲಿಲ್ಲ. ಅಂದಮೇಲೆ ಕಾಸೀಮನು ಅತ್ತ ಕಡೆಗೇ ಹೊರಡುವ ಸಿದ್ಧತೆ ನಡಿಸಿದನು; ಆದರೆ ಹರ್ಬರ್ಟ ಕ್ಯಾಂಪ್ಬೆನ್ನನ ಶೋಧ ಮಾಡಿ ಕೊಡುವ ಕೆಲಸದಲ್ಲಿ ನಿಮಗೆ ಶಕ್ತಿ ಮೀರಿ ಸಹಾಯ ಮಾಡುವೆನೆಂದು ಕ್ಯಾಂಪ್ಬೆನ್ನನ ಭಾವ-ಮೈದುನ ನಿಗೆ ಆತನು ವಚನಬದ್ಧನಾಗಿದ್ದರಿಂದ, ಆ ಕೆಲಸವಾಗದ ಹೊರತು ಅವನು ಪಟ್ಟಣವನ್ನು ಬಿಟ್ಟು ಹೊರಡುವಂತಿರಲಿಲ್ಲ ಕ್ಯಾಂಪ್ಬೆನ್ನನನ್ನು ಟೀಪುವು ಯಾವ ತುರಂಗದಲ್ಲಿಟ್ಟಿರುವನೆಂಬದು ಜಾಫರನ ಹೊರತು ಉಳಿದವರಿಗೆ ಗೊತ್ತಿಲ್ಲವೆಂದು ಕಾಸೀಮನಿಗೆ ಅನಿಸುತ್ತಿತ್ತು. ಅದೇ

ಕಾಲಕ್ಕೆ ಜಾಫರನು ಪಟ್ಟಣಕ್ಕೆ ಬಂದದ್ದು ಅವನಿಗೆ ಗೊತ್ತಾಗಲು, ಕೂಡಲೆ ಅವನು ಕ್ಯಾಂಪ್ಬೆನ್ನನ ಭಾವ-ಮೈದುನನಿಗೆ ಹೇಳಿ ಜಾಫರನನ್ನು ಹಿಡತರಿಸಿ ಪರಭಾರೆಯೇ ಅವನಿಗೆ ಆ ವಿಷಯವಾಗಿ ಕೇಳಹಚ್ಚಿದನು ಆ ಬದ್ಮಾಷನು ಮೊದಮೊದಲು ನಿಜ ಸಂಗತಿಯನ್ನು ಉಸುರಲೇ ಇಲ್ಲ ಕಡೆಗೆ ಕ್ಯಾಂಪ್ಬೆನ್ನನ ಭಾವ-ಮೈದುನನು ಆತನ ಎದೆಯ ಮೇಲೆ ತನ್ನ ಪಿಸ್ತೂಲನ್ನಿಟ್ಟು:— ನಿಜವಾದ ಸಂಗತಿಯನ್ನು ತಿಳಿಸಿದರೆ ಮಾತ್ರ ನೀನು ಇಲ್ಲಿಂದ ಸುಖರೂಪವಾಗಿ ಪಾರಾಗುವಿ; ಇಲ್ಲದಿದ್ದರೆ ಈಗಲೇ ಈ ಗುಂಡಿನಿಂದ ನಿನ್ನನ್ನು ಯಮಸದನಕ್ಕಟ್ಟುವೆನು ನೋಡು, ಎಂದು ಗದ್ದರಿಸಲು, ಆ ಪೌರುಷಗೇಡಿಯು ಅದಕ್ಕಂಜಿ, ನಿಜಸಂಗತಿಯನ್ನು ತಿಳಿಸಿದನು.

ಕೂಡಲೆ ಆತನು ತನ್ನ ಕೈಕೆಳಗಿನ ಕೆಲ ಜನ ಸ್ವಾರರೊಡನೆ ಕಾಸೀಮನನ್ನು ಕ್ಯಾಂಪ್ಬೆನ್ನನನ್ನು ಸೆರೆಯಿಟ್ಟದ್ದ ಕೊಯಿಮುತ್ತೂರ ಪ್ರಾಂತದೊಳಗಿನ ಆ ದುರ್ಗಮ ಕಿಲ್ಲೆಗೆ ಕಳಿಸಿದನು. ಇವನು ಅಲ್ಲಿಗೆ ಹೋದಾಗ ಕ್ಯಾಂಪ್ಬೆನ್ನನು ತೀರ ಆಸನ್ನಮರಣಾವಸ್ಥೆಯಲ್ಲಿದ್ದನು. ಟೀಪುವು ಜೀವಂತನಿರುವ ವರೆಗೆ ಅವನಿಗೆ ಅಂತಿಂಥ ಅನ್ನವಾದರೂ ಹೊತ್ತಿಗೆ ಸರಿಯಾಗಿ ಸಿಗುತ್ತಿತ್ತು; ಆದರೆ ಟೀಪುವಿನ ಕೊಲೆಯಾದ ಬಳಿಕ ಅಲ್ಲಿಯ ಕಿಲ್ಲೆದಾರನು ಕ್ಯಾಂಪ್ಬೆನ್ನನು ಬದುಕಿರುವನೋ-ಸತ್ತಿರುವನೋ ಎಂಬದನ್ನು ಕೂಡ ನೋಡದಾಗಿದ್ದನು. ಈಚೆಗೆ ಏಳು ದಿನಗಳಿಂದ ಕೂಳಿಲ್ಲದ್ದರಿಂದ, ಅವನು ಕೇವಲ ನಿರ್ವಿಣ್ಣನಾಗಿ, ಬರೇ ಕಣ್ಣುಗಳಲ್ಲಿ ಜೀವವನ್ನು ಹಿಡಕೊಂಡು ಬಿದ್ದ ಸ್ಥಳದಲ್ಲಿಯೇ ಬಿದ್ದುಕೊಂಡಿದ್ದನು. ಕಾಸೀಮನು ಅಲ್ಲಿಗೆ ಹೋಗಿ ನೋಡಲು ಆ ಅಸ್ಥಿಪಂಜರದ ಮನುಷ್ಯನ ಗುರುತು ಇವನಿಗೆ ಹತ್ತಲಿಲ್ಲ; ಆದರೆ ಕ್ಯಾಂಪ್ಬೆನ್ನನಿಗೆ ಮಾತ್ರ ಇವನ ಗುರುತು ಹತ್ತಿತು. ಅದರಿಂದ ಅವನು ಸ್ಫೂರ್ತಿಗೊಂಡು:—ಕಾಸೀಮು ಅಲ್ಲೀ, ಯಾವಾಗ ಬಂದಿ?

ಎಂದು ನುಡಿದವನೇ ಕಣ್ಣು ಮುಚ್ಚಿದನು. ಅವನ ದನಿಯ ಗುರುತಿನಿಂದ ಇವನೇ ಹರ್ಬರ್ಟ ಕ್ಯಾಂಪ್ಬೆಲ್ಲನೆಂದು ತಿಳಿದು, ಕಾಸೀಮನು ಅವನನ್ನು ಚನ್ನಾಗಿ ಉಪಚರಿಸಿದನು. ಒಂದೆರಡು ದಿನಗಳಲ್ಲಿ ಆ ಕ್ಯಾಂಪ್ಬೆಲ್ಲನಿಗೆ ಮಾತಾಡುವಷ್ಟು ಶಕ್ತಿಯು ಬಂದಿತು. ನಂತರ ಅವರು ಆತನನ್ನು ಪಲ್ಲಕ್ಕಿಯಲ್ಲಿ ಹಾಕಿಕೊಂಡು ಶ್ರೀರಂಗಪಟ್ಟಣದ ಕಡೆಗೆ ಸಾಗಿದರು. ಕುಸ ದಿನಗಳಲ್ಲಿ-ಅವರೆಲ್ಲರೂ ಪಟ್ಟಣಕ್ಕೆ ತಲುಪುವಷ್ಟರಲ್ಲಿ-ಕ್ಯಾಂಪ್ಬೆಲ್ಲನು ಸತೇಜನಾದನು. ಅವನನ್ನು ಕಂಡು ಅವನ ತಂಗಿಯೂ, ಭಾವ-ಮೈದುನನೂ ಸಂತೋಷಭರಿತರಾದರು. ಕ್ಯಾಂಪ್ಬೆಲ್ಲನ ತಂಗಿಯೊಡನೆ ಬಂದಿದ್ದ ಆತನ ಭಾವೀಪತ್ನಿಗಾದ ಆನಂದವನ್ನಂತೂ ವರ್ಣಿಸಲಸದಳವು!

ಬಳಿಕ ಕ್ಯಾಂಪ್ಬೆಲ್ಲನು ತನ್ನ ಭಾವ-ಮೈದುನನ ಎದುರಿಗೆ ಕಾಸೀಮಅಲ್ಲಿಯನ್ನು ಬಹಳವಾಗಿ ಕೊಂಡಾಡಿದನಲ್ಲದೆ, ಈತನಿಂದಲೆ ನಾನು ನಿಮಗೆ ಭೇಟಿಯಾಗಿರುವದೆಂದು ತಿಳಿಸಿದನು. ಕುಸ ದಿನಗಳಲ್ಲಿಯೇ ಅವರೆಲ್ಲರೂ ಬೆಂಗಳೂರ ಮಾರ್ಗವಾಗಿ ಮದ್ರಾಸದ ಕಡೆಗೆ ಸಾಗಲು, ಕಾಸೀಮಅಲ್ಲಿಯು ಬೆಂಗಳೂರ ವರೆಗೆ ಅವರೊಡನೆ ಬಂದು, ಅಲ್ಲಿಂದ ಹೈದರಾಬಾದಿಗೆ ಹೋಗಲಿಕ್ಕೆ ಅವರ ಅಪ್ಪಣೆ ಕೇಳಿಕೊಂಡನು; ಆದರೆ ಆತನ ಆ ಬೇಡಿಕೆಯನ್ನು ಕೇಳಿ ಕ್ಯಾಂಪ್ಬೆಲ್ಲನಿಗೂ ಆತನ ಕುಟುಂಬದ ಜನರಿಗೂ ಬಹು ವಿಷಾದವೆನಿಸಿತು. ಅವರು ಆತನನ್ನು ಮತ್ತೆ ಕೆಲವು ದಿನಗಳ ವರೆಗೆ ಬೆಂಗಳೂರಲ್ಲಿ ತಮ್ಮಲ್ಲಿಯೇ ಇರಿಸಿಕೊಂಡರು. ಇಂಗ್ಲಿಷ ಸರಕಾರಕ್ಕೆ ಬರೆದು ಕಾಸೀಮಅಲ್ಲಿಗೆ ಟೀಪುವಿನ ರಾಜ್ಯದೊಳಗಿನ ಕೆಲ ಗ್ರಾಮಗಳನ್ನು ಉಂಬಳಿಯಾಗಿ ಕೊಡಿಸಬೇಕೆಂದು ಕ್ಯಾಂಪ್ಬೆಲ್ಲನ ಮನಸ್ಸಿನಲ್ಲಿತ್ತು; ಮತ್ತು ಅದಕ್ಕೆ ಕಾಸೀಮಅಲ್ಲಿಯು ಸಮ್ಮತಿಸಿದ್ದರೆ, ಆಗ ಅದು ಅಶಕ್ಯವೂ ಆಗಿರಲಿಲ್ಲ; ಆದರೆ ಆತನು:—ಯಾವ ರಾಜನ ಉಪ್ಪಿನಿಂದ ನನ್ನ

ಶರೀರದ ಪೋಷಣೆಯಾಗಿದೆಯೋ, ಆ ನನ್ನ ಪ್ರಿಯ ಟೀಪುಸುಲ್ತಾನನು ವೈರಿಗಳಿಂದ ಹತನಾಗಿರಲು, ಆತನ ಪಶ್ಚಾತ್ ಆ ರಾಜ್ಯದಲ್ಲಿಯ ಉಂಬಳಿಗಾರನು ನಾನಾಗಬೇಕೇ? ನನಗದು ಬೇಡ. ಉಂಡ ಮನೆಯ ಜಂತಿ ಎಣಿಸುವ ನೀಚಕೋಟಿಯೊಳಗಿನವನು ನಾನಲ್ಲ, ಎಂದು ನಿರ್ಧಾರಪೂರ್ವಕವಾಗಿ ತಿಳಿಸಿದನು. ಆದರಿಂದ ಅವನು ಆ ಬಗ್ಗೆ ಕಾಸೀಮನಿಗೆ ಒತ್ತಾಯ ಮಾಡಲಿಲ್ಲ.

ಕುಸ ದಿನಗಳಲ್ಲಿಯೇ ಇಂಗ್ಲಿಷ ಸರಕಾರದಿಂದ ಕಾಸೀಮನಿಗೆ ಬಹು ದೊಡ್ಡ ನಗದು ಕಾಣಿಕೆಯಾಗಿ ದೊರೆಕಿತು. "ನಮ್ಮ ಕಡೆಯ ಹರ್ಬರ್ಟ ಕ್ಯಾಂಪ್ಬನ್ನನ ಜೀವವುಳಿಸಿದುದಕ್ಕಾಗಿ ಈ ಅಲ್ಪ ಧನವು ನಿಮಗೆ ಸಮರ್ಪಿಸಲ್ಪಟ್ಟದೆ" ಎಂದು ಆ ಮೊತ್ತದೊಡನೆ ಒಂದು ಪತ್ರವಿದ್ದು, ಅದರ ಕೆಳಗೆ ಆಗಿನ ಹಿಂದುಸ್ತಾನದಲ್ಲಿಯ ಬ್ರಿಟಿಶರ ಮುಖ್ಯ ಅಮಲದಾರನ ಹೆಸರಿನ ಹಸ್ತಾಕ್ಷರಗಳಿದ್ದವು. ಇದಲ್ಲದೆ, ಅಬ್ದುಲ್‌ರಹಿಮಾನಖಾನನ ನಿಜವಾದ ವಾರಸದಾರರು ಯಾರೂ ಇರದ್ದರಿಂದ, ಅವನ ಮೃತ್ಯುಪತ್ರದ ಪ್ರಕಾರ ಆತನ ಎಲ್ಲ ಧನ-ದೌಲತ್ತುಗಳನ್ನು ಇಂಗ್ಲಿಷರು ಕಾಸೀಮನಿಗೇ ಕೊಟ್ಟರು. ಇನ್ನು ಶ್ರೀರಂಗಪಟ್ಟಣದಲ್ಲಿ ಇರುವದು ಪ್ರಯೋಜನಕರವಾದದ್ದಲ್ಲೆಂದು ಬಗೆದು, ಕಾಸೀಮನು ಆ ಇಸ್ಟೇಟನ್ನೆಲ್ಲ ಮಾರಿ, ನಗದು ಹಣ ಮಾಡಿ ಕೊಂಡನು. ಬಳಿಕ ಅವನು ತನ್ನ ಎಲ್ಲ ನಗದು ಹಣವನ್ನೂ ಸಂಗಡ ತಕ್ಕೊಂಡು ಹೈದರಾಬಾದಿಗೆ ಸಾಗಿದನು. ಕಾಸೀಮನು ತಮ್ಮ ದಂಡಿನಲ್ಲಿಯೇ ಚಾಕರಿಗಿರಬೇಕೆಂದು ಕ್ಯಾಂಪ್ಬೆ ಮೊದಲಾದವರು ಬಹಳ ಪ್ರಯತ್ನಿಸಿದರು; ಆದರೆ ಅದು ಕಡೆಗೂ ಸಾಧ್ಯವಾಗಲಿಲ್ಲ.

ಕಾಸೀಮನು ಹೊರಡಲು ಕ್ಯಾಂಪ್ಬನ್ನನೂ ಆತನ ಭಾವ-ಮೈದುನನೂ ಅವನನ್ನು ದೊಡ್ಡಬಳ್ಳಾಪುರದ ವರೆಗೆ ಕಳಿಸಬಂದರು. ಅಲ್ಲಿಯ ವರೆಗೆ ಅವರು ಬರಲಿಕ್ಕೆ ಮತ್ತೂ ಒಂದು ಕಾರಣವಿತ್ತು.

ಯಾವ ಫಕೀರನು ಕೇವಲ ಭೂತದಯಾ ಪ್ರೇರಿತನಾಗಿ ತನಗೆ ಔಷಧೋಪಚಾರ ಮಾಡಿದ್ದನೋ, ಯಾವನು ಸ್ವ-ಪರಭಾವವನ್ನು ಮನಸ್ಸಿನಲ್ಲಿ ತರದೆ, ತನ್ನ ಗುಪ್ತಪತ್ರವನ್ನು ಇಂಗ್ಲಿಷ ಆಫೀಸರನಿಗೆ ತಲುಪಿಸಿದ್ದನೋ, ಆ ದೊಡ್ಡಬಳ್ಳಾಪುರದ ಮಹಾತ್ಮಾ ಫಕೀರನಿಗೆ ಭೇಟಿಯಾಗುವ ಸಲುವಾಗಿ ಅವರು ಅಲ್ಲಿಗೆ ಬಂದಿದ್ದರು. ಆ ವೃದ್ಧ ಫಕೀರನು ಕ್ಯಾಂಪ್ಬೆಲ್ಲನನ್ನು ಕಂಡು ಹಿರಿ-ಹಿರಿ ಹಿಗ್ಗಿದನು. ಅತನು:— "ಬೇಟಾ, ಅಲ್ಲಾ ತುಮಕೂ ಭಲಾ ಕರೇಗಾ" ಎಂದು ಆಶೀರ್ವದಿಸಿದನು.

ಅಲ್ಲಿಂದ ಕಾಸೀಮನು ಹೈದರಾಬಾದದ ಹಾದಿ ಹಿಡಿದನು; ಕ್ಯಾಂಪ್ಬೆಲ್ಲಾದಿಗಳು ಬೆಂಗಳೂರಿಗೆ ಹಿಂದಿರುಗಿದರು. ಹೈದರಾಬಾದಿಗೆ ಕಾಸೀಮನು ತಲುಪಿದ ಬಳಿಕ ಎಲ್ಲಕ್ಕೂ ಮೊದಲು ಝುಲಫೀಕರನ ಶೋಧ ಹಚ್ಚಿದನು ಕಾಸೀಮನನ್ನು ಕಂಡು ಅವನಿಗೂ, ಅವನ ತಂಗಿಗೂ ಬಲು ಹಿಗ್ಗು ಉಂಟಾಯಿತು. ನಂತರ ಮಿರನಳು ಅವನನ್ನು ಒತ್ತಟ್ಟಿಗೆ ಬರಮಾಡಿಕೊಂಡು:—ಕಾಸೀಮಅಲ್ಲೀ, ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು? ಅಮೀನೆಯು ಈಗಾಗಲೆ ಕೈ ಬಿಡತಕ್ಕವಳು; ಆದರೆ ನಿಮ್ಮ ಸಲುವಾಗಿ ಪ್ರಾಣ ಧರಿಸಿಕೊಂಡಿರುತ್ತಾಳೆ. ಇನ್ನು ನೀವು ಅವಳೊಡನೆ ನಿಕಾ ಮಾಡಿಕೊಳ್ಳಬೇಕು. ನಿಕಾ ಮಾಡಿಕೊಳ್ಳುವ ಪದ್ಧತಿಯು ನಮ್ಮ ಮುಸಲ್ಮಾನೀಧರ್ಮಕ್ಕೆ ವಿರುದ್ಧವಾಗಿಲ್ಲ. ಅಮೀನೆಯು ಇನ್ನೂ ಹುಡುಗೆಯು ಮೇಲಾಗಿ ಅವಳ ಸಮ್ಮತಿಯ ಹೊರತು ಅವಳನ್ನು ಆ ಖಾನನಿಗೆ ಕೊಟ್ಟಿತ್ತೆಂಬದು ಸರ್ವಶ್ರುತವಿದೆ. ಆದರಿಂದ ನೀವು ಅವಳೊಡನೆ 'ನಿಕಾ' ಮಾಡಿಕೊಳ್ಳುವದು ದೋಷಕರವಲ್ಲ, ಎಂದು ತಿಳಿಸಿದಳು.

ಮೊದಮೊದಲು ಕಾಸೀಮನಿಗೆ ಆ ಸಂಗತಿಯು ಅಷ್ಟೊಂದು ರುಚಿಸಲಿಲ್ಲ; ಆದರೆ ವಿಚಾರಾಂತ್ಯದಲ್ಲಿ ಅವನು ಅದಕ್ಕೆ ಸಮ್ಮತಿಸಿ

ದನು. ಕಾಸೀಮನು 'ಹೂಂ' ಎಂದದ್ದೊಂದೇ ತಡ; ಮರುದಿನವೇ ಅಮೀನೆ-ಕಾಸೀಮರ 'ನಿಕಾ' ವಿವಾಹವು ಸಾಂಗವಾಯಿತು. ಮೀರನಳು ಈ ಮೊದಲೇ ಅಮೀನೆಯ ತಾಯಿ-ತಂದೆಗಳ ಹಾಗು ಸ್ವತಃ ಅಮೀನೆಯ ಮನಸ್ಸನ್ನು ಒಲಿಸಿಕೊಂಡಿದ್ದಳು. ಅಂದು ಮುಲ್ಲಾಜಿಯು ಬಂದು ಕುರಾಣದೊಳಗಿನ ಕೆಲ ವಾಕ್ಯಗಳನ್ನು ಉಭಯ ವಧೂ-ವರಗಳ ಬಾಯಿಂದ ಹೇಳಿಸಿದನು. ಮುಸಲ್ಮಾನೀ ಕಾಯಿದೆಯ ಮೇರೆಗೆ ಕಾಸೀಮನು ಪಟ್ಟಣದಿಂದ ತಂದ ಸೊತ್ತಿನಲ್ಲಿಯ ಕೆಲ ಭಾಗವನ್ನು ಅಮೀನೆಯ ಹೆಸರಿಗೆ ಬರೆದುಕೊಟ್ಟನು ಅಮೀನೆಯ ಸ್ವಂತದ ಜಿಂದಿಗೆಯು ಕಾಸೀಮನ ಅಧೀನದಲ್ಲಿ ಬರುವ ಕಾಗದ-ಪತ್ರಗಳೂ ಆದವು. ದಿವಾಣಖಾನೆಯ ಮಧ್ಯದಲ್ಲಿ ಒಂದು ಪರದೆಯನ್ನು ಇಳಿಬಿಟ್ಟಿದ್ದರು. ಮುಲ್ಲಾಜಿಯು ಕುರಾಣಪಠಣವಾದ ಬಳಿಕ ಎಲ್ಲ ಗಂಡಸರೂ ಹೆಂಗಸರೂ ಅಲ್ಲಿಂದ ಹೊರಟು ಹೋದರು. ಶೃಂಗರಿಸಲ್ಪಟ್ಟಿದ್ದ ಆ ವಿಶಾಲವಾದ ದಿವಾಣಖಾನೆಯಲ್ಲಿ ಪರದೆಯ ಒಂದು ಮಗ್ಗಲಿಗೆ ಕಾಸೀಮನೂ, ಮತ್ತೊಂದು ಮಗ್ಗಲಿಗೆ ಅಮೀನೆಯೂ ಹೀಗೆ ಎರಡೇ ವ್ಯಕ್ತಿಗಳು ಅಲ್ಲಿ ಉಳಿದವು. ನಾ ಮೊದಲು-ನಾ ಮೊದಲು ಎಂದು ಅವರೀರ್ವರೂ ಎರಡೂ ಮಗ್ಗಲಿನಿಂದ ಆ ಪರದೆಯನ್ನು ಎತ್ತಿ ಪರಸ್ಪರರನ್ನು ಕಣ್ತುಂಬ ನೋಡಿದರು. ಒಬ್ಬರನ್ನೊಬ್ಬರು ಬಿಗಿಯಾಗಿ ಅಪ್ಪಿಕೊಂಡರು. ಅಂದು ಅವರಿಗೆ ಜಗನ್ನಿಯಂತನ ಸಂಕಲ್ಪದ ವಿಷಯವಾಗಿ ಬಲು ಸೋಜಿಗವೆನಿಸಿತು. ಅವರ ಸೌಖ್ಯಕ್ಕೆ ಸೀಮೆಯೇ ಉಳಿಯಲಿಲ್ಲ.

\+ \+ \+ \+ \+

ಕಾಸೀಮನ 'ನಿಕಾ'ಕ್ಕೆ ಅವನ ವೃದ್ಧ ತಾಯಿಯೂ ಬಂದಿದ್ದಳು. ವಿವಾಹವಾದ ಕೆಲ ದಿನಗಳ ನಂತರ ಕಾಸೀಮನು ತನ್ನ ಹೆಂಡತಿಯನ್ನೂ ತಾಯಿಯನ್ನೂ ಕರಕೊಂಡು ಸ್ವಗ್ರಾಮಕ್ಕೆ ತೆರಳಿ

ದನು. ಕಾಸೀಮನು ಈಗ ಮೊದಲಿನಂತೆ ಬಡವನಾಗಿರಲಿಲ್ಲ. ಅವನಲ್ಲಿ ವಿಪುಲವಾದ ಸಂಪತ್ತು ಕೂಡಿ ಬಿದ್ದಿತ್ತು. ಟೀಪೂಸುಲ್ತಾನನ ಕಾಲದಲ್ಲಿ ಆತನ ವಕೀಲನಾಗಿ ಕಾಸೀಮನು ಹಿಮ್ಮೆ ಹೈದರಾಬಾದಿಗೆ ಬಂದಿದ್ದನಾದ್ದರಿಂದ, ಅವನ ವರ್ಚಸ್ಸು ಆ ಸಂಸ್ಥಾನದಲ್ಲಿ ಚೆನ್ನಾಗಿ ಬಿದ್ದಿತ್ತು. ಆಗಿನ ಗುರತು-ಪರಿಚಯದಿಂದ ಕಾಸೀಮನ ಪ್ರವೇಶವು ನಬಾಬನ ದರ್ಬಾರದಲ್ಲಿ ಆಗಿ, ನಬಾಬನಿಂದ ಅವನಿಗೆ ಕೆಲ ಜಹಗೀರು ಪ್ರಾಪ್ತವಾಯಿತು; ಅಲ್ಲದೆ, ಐದುನೂರು ಕುದುರೆಗಳ ಸರಂಜಾಮವೂ ದೊರಕಿತು. ತನ್ನ ಸುಗುಣದಿಂದಲೂ, ಶೌರ್ಯ-ಸಾಹಸಗಳಿಂದಲೂ ಹೈದರಾಬಾದದಲ್ಲಿಯೂ ಆತನು ಘನತೆಗೇರಿದನು. ಶೀಲವೇ ಸೌಖ್ಯದ ಮೂಲವು. ನಮ್ಮ ನರವೀರ ಕಾಸೀಮನು ತೀರ ಬಡತನದಲ್ಲಿ ಹುಟ್ಟಿ ಬೆಳೆದವನಾಗಿದ್ದರೂ, ಶೀಲವಂತನಾದ ಮೂಲಕ ಅವನು ಉತ್ತರೋತ್ತರ ಸುಖಿಯಾಗಿ ಬಾಳಿದನು.

* * * *

ಜಾಫರನಂಥ ಕಡು ನೀಚನಿಗೆ ಮನುಷ್ಯರಿಂದ ಶಿಕ್ಷೆಯಾಗುವದು ಅಯೋಗ್ಯವೆನಿಸಿದ್ದರಿಂದಲೋ-ಏನೋ ದೇವರು ಆತನನ್ನು ವಿಚಿತ್ರವಾದ ಸಂಕಟದಲ್ಲಿ ಕೆಡವಿದನು. ಶ್ರೀರಂಗಪಟ್ಟಣವು ಇಂಗ್ಲಿಷರ ಹಸ್ತಗತವಾದರೂ ಟೀಪುಸುಲ್ತಾನನ ಧನ-ದೌಲತ್ತುಗಳೇನೂ ಅವರಿಗೆ ಸಿಕ್ಕಿರಲಿಲ್ಲ. ಜಾಫರನು ಒಂದು ದಿನ ಗುಪ್ತವಾಗಿ ದರ್ಯಾದೌಲತ್ತಬಾಗಿಗೆ ಹೋಗಿ, ಅಲ್ಲಿಯ ವಿಪುಲವಾದ ಭೂಗತಧನವನ್ನು ಎಬ್ಬಿಸಿದನು. ಒಂದು ಹೇಸರಕತ್ತೆಯು ಹೊರಲಾರದಷ್ಟು ಬಂಗಾರ, ರತ್ನ, ಮುತ್ತು, ಹವಳ ಮುಂತಾದವುಗಳನ್ನು ತಕ್ಕೊಂಡು, ವ್ಯಾಪಾರಿಯ ವೇಷ ಧರಿಸಿ, ಮಾದರನನ್ನು ಆಳು ಎಂದು ಗೊತ್ತು ಮಾಡಿಕೊಂಡು, ಶ್ರೀರಂಗಪಟ್ಟಣದಿಂದ ಮದ್ರಾಸಕ್ಕೆ ಹೋಗಿ ಸುಖದಿಂದ ಕಾಲಹರಣ ಮಾಡಬೇಕೆಂದು ಹೊರಟನು; ಆದರೆ ಕಾವೇರಿ

ಹೊಳೆಯ ಹತ್ತಿರ ಬರುವಷ್ಟರಲ್ಲಿ ತಮ್ಮನ್ನು ಹಿಡಿಯಲು ಯಾರೋ ಧಾವಿಸಿ ಬರುತ್ತಿರುವದನ್ನು ಅವರು ಕಂಡರು. ಕೂಡಲೆ ಅವರು ಹೊಳೆಯಲ್ಲಿ ಬಿದ್ದರು; ಆದರೆ ಹೊಳೆಯಲ್ಲಿ ಬೀಳುವಾಗ ಆ ಧನವನ್ನು ಬಿಟ್ಟು ಹೋಗುವದು ಅವರಿಂದಾಗಲಿಲ್ಲ. ಆದರಿಂದ ಅವರೀರ್ವರೂ ತಮ್ಮ ತಮ್ಮ ಉಪವಸ್ತ್ರಗಳಲ್ಲಿ ಆ ದ್ರವ್ಯವನ್ನೆಲ್ಲ ಸುರುವಿ, ದೊಡ್ಡ ದೊಡ್ಡ ಮೊಟ್ಟೆಗಳನ್ನು ಮಾಡಿ ಬೆನ್ನಿಗೆ ಕಟ್ಟಿಕೊಂಡು ನೀರಲ್ಲಿ ಬಿದ್ದರು. ಅರ್ಧ ಪ್ರವಾಹವನ್ನು ಕೂಡ ದಾಟಿದರೋ-ಇಲ್ಲವೋ, ಅಷ್ಟರಲ್ಲಿ ಡುಬ್ಬಕ್ಕೆ ಕಟ್ಟಿದ್ದ ಆ ದ್ರವ್ಯದ ಗಂಟಿನ ಭಾರದ ಆಯಾಸದಿಂದ ಅವರೀರ್ವರೂ ನೀರಲ್ಲಿ ಮುಳುಗಿ ಸತ್ತುಹೋದರು! ಕಾಸೀಮನಂಥ ಶೀಲವಂತರು ಉತ್ತರೋತ್ತರ ಸುಖಿಗಳಾದರೆ, ಜಾಫರನಂಥ ದುಃಶೀಲರು ಅಧೋಗತಿಗಿಳಿದು, ಹೀಗೆ ನದಿಯ ಪಾಲಾದರು!

‡ ‡ ‡ ‡ ‡ ‡

ಹರ್ಬರ್ಟ ಕ್ಯಾಂಪ್ಬನ್ನನು ಮದ್ರಾಸಿಗೆ ಹೋದ ಬಳಿಕ, ಒಂದು ವರ್ಷದ ರಜೆ ಪಡಕೊಂಡು ಸ್ವದೇಶಕ್ಕೆ ಹೋಗಿ, ತನ್ನ ತಾಯಿ-ತಂದೆಗಳಿಗೂ, ಆಪ್ತೇಷ್ಟರಿಗೂ ಭೇಟಿಯಾದನು. ಮುಂದೆ ಒಂದು ಸುಮುಹೂರ್ತದಲ್ಲಿ ಅಲ್ಲಿಯ ಪ್ರಸಿದ್ಧ ಚರ್ಚದಲ್ಲಿ ಆ್ಯಮಿಯೊಡನೆ ಆತನ ವಿವಾಹವಾಯಿತು. ರಜೆ ತೀರಿದ ಮೇಲೆ ಅವನು ಪುನಃ ಹಿಂದುಸ್ತಾನಕ್ಕೆ ಬರಲು, ಅವನಿಗೆ ದಂಡಿನೊಳಗಿನ ದೊಡ್ಡ ಹುದ್ದೆಯ ಚಾಕರಿಯು ದೊರಕಿತು. ಕ್ಯಾಂಪ್ಬನ್ನನು ಸಾಯುವವರೆಗೂ ಕಾಸೀಮನ ಗುಣಗಳನ್ನು ಸ್ಮರಿಸುತ್ತಲೇ ಇದ್ದನು.

❋ ಸಂಪೂರ್ಣ ❋

ವನ್ನು ಹೇಗೆ ಸುಧಾರಿಸಬೇಕು?
ಸಮಾಧಾನಗಳನ್ನು ಹೇಗೆ ಹೊಂದಬೇಕು? ಹಳೆ-ಹೊಸ ಸಂಸ್ಕೃತಿ
ಗಳಲ್ಲಿಯ ನ್ಯೂನಾತಿರೇಕಗಳನ್ನು ಕಳೆದು, ಅವುಗಳಲ್ಲಿ ಹೇಗೆ ಐಕ್ಯತೆ
ಯನ್ನುಂಟು ಮಾಡಿ ಉಪಯೋಗಿಸಿಕೊಳ್ಳಬೇಕು? ಮುಂತಾದವು
ಗಳನ್ನು ಸೋಪಪತ್ತಿಕವಾಗಿಯೂ, ಸುಲಭ ಹಾಗು ಮಾರ್ಮಿಕ
ರೀತಿಯಿಂದಲೂ ಈ ಗ್ರಂಥಮಾಲೆಯ ಪುಸ್ತಕಗಳ ದ್ವಾರಾ ಪ್ರಕಟಿಸಿ
ಲೋಕಸೇವೆಯನ್ನು ಮಾಡುವದು

೨ ಧೋರಣ:—ಯಾವದೇ ಒಂದು ಬಗೆಯ ಒಂದೇ ಪ್ರಕಾ
ರದ ಒಲವುಗಳನ್ನನುಸರಿಸದೆ, ಎಲ್ಲ ಬಗೆಯ ವಿಷಯಗಳನ್ನು ನಾವೀ
ನ್ಯತೆಯಿಂದೊಡಗೂಡಿಸಿ ಈ ಗ್ರಂಥಮಾಲೆಯು ಮುಖಾಂತರ ಜನ
ರಲ್ಲಿ ಪ್ರಕಟಿಸುವದು. ಈ ಗ್ರಂಥಮಾಲೆಯಲ್ಲಿ ಬರೇ ಕಾದಂಬರಿ
ಗಳೇ ಹೊರಡುವವೆಂತಲ್ಲ; ಚರಿತ್ರ, ಪುರಾಣ, ನಾಟಕ, ಶಾಸ್ತ್ರೀಯ,
ಆಧ್ಯಾತ್ಮಿಕ ವಿಷಯಗಳೂ ಪ್ರಕಟಿಸಲ್ಪಡುವವು; ಆದರೆ ಆ ವಿಷಯ
ಗಳು ವಾಚಕರಿಗೆ ಸುಲಭವಾಗಿ ತಿಳಿಯುವ ಬಗ್ಗೆಯೂ, ಪುಸ್ತಕ
ವಾಚನದಿಂದ ವಾಚಕರಲ್ಲಿ ಒಂದುಬಗೆಯ ವಿಶೇಷ ತರದ ಆಂತರಿಕ
ಜಾಗ್ರತೆಯು ಉಂಟಾಗುವ ಬಗ್ಗೆಯೂ ಪ್ರಯತ್ನಿಸಲ್ಪಡುವದು

೩ ಬಾಹ್ಯಾಂಗ:—ಗ್ರಂಥಗಳ ಅಂತರಂಗದಂತೆ ಬಾಹ್ಯಾಂ
ಗದ ಸೌಂದರ್ಯದ ಕಡೆಗೂ ಹೆಚ್ಚಾಗಿ ಪ್ರಯತ್ನಿಸಲಾಗುವದು.

ರಗಿಂತ ಹೆಚ್ಚು

(ಈಗಿನ ಮಾನದಿಂದಂತೂ)

ಪ್ರತಿಸಾರೆಗೆ ಎರಡು ಬೇರೆ ಬೇರೆ ವಿಷ

ಪುಸ್ತಕಗಳು ಹೊರಬೀಳುವವು; ಹಾಗು ಅವೆರಡರ
ಬೆಲೆಯೂ ಟ. ಖ. ಸಹಿತ ೨|| ರೂ. ಗೆ ಎಂದೂ ಮೀರಲಿಕ್ಕಿಲ್ಲ. ಹೊಸ
ಪುಸ್ತಕಗಳು ಹೊರಡುವ ಮೊದಲು ಎಲ್ಲ ಕಾಯಂ ಗ್ರಾಹಕರಿಗೂ
ಮುಖಾಂತರ ತಿಳಿಸಿಯೇ, ಅವುಗಳನ್ನು ಯೋಗ್ಯ ರಿಯಾಯ
ತಿಯ ಬೆಲೆಗೆ ವ್ಹಿ. ಪಿ. ಮೂಲಕ ಕಳಿಸಲಾಗುವದು.

೫ ಬೇಡಿಕೆ:—ಪುಸ್ತಕಗಳು ಸಿದ್ಧವಾಗುತ್ತಲೆ ಸ. ಚಂದ್ರಿಕೆ
ಯಲ್ಲಿ ಪ್ರಕಟಿಸಲ್ಪಡುವದು. ಬಳಿಕ ಶ್ರೀ ಶೇಷಾಚಲ ಗ್ರಂಥಮಾಲೆಯ
ಕಾಯಂ ಗ್ರಾಹಕರೂ ಕೂಡ ಮತ್ತೆ ಪತ್ರ ಬರೆದೇ ಪುಸ್ತಕ ತರಿಸಿ
ಕೊಳ್ಳಬೇಕು. ಅಂದರೆ ಯೋಗ್ಯ ಬೆಲೆಗೆ ವ್ಹಿ. ಪಿ. ಮೂಲಕ ಕಳಿ
ಸಲಾಗುವವು. ವ್ಹಿ. ಪಿ. ಪರತ ಬಿಟ್ಟವರಿಗೆ ಪುಸ್ತಕಗಳು ರಿಯಾಯ
ತಿಯ ಬೆಲೆಗೆ ಸಿಗಲಾರವು.

೬ ವಿಜ್ಞಾಪನೆ:—ಕನ್ನಡ ಭಾಷಾಭಿಮಾನಿಗಳೂ, ದೇಶಾಭಿ
ಮಾನಿಗಳೂ ಈ 'ಶ್ರೀ ಶೇಷಾಚಲ ಗ್ರಂಥಮಾಲೆ'ಗೆ ತಾವು ಸ್ವತಃ
ಕಾಯಂ ಗ್ರಾಹಕರಾಗುವದಲ್ಲದೆ, ತಮ್ಮಿಷ್ಟ-ಮಿತ್ರರನ್ನೂ ಕಾಯಂ
ಗ್ರಾಹಕ ವರ್ಗಕ್ಕೆ ಸೇರಿಸಿ, ಗ್ರಂಥಮಾಲೆಯ ಕಾರ್ಯ-ಕಲಾಪಗಳಿಗೆ
ನೆರವಾಗಬೇಕು. ಈ ಸದ್ಬುದ್ಧಿಯನ್ನು ಶ್ರೀ ಶೇಷಾಚಲ ಸದ್ಗುರುವು
ಸಕಲರಿಗೂ ಕೊಡಲಿ!

ಭಿ. ಪ. ಕಾಳೆ,
ಶ್ರೀ ಶೇ. ಗ್ರಂಥಮಾಲೆ, ಆನಂದವನ